# ಕನ್ನಡ ಸಾಹಿತ್ಯದಲ್ಲಿ ಕೊರವಂಜಿ ಸಂಕಥನ

(ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧನಾ ವಿದ್ಯಾರ್ಥಿನಿ
**ರಾಜೇಶ್ವರಿ ವೀ. ಶೀಲವಂತ**

ಮಾರ್ಗದರ್ಶಕರು
**ಡಾ. ವೀರೇಶ ಬಡಿಗೇರ**
ಪ್ರಾಧ್ಯಾಪಕರು



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬
೨೦೧೫

# ಕನ್ನಡ ಸಾಹಿತ್ಯದಲ್ಲಿ ಕೊರವಂಜಿ ಸಂಕಥನ

(ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)



ಸಂಶೋಧನಾ ವಿದ್ಯಾರ್ಥಿನಿ

**ರಾಜೇಶ್ವರಿ ವೀ. ಶೀಲವಂತ**

ಮಾರ್ಗದರ್ಶಕರು

**ಡಾ. ವೀರೇಶ ಬಡಿಗೇರ**

ಪ್ರಾಧ್ಯಾಪಕರು



**ಹಸ್ತಪ್ರತಿಶಾಸ್ತ್ರ ವಿಭಾಗ**

ಭಾಷಾ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ – ೫೮೩೨೭೬

೨೦೧೫

# ಮಾರ್ಗದರ್ಶಕರ ದೃಢೀಕರಣ ಪತ್ರ

**ಕನ್ನಡ ಸಾಹಿತ್ಯದಲ್ಲಿ ಕೊರವಂಜಿ ಸಂಕಥನ** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಹಸ್ತಪ್ರತಿಶಾಸ್ತ್ರ ವಿಭಾಗದ ಮೂಲಕ **ಶ್ರೀಮತಿ ರಾಜೇಶ್ವರಿ ವೀ. ಶೀಲವಂತ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಮಾರ್ಗದರ್ಶಕರು**

**ಡಾ. ವೀರೇಶ ಬಡಿಗೇರ**
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

ಸ್ಥಳ :
ದಿನಾಂಕ : ೯-೯-೧೫

# ಪ್ರಮಾಣ ಪತ್ರ

**ಕನ್ನಡ ಸಾಹಿತ್ಯದಲ್ಲಿ ಕೊರವಂಜಿ ಸಂಕಥನ** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ **ಡಾ. ವೀರೇಶ ಬಡಿಗೇರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಹಸ್ತಪ್ರತಿ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

R. V. Sheelavant

**ಶ್ರೀಮತಿ ರಾಜೇಶ್ವರಿ ವೀ. ಶೀಲವಂತ**

ಸಂಶೋಧಕರು, ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ- ೫೮೩ ೨೭೬

ಸ್ಥಳ :

ದಿನಾಂಕ : 9.9.2015

## ಪರಿವಿಡಿ

ಅಧ್ಯಾಯ: ೮

ಅಧ್ಯಾಯ ಒಂದು

# ಅಧ್ಯಯನದ ಪರಿಕಲ್ಪನೆ, ಪ್ರಮೇಯ ಹಾಗೂ ಸಮಸ್ಯೆಗಳು

೧.೧. ಅಧ್ಯಯನದ ಪರಿಕಲ್ಪನೆ
೧.೨. ಪ್ರಮೇಯ
೧.೩. ಸಮಸ್ಯೆಗಳು
೧.೪. ಅಧ್ಯಯನದ ವ್ಯಾಪ್ತಿ

## ೧.೧. ಅಧ್ಯಯನದ ಪರಿಕಲ್ಪನೆ

ಪಾರಂಪರಿಕ ಸಮಾಜ ಜಾತಿ ತಾರತಮ್ಯ, ವರ್ಣ ತಾರತಮ್ಯ, ವರ್ಗ ತಾರತಮ್ಯ, ಲಿಂಗ ತಾರತಮ್ಯಗಳ ಗೂಡಾಗಿತ್ತು. ಅಸ್ಪೃಶ್ಯತೆ, ಕಂದಾಚಾರ, ಮೂಢನಂಬಿಕೆಗಳೇ ಸಮಾಜದಲ್ಲಿ ತಾಂಡವಾಡುತ್ತಿದ್ದವು. ಇಂತಹ ಸಮಾಜದಲ್ಲಿ ಕೆಳಜಾತಿಯವರಿಗೆ, ಮಹಿಳೆಯರಿಗೆ ಅಕ್ಷರಜ್ಞಾನ, ಓದು, ಸಾಹಿತ್ಯ ರಚನೆ ಎಂಬುದು ಕನಸಿನಲ್ಲಿಯೂ ಸಹ ಕಲ್ಪಿಸಿಕೊಳ್ಳದ ಅಗೋಚರ ವಸ್ತುವೇ ಆಗಿತ್ತು. ಇನ್ನು ವೈದಿಕ ಸಾಹಿತ್ಯದಲ್ಲಿ ಅವರ ಪಾತ್ರಗಳೇನಾದರು ಬಂದರೆ ಅವು ಕೇವಲ ದಾಸ್ಯತ್ವವನ್ನು, ಅಜ್ಞಾನವನ್ನು ಪ್ರತಿಬಿಂಬಿಸುವ ಪಾತ್ರಗಳಾಗಿರುತ್ತಿದ್ದವೇ ಹೊರತು ಅದನ್ನು ಮೀರಿ ನಿಲ್ಲುತ್ತಿರಲಿಲ್ಲ. ಆದರೆ ಸಮಾಜ ಸುಧಾರಣೆಯ ಉದ್ದೇಶದಿಂದ ಶರಣ, ದಾಸರಿಂದ ಹುಟ್ಟಿಕೊಂಡ ಸಾಹಿತ್ಯಕ ಚಳುವಳಿಗಳು, ಸಾಮಾಜಿಕ ಕ್ರಾಂತಿಗಳು ಸಮಾಜದಲ್ಲಿರುವ ತಾರತಮ್ಯವನ್ನು ನಿವಾರಿಸಿ ಸಮಾನತೆಯನ್ನು ತಂದದ್ದು ಮಾತ್ರವಲ್ಲದೆ, ಸಾಹಿತ್ಯದಲ್ಲಿಯೂ ತಾರತಮ್ಯ ನಿವಾರಿಸಿ, ಸರ್ವರಿಗೂ ಅಕ್ಷರಜ್ಞಾನ, ಓದು, ಸಾಹಿತ್ಯ ರಚನೆಯ ಅವಕಾಶವನ್ನು ಒದಗಿಸಿಕೊಟ್ಟವು. ಇದರಿಂದ ಇದುವರೆಗೂ ಅಕ್ಷರಜ್ಞಾನದಿಂದ ವಂಚಿತರಾಗಿದ್ದ ಕೆಳಜಾತಿಯವರು, ಮಹಿಳೆಯರು ಸಾಹಿತ್ಯ ರಚನೆಯಲ್ಲಿ ತೊಡಗಿದರು. ಜೊತೆಗೆ ಸಾಹಿತ್ಯದಲ್ಲಿ ಅವರ ಪಾತ್ರಗಳು ಮೈ ಪಡೆದು ಕೊಳ್ಳತೊಡಗಿದವು. ಇದುವರೆಗೂ ಉಪೇಕ್ಷಿತವಾಗಿದ್ದ ಇವರು ಇಂದು ನೀತಿ ಭೋದಕರಾಗಿ, ಸಮಾಜ ಸುಧಾರಕರಾಗಿ, ಸಾಂಸ್ಕೃತಿಕ ಹರಿಕಾರರಾಗಿ, ಜ್ಞಾನದ ವಿಸ್ತಾರಕರಾಗಿ ಕಾಣಿಸಿಕೊಳ್ಳತೊಡಗಿದರು. ಸಂಸ್ಕೃತಿಯ ಪೋಷಕರಾಗಿ, ಜ್ಞಾನದ ಆಗರವಾಗಿ, ಸಮಾಜದ ಸಮಸ್ಯೆಗಳಿಗೆ ಸ್ಪಂದಿಸುವ ಗುಣವುಳ್ಳ ಇಂತಹ ಪಾತ್ರಗಳಲ್ಲಿ 'ಕೊರವಂಜಿ'ಯ ಪಾತ್ರವು ಒಂದಾಗಿದೆ. ಕನ್ನಡ ಮಹಿಳಾ ಅನಕ್ಷರಸ್ಥರ ಅಭಿವ್ಯಕ್ತಿಯ ಸ್ವರೂಪವನ್ನು ತಿಳಿಯುವಲ್ಲಿ ಕೊರವಂಜಿ ಸಂಕಥನವು ಮಹತ್ವದ್ದಾಗಿದೆ.

'ಕೊರವಂಜಿ' ಎನ್ನುವ ಪದ ಕೊರವ+ಅಂಜಿ ಎಂಬ ಪದಗಳಿಂದ ಬಂದಿದೆ. 'ಕೊರವ' ಎಂದರೆ ಚಾಪೆ, ಬುಟ್ಟಿ ಮೊದಲಾದವುಗಳನ್ನು ಮಾಡಿ ಮಾರುವ ಹಾಗೂ ಕಣಿಯನ್ನು ಹೇಳುವ

ಒಂದು ಆದಿವಾಸಿ ಜನಾಂಗ. 'ಅಂಜಿ' ಎಂದರೆ 'ಪಾದ' ಅಥವಾ 'ನೃತ್ಯ'. 'ಕೊರವಂಜಿ ಎಂಬ ಪದವು ಶಬ್ದಶಃ ಕೊರವ ಜಾತಿಯವರು ಮಾಡುವ 'ನೃತ್ಯ' ಅಥವಾ 'ಕುಣಿತ' ಎಂಬ ಜನಾಂಗವಾಚಿ ಅರ್ಥವನ್ನು ನೀಡಿದರೂ, 'ಹಾಡುಗಳನ್ನು ಹೇಳುತ್ತಾ ಕಣಿಯನ್ನು ಹೇಳುವ ಹೆಣ್ಣುಮಗಳು' ಎಂಬ ಭಿನ್ನಾರ್ಥವೂ ಕೊರವಂಜಿ ಪದಕ್ಕಿದೆ. ಹಿಂದೆ ಈ ಜನಾಂಗದವರು ಹಬ್ಬ, ಹರಿದಿನ, ಜಾತ್ರೆ, ಉತ್ಸವಗಳಲ್ಲಿ ಹಾಡು ಹೇಳಿ ನೃತ್ಯಮಾಡಿ ಜನರನ್ನು ಮನರಂಜಿಸುವ ಮೂಲಕ ಹಣವನ್ನು ಸಂಪಾದಿಸುತ್ತಿದ್ದರಿಂದ ಇವರನ್ನು 'ಕೊರವಂಜಿ'ಗಳೆಂದು ಕರೆದಿರಬಹುದು. ಈ ಜನಾಂಗದವರು ಚಾಪೆ, ಬುಟ್ಟಿ ಹೆಣೆಯುವ ತಮ್ಮ ಮೂಲ ಕುಲಕಸುಬಿನೊಂದಿಗೆ ಪರಂಪರಾಗತವಾಗಿ ನಡೆಸಿಕೊಂಡು ಬಂದ ಇನ್ನೊಂದು ಕಾಯಕವೆಂದರೆ 'ಕಣಿ ಹೇಳುವುದು'. ಈ ಕಾಯಕವನ್ನು ಮಾಡುವವರು ಈ ಜನಾಂಗದ ಹೆಣ್ಣುಮಕ್ಕಳು. ಆದ್ದರಿಂದ 'ಕೊರವಂಜಿ' ಎಂದರೆ 'ಕಣಿ ಹೇಳುವ ಹೆಣ್ಣುಮಗಳು' ಎಂಬ ಅರ್ಥವೇ ಹೆಚ್ಚು ಸಮಂಜಸವಾಗಿದೆ.

'ಕಣಿ ಹೇಳುವುದು' ಎಂದರೆ 'ಶಕುನ' ಅಥವಾ 'ಭವಿಷ್ಯವನ್ನು ಹೇಳುವುದು'. ಕೊರವ ಜನಾಂಗದ ಹೆಣ್ಣುಮಕ್ಕಳು ರೂಢಿಗತ 'ಹಸ್ತಸಾಮುದ್ರಿಕಾಶಾಸ್ತ್ರ'ವನ್ನು ಬಲ್ಲವರಾಗಿರುತ್ತಾರೆ. ಭವಿಷ್ಯ ಕೇಳಬೇಕೆನ್ನುವ ವ್ಯಕ್ತಿಗಳ ಕೈಯಲ್ಲಿರುವ ರೇಖೆಗಳನ್ನು ನೋಡಿ ಅದರ ಆಧಾರದ ಮೇಲೆ ಆ ವ್ಯಕ್ತಿಗಳ ಭೂತ, ವರ್ತಮಾನ, ಭವಿಷ್ಯದ ಆಗುಹೋಗುಗಳನ್ನು ತಿಳಿಸುತ್ತಾರೆ. ಕೆಲವೊಮ್ಮೆ ಕವಡೆಗಳನ್ನು ಹಾಕುವ ಮೂಲಕವೂ ಭವಿಷ್ಯವನ್ನು ನುಡಿಯುತ್ತಾರೆ. ಇವರು ಜನನ, ವಿದ್ಯೆ, ಮದುವೆ, ಮಕ್ಕಳು, ಅಧಿಕಾರ ಕೌಟುಂಬಿಕ ಸಮಸ್ಯೆ ಹೀಗೆ ಈ ಎಲ್ಲ ವಿಷಯಗಳನ್ನು ಕುರಿತು ಭವಿಷ್ಯವನ್ನು ಹೇಳುತ್ತಾರೆ. ಈ ಪ್ರಕ್ರಿಯೆ 'ಕಣಿ' ಎನಿಸಿಕೊಳ್ಳುತ್ತದೆ.

'ಕಣಿ' ಹೇಳುವ ಕೊರವಂಜಿಯರು (ಕೊರವ ಹೆಣ್ಣು ಮಗಳು) ಧರಿಸಿರುವ ವೇಷಭೂಷಣಗಳು, ಆಭರಣಗಳು ವೈಶಿಷ್ಟ್ಯಪೂರ್ಣವೂ, ಆಕರ್ಷಕವೂ ಆಗಿರುತ್ತವೆ. ಈ ಹೆಣ್ಣುಮಕ್ಕಳು ಪಾದದ ವರೆಗೆ ಸೀರೆಯನ್ನು ಉಡದೆ ಮೊಣಕಾಲು ದಾಟುವ ವರೆಗೆ ಮಾತ್ರ ಸೀರೆಯನ್ನುಟ್ಟಿರುತ್ತಾರೆ. ಕೊರಳಲ್ಲಿ ವಿವಿಧ ಬಗೆಯ ಮಣಿ, ಹವಳಗಳ ಸರಗಳನ್ನು ಧರಿಸಿರುತ್ತಾರೆ. ಕೂದಲನ್ನು ಗಂಟುಹಾಕಿ ಬೆನ್ನ ಮೇಲೆ ಹರಡಿಬಿಟ್ಟು ಅದಕ್ಕೆ ಬಗೆಬಗೆಯ ಹೂವುಗಳು, ಕೇದಿಗೆ, ಮಣಿಗಳಿಂದ ಅಲಂಕಾರ ಮಾಡಿಕೊಂಡಿರುತ್ತಾರೆ. ಹಣೆ, ಗಲ್ಲ, ಕೈಗಳ ಮೇಲೆ ಹಚ್ಚೆಯನ್ನು ಹಾಕಿಸಿಕೊಂಡಿರುತ್ತಾರೆ. ಕಣಿ ಹೇಳಲು ಬರುವಾಗ ತಲೆಯ ಮೇಲೆ ಒಂದು ಬುಟ್ಟಿಯನ್ನು ಕೈಯಲ್ಲಿ ಒಂದು ಶಕುನದ ಕೋಲಿರುತ್ತದೆ. ಅದನ್ನು ಅವರು 'ಮಂತ್ರದಂಡ'ವೆಂದು ಕರೆಯುತ್ತಾರೆ. 'ಕೊರವಂಜಿ' ತನ್ನ ಜೊತೆಗೆ ತಂದ ಬುಟ್ಟಿ ಅವಳು ಕಣಿ ಹೇಳುವವಳು ಎಂಬುದನ್ನು ಸೂಚಿಸಿದರೆ, ಮರಳಿ ಹೋಗುವಾಗ ಕಣಿ ಕೇಳಿದವರು ಅವಳಿಗೆ ಕಾಣಿಕೆಯಾಗಿ ಕೊಟ್ಟ ವಸ್ತುಗಳನ್ನು ಸಂಗ್ರಹಿಸುವ ಪರಿಕರವಾಗಿರುತ್ತದೆ. ಕೈಯಲ್ಲಿರುವ ಮಂತ್ರದ ಕೋಲು ಅವಳು ಭವಿಷ್ಯವನ್ನು ಹೇಳುವ ಸಾಧನವಾಗಿರುತ್ತದೆ. ಕಣಿ ಹೇಳುವ ಕೊರವಿಗೆ ಕೈಗೂಸು (ಚಿಕ್ಕಮಗು) ಇದ್ದರೆ ಅದನ್ನು ಅವಳು ಬಗಲಲ್ಲಿ ಎತ್ತಿಕೊಂಡೋ ಅಥವಾ ಬೆನ್ನಿಗೆ ಕಟ್ಟಿಕೊಂಡೋ ಬಂದಿರುತ್ತಾಳೆ.

ಕಾಲಕ್ಕೆ ತಕ್ಕಂತೆ ಕೊರವಂಜಿಯರ ವೇಷಭೂಷಣಗಳು ಬದಲಾಗಿವೆ. ಇವತ್ತು ಕೊರವಂಜಿಯರು ಸಾಮಾನ್ಯ ಮಹಿಳೆಯರಂತೆ ಪಾದದವರೆಗೆ ಸೀರೆ ಉಡುತ್ತಾರೆ. ಹವಳ ಮಣಿ ಸರಗಳನ್ನು ಧರಿಸುವುದಿಲ್ಲ. ಇತರ ಕೆಳವರ್ಗದ ಮಹಿಳೆಯರಂತೆಯೇ ಸರಳವಾದ ವೇಷಭೂಷಣ ತೊಡುತ್ತಾರೆ. ಸಾಹಿತ್ಯ ಕೃತಿಗಳಲ್ಲಿ ವರ್ಣಿತವಾದಂತೆ, ಪಾರಿಜಾತದಂತಹ ಆಟಗಳಲ್ಲಿ ಬಳಸುವಂತೆ ಇವತ್ತು ಕೈಯಲ್ಲಿ ಯಾವುದೇ ರೀತಿಯ ಮಂತ್ರದಂಡವನ್ನು ಬಳಸುವುದಿಲ್ಲ. ಬದಲಾಗಿ ಕಣಿ ಕೇಳುವವರ ಮುಖಲಕ್ಷಣ, ಕೈ ನೋಡಿ ಕವಡೆ ಅಕ್ಕಿ ಕಾಳುಗಳನ್ನು ಹಾಕುವ ಮೂಲಕ ಅವರ ಭವಿಷ್ಯ ತಿಳಿಸುತ್ತಾರೆ.

ಇಂತಹ ವಿಶಿಷ್ಟವಾದ ವೇಷಭೂಷಣ, ಆಭರಣಗಳನ್ನು ತೊಟ್ಟುಕೊಂಡ ಕೊರವಂಜಿ 'ಕಣಿಯಮ್ಮಾ ಕಣಿ, ಕೊರವಂಜಿ ಕಣಿ ಹೇಳ್ತಾಳಮ್ಮಾ, ಕಣಿ ಯವ್ವಾ ಕಣಿ, ಯಕ್ಕಾ ಕಣಿ' ಎಂದು ರಾಗಬದ್ಧವಾಗಿ ಹಾಡುತ್ತ ಬರುತ್ತಾಳೆ. ವಿಶೇಷವಾಗಿ ಹೆಣ್ಣುಮಕ್ಕಳನ್ನು ಆತ್ಮೀಯತೆಯಿಂದ ಸಂಭೋಧಿಸುತ್ತಾ, ತಾನು ಬಂದಿರುವ ಊರಿನ ಓಣಿ-ಓಣಿ, ಕೇರಿ-ಕೇರಿಗಳನ್ನು ಸುತ್ತುತ್ತಾಳೆ. ಯಾರಾದರೂ ಭವಿಷ್ಯ ಕೇಳಬೇಕೆನ್ನುವವರು ಕಣಿ ಕೇಳಲು ಇವಳನ್ನು ಕರೆದರೆ ಸಾಕು, ಆತ್ಮೀಯತೆಯಿಂದ ಅವರ ಮನೆಗೆ ಬಂದು ಪದ್ಧತಿ ಪ್ರಕಾರ ಕಣಿ ಹೇಳುತ್ತಾಳೆ.

'ಕೊರವಂಜಿ' ಕಣಿ ಹೇಳುವ ರೀತಿಯೂ ಅಷ್ಟೇ ಮನೋಹರವಾದದ್ದು. ಕಣಿ ಕೇಳುವವರ ಮನೆ ಪ್ರವೇಶಿಸಿದ ಕೊರವಂಜಿ ಕಣಿ ಕೇಳುವವರ ಹೊರಚಾವಡಿಯಲ್ಲಿಯೋ, ಪಡಸಾಲೆಯಲ್ಲಿಯೋ ಪದ್ಮಾಸನ ಹಾಕಿ ಕುಳಿತುಕೊಳ್ಳುತ್ತಾಳೆ. ಕಣಿ ಕೇಳುವವರ ಹೆಸರು, ಅವರು ಯಾವುದರ ಬಗ್ಗೆ ಕಣಿ ಕೇಳಬೇಕಾಗಿದೆ ಎಂಬುದನ್ನು ವಿಚಾರಿಸುತ್ತಾ, ಭವಿಷ್ಯ ಕೇಳುವವರ ಕೈಯನ್ನು ತನ್ನ ಎಡಗೈಯಲ್ಲಿಯೂ ತಾನು ತಂದ ಮಂತ್ರದಂಡವನ್ನು ತನ್ನ ಬಲಗೈಯಲ್ಲಿಯೂ ಹಿಡಿದುಕೊಳ್ಳುತ್ತಾಳೆ. ತನ್ನ ಮಂತ್ರದಂಡವನ್ನು ಕೇಳುವವರ ಕೈ ಮೇಲೆ ಆಡಿಸುತ್ತಾ ಭವಿಷ್ಯ ನುಡಿಯತೊಡಗುತ್ತಾಳೆ. ಕಣಿ ಹೇಳಲು ಪ್ರಾರಂಭಿಸುವ ಮುನ್ನ ಕೊಲ್ಲಾಪುರ ಮಹಾಲಕ್ಷ್ಮಿ, ಸವದತ್ತಿ ಯಲ್ಲಮ್ಮ, ಶಿರಸಿ ಮಾರಿಕಾಂಬಾ, ಸನ್ನತಿ ಚಂದ್ರಮ್ಮ ಮುಂತಾದ ಆಸುಪಾಸಿನ ಸುಪ್ರಸಿದ್ಧ ಹೆಸರು ಮಾಡಿದ ಸ್ತ್ರೀ ದೇವತೆಗಳನ್ನು ಸ್ತುತಿಸಿ, 'ಅವರು ನನ್ನ ನಾಲಿಗೆಯ ಮೇಲೆ ನೆಲೆಸಿ, ನನ್ನ ನಾಲಿಗೆಯ ಮುಖಾಂತರ ಕೇಳುವವರ ಭವಿಷ್ಯ ನುಡಿಸಲಿ' ಎಂದು ಪ್ರಾರ್ಥಿಸುತ್ತಾಳೆ. ನಂತರ ಅವರ ಹಸ್ತರೇಖೆಯನ್ನು ನೋಡಿ ಅವರ ಭವಿಷ್ಯವನ್ನು ನುಡಿಯುತ್ತಾಳೆ. ಕೆಲವೊಂದು ಸಂದರ್ಭದಲ್ಲಿ ಕವಡೆ ಹಾಕಿ, ಕವಡೆ ಬಿದ್ದ ಅಂಕಿಯ ಮೇಲೆ ಭವಿಷ್ಯವನ್ನು ನುಡಿಯುತ್ತಾಳೆ. ಕಣಿ ಹೇಳಿರುವುದು ತಾನಲ್ಲ, ತನ್ನ ನಾಲಿಗೆಯಲ್ಲಿ ನೆಲೆಸಿರುವ ದೇವತೆಗಳು. ಆದ್ದರಿಂದ ತಾನು ಹೇಳುವ ಕಣಿ ಸುಳ್ಳಾಗುವುದಿಲ್ಲ ಎಂಬ ನಂಬಿಕೆ ಈ ಕೊರವಂಜಿಯದು. ಈ ನಂಬಿಕೆಯನ್ನು ಕೇಳುಗರಲ್ಲಿಯೂ ಹುಟ್ಟಿಸುವ ಜಾಣತನವನ್ನೂ ಆಕೆ ಪ್ರದರ್ಶಿಸುತ್ತಾಳೆ. ಹೀಗೆ ಕಣಿ ಹೇಳುವ ಸಂದರ್ಭದಲ್ಲಿಯೇ ಆ ಮನೆ ಹೆಣ್ಣುಮಕ್ಕಳ ಸುಖ, ದುಖಃಗಳನ್ನು ವಿಚಾರಿಸುತ್ತಾಳೆ. ಅವರಲ್ಲಿ ಕೌಟುಂಬಿಕ ಕಲಹಗಳು ಅಥವಾ ಏನಾದರೂ ಸಮಸ್ಯೆಗಳಿದ್ದರೆ ಅದನ್ನು ಪರಿಹರಿಸಲು ಯತ್ನಿಸುತ್ತಾಳೆ.

ಹೀಗೆ ಭವಿಷ್ಯ ಹೇಳುವ 'ಕೊರವಿ' ತಾನು ಹೇಳಿದ ಕಣಿಗೆ ಪ್ರತಿಫಲವಾಗಿ ಕೇಳುವುದು ಅತ್ಯಂತ ಸಾಮಾನ್ಯವಾದ ವಸ್ತುಗಳನ್ನು ಮಾತ್ರ. ತನ್ನ ದಿನನಿತ್ಯದ ಅಡುಗೆಗೆ ಬೇಕಾದ ಸಾಸಿವೆ, ಜೀರಿಗೆಯನ್ನೋ, ಉಣ್ಣಲು ರೊಟ್ಟಿಯನ್ನೋ, ತನ್ನ ಮಗುವನ್ನು ಎರೆಯಲು, ಎಣ್ಣೆಯನ್ನೋ ಅಥವಾ ವಿಳ್ಯದೆಲೆ ತಾಂಬೂಲವನ್ನು. ತನ್ನ ಬದುಕಿಗೆ ಅವಶ್ಯಕವಾದ ವಸ್ತುಗಳನ್ನು ಕೇಳುತ್ತಾಳೆಯೇ ಹೊರತು ಯಾವ ಐಷಾರಾಮಿ ವಸ್ತುಗಳನ್ನಲ್ಲ. ಅವರು ಸಂತೋಷದಿಂದ ಕೊಟ್ಟರೆ ಇಸಿದುಕೊಳ್ಳುತ್ತಾಳೆ ಹೊರತು ಕಾಡಿಬೇಡುವುದಿಲ್ಲ. ಹೀಗೆ ತಾನು ಕೇಳಿ ಪಡೆದ ವಸ್ತುಗಳನ್ನು ತನ್ನ ಬುಟ್ಟಿಯಲ್ಲಿ ತುಂಬಿದ ಕೊರವಂಜಿ ಮತ್ತೆ ರಾಗಬದ್ಧವಾಗಿ 'ಕಣಿಯಮ್ಮಾ ಕಣಿ' ಎಂದು ಹೇಳುತ್ತಾ ಮುಂದಿನ ಮನೆ, ಮುಂದಿನ ಓಣಿಯತ್ತ ತನ್ನ ಪ್ರಯಾಣ ಬೆಳೆಸುತ್ತಾಳೆ.

ಕಣಿ ಹೇಳುವ ಈ ಕೊರವಂಜಿಯರು ಅಗಾಧವಾದ ಜ್ಞಾನಭಂಡಾರವನ್ನು ತಮ್ಮಲ್ಲಿ ಹೊತ್ತಿರುತ್ತಾರೆ. ಬ್ರಹ್ಮಾಂಡ, ಖಂಡ, ದ್ವೀಪ, ದೇವಲೋಕ, ಪಾತಾಳಲೋಕ ಹೀಗೆ ಎಲ್ಲವುಗಳ ಜ್ಞಾನವನ್ನು ಪಡೆದುಕೊಂಡಿರುತ್ತಾಳೆ. ಜೊತೆಗೆ ಈ ಕೊರವಂಜಿಯು ನೊಂದ ಹೆಣ್ಣುಮಕ್ಕಳ ಕಥೆಯನ್ನು ಕೇಳುವ, ಅವರ ಕಣ್ಣೀರೊರೆಸಿ ಸಮಾಧಾನ ಮಾಡುವ, ಅವರ ಸಮಸ್ಯೆಗಳಿಗೆ ಪರಿಹಾರ ಸೂಚಿಸುವ ಸಾಮಾಜಿಕ ಕಾರ್ಯಗಳನ್ನು ಮಾಡುತ್ತಾರೆ. ಕೆಲ ಸಂದರ್ಭದಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸುದ್ದಿಯನ್ನು ಮುಟ್ಟಿಸುವ ಸಂಚಾರಿ ಮಾಧ್ಯಮದ ಪಾತ್ರವನ್ನು ಇವರು ನಿರ್ವಹಿಸುತ್ತಾರೆ. ಹೀಗಾಗಿ ಕೊರವಂಜಿ ಅಧ್ಯಯನವು ವಿಶಿಷ್ಟ ರೀತಿಯೆನಿಸುತ್ತದೆ.

### ೧.೨. ಪ್ರಮೇಯ

ಕನ್ನಡ ಸಾಹಿತ್ಯದಲ್ಲಿ ಚಿತ್ರಿತವಾದ ಕೊರವಂಜಿಯ ನಡೆಗಳನ್ನು ಅಧ್ಯಯನ ಮಾಡುವುದು ನನ್ನ ಮುಖ್ಯ ಉದ್ದೇಶವಾಗಿದೆ. 'ಕೊರವಂಜಿಯರು' ಕನ್ನಡ ಸಾಹಿತ್ಯ ಕೃತಿಗಳಲ್ಲಿ ಅಮೂರ್ತವಾಗಿ ಕೇವಲ ಪಾತ್ರಗಳಾಗಿ ಮಾತ್ರ ಬರದೆ, ಅವರ ಹೆಸರನ್ನು ಶೀರ್ಷಿಕೆಯಾಗಿ ಹೊತ್ತ ಕೃತಿಗಳು ರಚನೆಯಾಗುವ ಮೂಲಕ ಸಾಹಿತ್ಯದಲ್ಲಿ ಕೊರವಂಜಿಯರಿಗೆ ವಿಶಿಷ್ಟಸ್ಥಾನ ಸಂದಿದೆ. ಪ್ರಸನ್ನವೆಂಕಟದಾಸರ 'ನಾರದ ಕೊರವಂಜಿ' (ಗೀತನಾಟ), ಹೆಳವನಕಟ್ಟೆ ಗಿರಿಯಮ್ಮನ 'ಬ್ರಹ್ಮಕೊರವಂಜಿ', 'ಕೃಷ್ಣಕೊರವಂಜಿ', ವಾದಿರಾಜರ 'ನಾರದ ಕೊರವಂಜಿ', ಮುಮ್ಮಡಿಕೃಷ್ಣರಾಜರ 'ಪ್ರಸನ್ನ ಕೃಷ್ಣ ಕೊರವಂಜಿ ಕಥೆ' (ಯಕ್ಷಗಾನ), ರಾಯಣ್ಣನ 'ಪದ್ಮಾವತಿ ಕೊರವಂಜಿ' (ಯಕ್ಷಗಾನ), ಚಂದ್ರಸಾಗರವರ್ಣಿಯ 'ಮನ್ಮಥ ಕೊರವಂಜಿ' (ಯಕ್ಷಗಾನ), ಗೋವಿಂದ ವೆಂಕಟಕವಿಯ 'ಪಾರ್ವತಿ ಕೊರವಂಜಿ' (ಯಕ್ಷಗಾನ), ಅನಂಥನಾಥ ಕವಿಯ 'ಮನ್ಮಥ ಕೊರವಂಜಿ', ಅನಾಮಧೇಯ ಕವಿಯ 'ಕರ್ನಾಟಕ ಕೊರವಂಜಿ' ಕೃತಿಗಳು ಕೊರವಂಜಿ ಎಂಬ ಶೀರ್ಷಿಕೆಯನ್ನು ಹೊತ್ತ ಪ್ರಮುಖ ಪದ್ಯಗಳಾಗಿವೆ. ಅದರಂತೆ 'ಶ್ರೀಕೃಷ್ಣಪಾರಿಜಾತ', ಸಂಗ್ಯಾಬಾಳ್ಯಾ ಸಣ್ಣಾಟ, ಅನೇಕ ಯಕ್ಷಗಾನ, ನಾಟಕ ಕೃತಿಗಳಲ್ಲಿ 'ಕೊರವಂಜಿ' ಪಾತ್ರವಾಗಿ ಬರುವುದು ವಿಶೇಷ. ಹೀಗೆ ಜಾನಪದ ಬದುಕಲ್ಲಿ ಈ ಎರಡೂ ನೆಲೆಗಳಿಗಿಂತ ಭಿನ್ನವಾದ ಜೀವಂತ ಕೊರವಂಜಿ ಮತ್ತೊಂದು ವಿಶೇಷ.

ಕೊರವಂಜಿ ಜಾತಿಯಲ್ಲಿ ಕೀಳು ಕುಲದವಳು, ಆದಿವಾಸಿಯಾಗಿದ್ದರೂ ಈ ಎಲ್ಲ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಅವಳು ತನ್ನ ಕುಲವನ್ನು ಮರೆಮಾಚುವಂತೆ ದಿವ್ಯ ಪಂಡಿತಳಾಗಿ, ಅಗಾಧ ಪ್ರತಿಭಾವಂತಳಾಗಿ ಚಿತ್ರಿತವಾಗಿದ್ದಾಳೆ. ವಿದ್ಯೆ ಬುದ್ಧಿಯಲ್ಲಿ ಅಸಾಮಾನ್ಯಳಾದ ಇವಳು ಅಂಡಾಂಡ ಬ್ರಹ್ಮಾಂಡ, ಪಿಂಡಾಂಡದ ಅಷ್ಟದಿಕ್ಪಾಲಕರು, ಈರೇಳುಲೋಕಗಳು, ಛಪ್ಪನ್ನಾರು ದೇಶಗಳು ಹೀಗೆ ಭೂಗೋಳದ ಒಳಹೊರಗನ್ನು ಬಲ್ಲ ಲೋಕಜ್ಞಾನಿಯಾಗಿ ಕಾಣುತ್ತಾಳೆ. ಹಸ್ತಸಾಮುದ್ರಿಕಾಶಾಸ್ತ್ರ, ಶಕುನ, ಯೌವನವನ್ನು ಮರಳಿ ತರುವಂಥ, ರೋಗಗಳನ್ನು ನಿವಾರಿಸುವಂಥ ಮದ್ದುಗಳನ್ನು ಬಲ್ಲ ಪಂಡಿತಳಾಗಿ, ಮಾಟಮಂತ್ರಗಳನ್ನು ತೆಗೆಯುವ ಯಕ್ಷಿಣಿವಿದ್ಯೆ ತಜ್ಞ, ಹಕ್ಕಿಗಳು ನುಡಿಯುವ ಮಾತನ್ನು ತಿಳಿಯಬಲ್ಲ ಪಕ್ಷಿ ತಜ್ಞಳಾಗಿ, ಭೂತ, ವರ್ತಮಾನ, ಭವಿಷ್ಯವನ್ನು ತಿಳಿಸುವುದರೊಂದಿಗೆ ಭವಿಷ್ಯದಲ್ಲಿರುವ ಸಮಸ್ಯೆಗಳಿಗೆ ಪರಿಹಾರ ತಿಳಿಸುವ ಕಾಲಜ್ಞಾನಿಯಾಗಿ ಬಹುರೂಪಿಯಾಗಿ ಕಾಣುತ್ತಾಳೆ.

ವಿಶೇಷವಾಗಿ ಹೆಂಗಸರ ಸಮಸ್ಯೆಗಳನ್ನು ನಿವಾರಿಸುವಲ್ಲಿ ಕೊರವಂಜಿ ಅಂತಃಕರಣಯುಕ್ತ ಮನಃಶಾಸ್ತ್ರಜ್ಞೆಯಾಗಿ ಗೋಚರಿಸುತ್ತಾಳೆ. ನೊಂದ ಹೆಣ್ಣು ಮಕ್ಕಳ ಗೋಳಿನ ಕಥೆಯನ್ನು ಕೇಳುವ, ಅವರ ನೋವಿಗೆ ಸಾಂತ್ವನ ಹೇಳಿ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸುತ್ತಾಳೆ. ದುಃಖವನ್ನು ತೋಡಿಕೊಳ್ಳುವ ಹೆಣ್ಣು ಮಕ್ಕಳಲ್ಲಿ ಶ್ರೀಮಂತರು, ಬಡವರು ಎಂಬ ಭೇದಭಾವವಿಲ್ಲ. ಸಾಮಾನ್ಯ ಮಹಿಳೆಯಿಂದ ಹಿಡಿದು ರಾಣಿ–ಮಹಾರಾಣಿಯರು, ದೇವತಾ ಸ್ತ್ರೀಯರು ಆದಿಯಾಗಿ ತಮ್ಮ ದುಃಖವನ್ನು ಇವಳಲ್ಲಿ ತೋಡಿಕೊಂಡಿದನ್ನು ಸಾಹಿತ್ಯ ಹಾಗೂ ಕಲಾ ಕೃತಿಗಳಲ್ಲಿ ಕಾಣಬಹುದು.

ದೇವತೆಗಳ ಅನುಗ್ರಹದಿಂದ ಕಣಿ ಹೇಳುವ ಕೊರವಂಜಿ ದೇವತಾ ಸ್ತ್ರೀಯೇ ಆಗಿದ್ದಾಳೆ. 'ಶ್ರೀಕೃಷ್ಣಪಾರಿಜಾತ'ದಲ್ಲಿ ದೇವನಾದ 'ಕೃಷ್ಣ'ನು ಕೊರವಂಜಿಯ ರೂಪ ಧರಿಸಿ ಬಂದರೆ, 'ಬ್ರಹ್ಮಕೊರವಂಜಿ'ಯಲ್ಲಿ ಬ್ರಹ್ಮನು 'ಕೊರವಂಜಿಯಾಗಿ ಕಂಸನ ಸೆರೆಮನೆಯಲ್ಲಿದ್ದ ದೇವಕಿಗೆ ಶ್ರೀಕೃಷ್ಣನ ಜನನದ ಕಥೆಯನ್ನು ಹೇಳುತ್ತಾಳೆ. ದೇವತಾಪುರುಷ 'ಶ್ರೀಕೃಷ್ಣ'ನ ದಾಂಪತ್ಯದಲ್ಲಿ ಬಿಕ್ಕಟ್ಟು ತಲೆದೋರಿದಾಗ ಆ ಸಮಸ್ಯೆಯನ್ನು ನಿವಾರಿಸುವವಳು ಈ ಸಾಮಾನ್ಯ ಕೊರವಂಜಿಯೇ. ಹೀಗೆ ಸಾಮಾನ್ಯ ಕೊರವಂಜಿಯೊಬ್ಬಳು ಅಸಾಮಾನ್ಯಳಾಗಿ ರೂಪುಗೊಳ್ಳುವ ಈ ಕ್ರಿಯೆ ಸಂಸ್ಕೃತಿ ಅಧ್ಯಯನದ ದೃಷ್ಟಿಯಿಂದ ಮಹತ್ವದ್ದಾಗಿದೆ.

ಕೊರವಂಜಿಯ ಪಾತ್ರದ ಮೂಲಕ ಸಮಕಾಲೀನ ಸಾಮಾಜಿಕ ಜೀವನವನ್ನು ನಮ್ಮ ಸಂಸ್ಕೃತಿಯ ಶ್ರೀಮಂತಿಕೆಯನ್ನು ಕಟ್ಟಿಕೊಳ್ಳಬಹುದು. ಕೊರವಂಜಿಯ ಆಚರಣೆಗಳು, ವೇಷಭೂಷಣಗಳು, ದೈವನಂಬಿಕೆಗಳು, ಆಚಾರ–ವಿಚಾರಗಳು, ರೀತಿ–ನೀತಿಗಳು, ಅವಳು ಬಳಸುವ ಪರಿಕರಗಳು ಇಂಥ ಸಂಸ್ಕೃತಿಯ ವಿಶಿಷ್ಟ ಅಧ್ಯಯನಕ್ಕೆ ದಾರಿ ಮಾಡಿಕೊಡುತ್ತವೆ. ಹಾಗೇಯೆ ಅವಳು ತನ್ನ ಕಾರ್ಯಕ್ಕೆ ಪ್ರತಿಫಲವಾಗಿ ಕೇಳುವ ವಸ್ತುಗಳು ಅವಳಲ್ಲಿರುವ ಸರಳತೆಯನ್ನು, ಅವಳ ದಿನಬದುಕಿನ ಅಗತ್ಯವನ್ನು ಹೇಳುತ್ತವೆ. ಅಲ್ಲದೆ ನಮ್ಮ ಸಮಾಜದಲ್ಲಿರುವ ದಾನ, ಕರುಣೆ, ಅನುಕಂಪದಂತಹ ಮಾನವೀಯ ಗುಣಗಳನ್ನು ತಿಳಿಸಿಕೊಡುತ್ತವೆ. ಇಂಥಲೆಲ್ಲ ಕೊರವಂಜಿ ಸಂಸ್ಕೃತಿಯ ಪ್ರತಿಬಿಂಬವಾಗಿ ಕಂಡುಬರುತ್ತಾಳೆ.

## ೧.೩. ಸಮಸ್ಯೆಗಳು

ಇಂದಿನ ಆಧುನಿಕ ವಸಾಹತೀಕರಣ, ಜಾಗತೀಕರಣ, ವಾಣಿಜ್ಯೀಕರಣ, ವ್ಯಾಪಾರೀಕರಣ ಪ್ರವೃತ್ತಿಗಳು ಅನ್ಯಸಂಸ್ಕೃತಿಯೊಂದಿಗೆ ನಮ್ಮ ಬದುಕನ್ನು ಪ್ರವೇಶಿಸಿವೆ. ಈ ಅನ್ಯಸಂಸ್ಕೃತಿಯ ಮೋಹಕ್ಕೆ ಒಳಗಾದ ನಮ್ಮ ಜನ ತಮ್ಮ ಸಂಸ್ಕೃತಿಯನ್ನು ಮರೆಯುತ್ತಿದ್ದಾರೆ. ಇದರಿಂದ ಸಮಾಜ, ಸಂಸ್ಕೃತಿಯಲ್ಲಿರುವ ಎಷ್ಟೋ ವಿಶಿಷ್ಟ ಸಂಪ್ರದಾಯಗಳು, ಆಚರಣೆಗಳು, ರೀತಿ–ರಿವಾಜುಗಳು ಹಂತ ಹಂತವಾಗಿ ಕಣ್ಮರೆಯಾಗುತ್ತಿವೆ. ಹೀಗೆ ಕಣ್ಮರೆಯಾಗುತ್ತಿರುವ ಬಹುದೊಡ್ಡ ಸಂಪ್ರದಾಯಗಳಲ್ಲಿ 'ಕೊರವಂಜಿ' ಸಂಪ್ರದಾಯವು ಒಂದಾಗಿದೆ. ಭಾರತೀಯ ಹಾಗೂ ಕನ್ನಡ ಸಾಹಿತ್ಯ ಸಂಸ್ಕೃತಿಗಳಲ್ಲಿ, ಲೋಕಜ್ಞಾನಿಯಾಗಿ, ದೇವತಾ ಸ್ತ್ರೀಯಾಗಿ, ಜ್ಞಾನದ ನಿಧಿಯಾಗಿ, ಸಂಸ್ಕೃತಿಯ ಹರಿಕಾರಳಾಗಿ, ಜಾನಪದ ಆಚರಣೆಯ ಕಣಜವಾಗಿ, ಮಾನವ ಸಂಬಂಧಗಳ ವಿಸ್ತಾರಕಳಾಗಿ ಹತ್ತು ಹಲವಾರು ರೂಪಗಳಲ್ಲಿ ಗೋಚರಿಸಿದ 'ಕೊರವಂಜಿ' ಇಂದು ನಮ್ಮ ದೇಸಿ ಸಂಸ್ಕೃತಿಯಿಂದ ದೂರವಾಗುತ್ತಿದ್ದಾಳೆ. ಸಮಾಜದಲ್ಲಿ ಚಾಲ್ತಿಯಿರುವ ಜಾತಿ ಹಾಗೂ ಲಿಂಗಬೇಧದ ಕಾರಣದಿಂದ ಮಹಿಳೆ ಅನಾದರಕ್ಕೆ ಒಳಗಾದ ವೇಳೆಯಲ್ಲಿಯೇ ಅದಕ್ಕೆ ತದ್ವಿರುದ್ಧವಾಗಿ ಮೂಡಿಬಂದು ಭಾರತೀಯ ಹಾಗೂ ಕನ್ನಡ ಸಾಹಿತ್ಯ ಸಂಸ್ಕೃತಿಗಳನ್ನು ಆವರಿಸಿಕೊಂಡಿರುವ 'ಕೊರವಂಜಿ'ಯ ಅಧ್ಯಯನ ಇಂದು ಬಹಳ ಅವಶ್ಯಕವಾಗಿದೆ. 'ಕೊರವಂಜಿ'ಯ ಸಂಪೂರ್ಣವಾದ ಅಧ್ಯಯನ ಇದೂವರೆಗೂ ನಡೆದಿಲ್ಲ. ಮರೆಯಾಗುತ್ತಿರುವ ಈ 'ಕೊರವಂಜಿ' ಸಂಪ್ರದಾಯವನ್ನು ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಗಳ ಮೂಲಕ ಮರಳಿ ಕಟ್ಟಿಕೊಡಬೇಕೆಂಬ ಉದ್ದೇಶದಿಂದ 'ಕನ್ನಡ ಸಾಹಿತ್ಯದಲ್ಲಿ ಕೊರವಂಜಿ ಸಂಕಥನ' ಎಂಬ ವಿಷಯವನ್ನು ನನ್ನ ಪಿ.ಎಚ್.ಡಿ ಮಹಾಪ್ರಬಂಧದ ಅಧ್ಯಯನದ ವಿಷಯವಾಗಿ ಆಯ್ಕೆಮಾಡಿಕೊಂಡಿದ್ದೇನೆ. ಇದೊಂದು ಕೇವಲ ನಶಿಸಿ ಹೋಗುತ್ತಿರುವ ಸಂಪ್ರದಾಯವೆಂದು ಅಧ್ಯಯನ ಮಾಡದೇ ಭಾರತೀಯ ಕನ್ನಡ ಸಾಹಿತ್ಯ ಸಂಸ್ಕೃತಿಗಳಲ್ಲಿ ಕೆಳವರ್ಗದ ಅನಕ್ಷರಸ್ಥರ ಹೆಣ್ಣು ಸಂಕಥನದ ವಿವಿಧ ಮಾದರಿಗಳನ್ನು ಗುರುತಿಸಿಕೊಳ್ಳುವುದು. ಈ ಗುರುತಿಸುವಿಕೆಗೆ ಒಂದು ಶೈಕ್ಷಣಿಕ ಅಗತ್ಯ ಹಾಗೂ ವ್ಯಾಪ್ತಿ ಇದ್ದಾಗಲೂ ಅದನ್ನು ಮೀರಿ ಅಶೈಕ್ಷಣಿಕ(ನಾನ್ ಅಕಾಡೆಮಿಕ್) ನೆಲೆಗಳಿಂದಲೂ ಕೊರವಂಜಿ ಸಂಕಥನವನ್ನು ಅರ್ಥಮಾಡಿಕೊಳ್ಳುವುದು ನನ್ನ ಪ್ರಧಾನ ಉದ್ದೇಶ ಕೂಡ ಆಗಿದೆ. ಕೊರವಂಜಿ ಸಂಕಥನದ ಭಿನ್ನ ಮಾದರಿಗಳು ದೊರೆಯುವುದೇ ಶೈಕ್ಷಣಿಕ ವಲಯದ ಹೊರಗೆ ಎನ್ನುವುದು ಬಹುಮುಖ್ಯ ವಿಚಾರ.

ಸಾಂಪ್ರದಾಯಿಕ ಸಮಾಜ ಹೆಣ್ಣಿನ ಮೇಲೆ ಹೇರಿದ ಎಲ್ಲ ಹಂಗನ್ನು ಹರಿದು ತನ್ನ ವ್ಯಕ್ತಿತ್ವ ಕಟ್ಟಿಕೊಳ್ಳುವ ಕೊರವಂಜಿಯಂಥ ಪಾತ್ರ ಹೆಣ್ಣಿನ ಸ್ವಾಭಿಮಾನದ ಪ್ರತೀಕವಾಗಿದೆ. ಲಿಂಗಭೀತಿ ಎನ್ನುವುದು ಎಲ್ಲ ಅಸಮಾನತೆ ಹಾಗೂ ಜೀವಭಯದ ಮೂಲವಾದ ಹೊತ್ತಿನಲ್ಲಿ ದೇಹಭಯವನ್ನು ಮೀರಿ ವಿವಿಧ ಆಕಾರಗಳಲ್ಲಿ ಕೊರವಂಜಿ ಬೆಳೆದು ನಿಲ್ಲುವ ವಿಶಿಷ್ಟತೆಯನ್ನು ಗುರುತಿಸುವುದು ಈ ಅಧ್ಯಯನದ ಕೇಂದ್ರಕಾಳಜಿಯಾಗಿದೆ.

ಕೊರವಂಜಿಯಂತಹ ಹೆಣ್ಣಿಗೆ ಎಲ್ಲ ಸಾಮರ್ಥ್ಯಗಳಿದ್ದರೂ ಅವಳು ಯಾಕೆ ದಮನಿತಳಾಗಿದ್ದಾಳೆ? ಕ್ರಿಯಾಹೀನಳಾಗಿದ್ದಾಳೆ? ಆಕೆಯ ಮಾತಿಗಿರುವ ಅರ್ಥವನ್ನು ಯಾಕೆ ಸಮಾಜವು ಮೌನಗೊಳಿಸಿದೆ.

ಮಾತಿಗೆ ಮನ್ನಣೆ ಇರದ ಹೊತ್ತಿನಲ್ಲಿ ಹೆಣ್ಣು ಭವಿಷ್ಯ ಹೇಳುವುದೆಂದರೆ ಏನು? ಮಾತು ಬಳಸಿದಾಗಲೂ ಅದರ ಉದ್ದೇಶ ಪೂರ್ಣಗೊಳ್ಳದ ಹಾಗೆ ಮಾಡಿದ ಸಾಮಾಜಿಕ ರಚನೆಗಳನ್ನು ವಿಸರ್ಜಿಸಿ ಅಧ್ಯಯನಿಸುವುದು ನನ್ನ ಪ್ರಮುಖ ಕಾಳಜಿಯಾಗಿದೆ. ಸಂಸ್ಕೃತಿಯ ಒಂದು ಭಾಗವಾದ 'ಕೊರವಂಜಿ ಸಂಪ್ರದಾಯ' ಕನ್ನಡ ಸಂಸ್ಕೃತಿಯಲ್ಲಿ ಪ್ರಾಧಾನ್ಯತೆಯನ್ನು ಪಡೆದಿತ್ತು ಎಂಬುದನ್ನು ನಿರೂಪಿಸುವ ಪ್ರಯತ್ನ ನನ್ನ ಅಧ್ಯಯನದ ಉದ್ದೇಶವಾಗಿದೆ.

### ೧.೪. ಅಧ್ಯಯನದ ವ್ಯಾಪ್ತಿ

ಕೊರವಂಜಿ ಪಾತ್ರವನ್ನು ಅಧ್ಯಯನ ಮಾಡಬೇಕಾದರೆ ಆ ಇಡೀ ಜನಾಂಗವನ್ನು, ಅವರ ಸಂಪ್ರದಾಯಗಳನ್ನು ಅವರ ರೀತಿ-ನೀತಿಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ಆದರೆ ನಾನು ಅಧ್ಯಯನಕ್ಕೆ ಆಯ್ದುಕೊಂಡದ್ದು **'ಕನ್ನಡ ಸಾಹಿತ್ಯದಲ್ಲಿ ಕೊರವಂಜಿ ಸಂಕಥನ'** ಎಂಬ ವಿಷಯವಾದ್ದರಿಂದ ನಾನು ನನ್ನ ಅಧ್ಯಯನವನ್ನು ಕೊರವ ಜನಾಂಗದ ಅಧ್ಯಯನಕ್ಕಿಂತ ವಿವಿಧ ಕಾಲ ಘಟ್ಟಗಳಲ್ಲಿ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಮೂಡಿಬಂದ 'ಕೊರವಂಜಿ' ಪಾತ್ರದ ಮೂಲಕ 'ಕೊರವಂಜಿ' ಸಂಕಥನವನ್ನು ಕಟ್ಟಿಕೊಳ್ಳುವ ಪ್ರಯತ್ನ ಮಾಡಿದ್ದೇನೆ. ಕೆಳವರ್ಗದ ಹೆಣ್ಣು ಮತ್ತು ಅವಳ ಅಭಿವ್ಯಕ್ತಿ ಕ್ರಮದ ದೃಷ್ಟಿಯಿಂದ ಇದೊಂದು ಬಹುಮುಖ್ಯ ವಿಷಯವಾದ ಕಾರಣ ಕೊರವಂಜಿಯನ್ನು ಅರ್ಥಮಾಡಿಕೊಳ್ಳಲು ಸಾಹಿತ್ಯ ಕೃತಿಗಳ ಅಧ್ಯಯನದ ಜೊತೆಗೆ ಮೌಖಿಕ ಆಕರಗಳನ್ನು ಬಳಸಿಕೊಂಡಿದ್ದೇನೆ.

ಉದಾಹರಣೆಗೆ ಸವದತ್ತಿ ಹಾಗೂ ಹುಲಿಗಿಯಲ್ಲಿ ಕಾಣುವ ಕಣಿ ಹೇಳುವ ಕೊರವಂಜಿಯರನ್ನು, ಕೃಷ್ಣ ಪಾರಿಜಾತ ಮತ್ತು ವೆಂಕಟೇಶ ಪಾರಿಜಾತಗಳಲ್ಲಿ ಕೊರವಂಜಿ ಪಾತ್ರ ಮಾಡಿದ ಕಲಾವಿದೆಯರನ್ನು ಸಂದರ್ಶಿಸಿ ಮಾಹಿತಿ ಪಡೆಯಲಾಗಿದೆ. ಆಮೂಲಕ ಮೊದಲ ಬಾರಿಗೆ ಕೊರವಂಜಿಯ ಒಂದು ಪೂರ್ಣ ಸಂಕಥನವನ್ನು ಕಟ್ಟಿಕೊಳ್ಳುವ ಪ್ರಯತ್ನದೊಂದಿಗೆ, ಕೆಳಜಾತಿ ಮಹಿಳೆಯ ಅಧೀನ ಹಾಗೂ ಅಭಿವ್ಯಕ್ತಿಯ ನೆಲೆಗಳನ್ನು ವಿವಿಧ ಕ್ರಮಗಳಲ್ಲಿ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ. ಅದಕ್ಕಾಗಿ ನನ್ನ ಇಡೀ ಅಧ್ಯಯನವನ್ನು ಒಟ್ಟು ಹನ್ನೊಂದು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡಿದ್ದೇನೆ.

ಮೊದಲ ಅಧ್ಯಾಯದಲ್ಲಿ ನನ್ನ ಅಧ್ಯಯನದ ವ್ಯಾಪ್ತಿ ಹಾಗೂ ವಿಧಾನದ ಬಗ್ಗೆ ಒಂದು ಸ್ಥೂಲ ಚಿತ್ರಣವನ್ನು ಕಟ್ಟಿಕೊಳ್ಳಲಾಗಿದೆ. ಮೊದಲ ಅಧ್ಯಾಯದಲ್ಲಿ ಪ್ರಮೇಯ, ಪರಿಕಲ್ಪನೆ, ಸಮಸ್ಯೆಗಳು ನನ್ನ ಅಧ್ಯಯನದ ವ್ಯಾಪ್ತಿ, ಅಧ್ಯಯನದ ಆಕರಗಳು ಮತ್ತು ವಿಧಾನಗಳನ್ನು ಗುರುತಿಸಿಕೊಳ್ಳಲಾಗಿದೆ.

ಅಧ್ಯಾಯ ಎರಡು ಕೆಳವರ್ಗದ ಮಹಿಳೆಯರು: ಘರ್ಷಣೆಯ ಸ್ವರೂಪಗಳು ಎಂಬುದರಲ್ಲಿ ನನ್ನ ಮುಂದಿನ ತಾತ್ವಿಕ ಚರ್ಚೆಗಾಗಿ ಒಂದು ವಿಸ್ತಾರವಾದ ನೆಲೆಗಟ್ಟನ್ನು ಹಾಕಿಕೊಳ್ಳಲಾಗಿದೆ. ತನ್ನ ಬದುಕು ಹಾಗೂ ಅಭಿವ್ಯಕ್ತಿ ಕ್ರಮಕ್ಕಾಗಿ ವಿಶೇಷವಾಗಿ ಕೆಳವರ್ಗದ ಹೆಣ್ಣು ಮಕ್ಕಳು ಮಾಡುವ ಹೋರಾಟ ಹಿಡಿಯುವ ದಾರಿಗಳು, ತನ್ನ ಅಧೀನ ಸ್ಥಿತಿಯಲ್ಲಿಯೂ ಮಟಿದೇಳುವ ನೆಲೆಗಳನ್ನು ಒಟ್ಟು ಹೆಣ್ಣಿನ ಸಂಕಥನದ ದೃಷ್ಟಿಯಲ್ಲಿ ಪರಿಭಾವಿಸಲು ಪ್ರಯತ್ನಿಸಲಾಗಿದೆ. ಕೆಳವರ್ಗದ ಮಹಿಳೆಯರ ಲಿಂಗಭಯ, ದೇಹಭಯದ ನಿರಾಕರಣೆ, ಅವರ ಸ್ವಾಭಿಮಾನ, ಅಸ್ತಿತ್ವಕ್ಕಾಗಿ ಅವರು ನಡೆಸುವ ಹೋರಾಟ, ಅಪಮಾನ ಹಾಗೂ ಅವಮಾನಗಳಾದಾಗ ಅವರು ತಿರುಗಿಬೀಳುವ ರೀತಿ, ಬದುಕನ್ನು ಕಟ್ಟಿಕೊಳ್ಳಲು ಅವರು ನಡೆಸುವ ಏಕಾಂಗಿ ಹೋರಾಟಗಳು ಮೌನ ಪ್ರತಿಭಟನೆಗಳ ಕುರಿತು ಇಲ್ಲಿ

ಚರ್ಚಿಸಲಾಗಿದೆ. ಕೆಳವರ್ಗದ ಶಿವಶರಣೆಯರ ವಚನಗಳು, ಸಾಹಿತ್ಯದಲ್ಲಿ ಬರುವ ಕೆಳವರ್ಗದ ಮಹಿಳೆಯರ ಪ್ರಸ್ತಾಪ ಮತ್ತು ನಿತ್ಯಬದುಕಿನಲ್ಲಿ ಕಂಡ ಮಹಿಳೆಯರ ಸಂಕಟಗಳನ್ನು ಆಧಾರವಾಗಿಟ್ಟುಕೊಂಡು ಕೆಳವರ್ಗದ ಮಹಿಳೆಯರ ಘರ್ಷಣೆಯ ಸ್ವರೂಪವನ್ನು ಗುರುತಿಸಿಕೊಳ್ಳಲಾಗಿದೆ.

ಅಧ್ಯಾಯ ಮೂರರಲ್ಲಿ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಉಕ್ತವಾದ ಕೊರವಂಜಿಯ ವಿವಿಧ ವಿನ್ಯಾಸಗಳನ್ನು ಒತ್ತಟ್ಟಿಗಿಟ್ಟು ಚರ್ಚಿಸಲಾಗಿದೆ. ಶೈವ, ವೈದಿಕ ಮತ್ತು ಜನಪದ ಸಾಹಿತ್ಯದಲ್ಲಿ ಬರುವ ಕೊರವಂಜಿ ವಿಶೇಷತೆಯನ್ನು ಗುರುತಿಸಿಕೊಳ್ಳಲಾಗಿದೆ.

ಅಧ್ಯಾಯ ನಾಲ್ಕು 'ಕೊರವಂಜಿ: ನಿತ್ಯ ಬದುಕಿನ ಸಂಕಟಗಳು' ಕುರಿತು ವಿವರಿಸಿಕೊಳ್ಳಲಾಗಿದೆ. ಅನನ್ಯತೆ ಮತ್ತು ಅಸ್ಮಿತೆಯ ನೆಲೆಗಳು, ಕೌಟುಂಬಿಕ ಸಮಸ್ಯೆಗಳು, ಅನ್ನ ಹಾಗೂ ಆರೈಕೆಯ ಸಮಸ್ಯೆಗಳು, ನಡತೆ ಹಾಗೂ ನಂಬಿಕೆಯ ಪ್ರಮೇಯಗಳು, ಲೈಂಗಿಕ ಬಿಕ್ಕಟ್ಟುಗಳು ಮುಂತಾಗಿ ಕೊರವಂಜಿ ತನ್ನ ದಿನನಿತ್ಯದ ಬದುಕಿನಲ್ಲಿ ಎದುರಿಸುವ ಸಂಕಟಗಳ ಕುರಿತು ಪ್ರಸ್ತಾಪಿಸಲಾಗಿದೆ. ಈ ಎಲ್ಲ ಸಂಕಟಗಳ ನಡುವೆಯೂ ಅವಳು ತನ್ನ ಅಸ್ತಿತ್ವ ಉಳಿಸಿಕೊಳ್ಳುವ, ಕೌಟುಂಬಿಕ ಅನನ್ಯತೆ ಕಾಪಾಡಿಕೊಳ್ಳುವ, ಕೌಟುಂಬಿಕ ಜವಾಬ್ದಾರಿ ನಿರ್ವಹಿಸುವ, ಸಮಾಜದಲ್ಲಿ ಗೌರವ ಪಡೆಯುವ ಬಗೆಯನ್ನು ಗುರುತಿಸಿಕೊಳ್ಳಲಾಗಿದೆ.

ಅಧ್ಯಾಯ ಐದು 'ಕೊರವಂಜಿ : ಸಂಪ್ರದಾಯ ಹಾಗೂ ಅಸಂಪ್ರದಾಯಗಳ ನಡುವೆ' ಇದರಲ್ಲಿ ಸಾಂಪ್ರದಾಯಿಕ ಸಮಾಜದಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಸಮಾಜದ ಕೃತಕ ಗೆರೆಗಳನ್ನು ವಿಭಜಿತ ರೂಪಗಳನ್ನು ಮೀರಲು ಕೊರವಂಜಿ ನಡೆಸಿದ ಸೃಜನಾತ್ಮಕ ಪ್ರಯತ್ನಗಳನ್ನು ಗುರುತಿಸಿಕೊಳ್ಳಲಾಗಿದೆ. ಕೊರವಂಜಿ ತನ್ನ ಭಾಷಾ ಬಳಕೆಯ ಸಾಮರ್ಥ್ಯದಿಂದ ಭಾಷಾಬಳಕೆಯ ತಾರತಮ್ಯದ ನೆಲೆಯನ್ನು ಮೀರಿ ಬೆಳೆದ ರೀತಿಯನ್ನು ತಿಳಿಯಲಾಗಿದೆ. ಭಾಷೆಯ ಸಂವಹನ ಗುಣವನ್ನು ಬಳಸಿಕೊಂಡು ಅವಳು ಸಾರ್ವತ್ರೀಕರಣಗೊಳ್ಳುವಿಕೆಯ ಬಗೆಯನ್ನು ಚರ್ಚಿಸಲಾಗಿದೆ. ತನ್ನ ದುಡಿಮೆಯಿಂದ ಕೊರವಂಜಿ ಕೀಳುತನವನ್ನು ಕಳೆದುಕೊಂಡು ವ್ಯಕ್ತಿಸ್ವಾತಂತ್ರ್ಯ ಹಾಗೂ ಸಮಾನತೆಯನ್ನು ಪಡೆದುಕೊಂಡದ್ದನ್ನು ಇಲ್ಲಿ ಗುರುತಿಸಿಕೊಳ್ಳಲಾಗಿದೆ.

'ಕೊರವಂಜಿ: ಸಖೀ ಗುಣದ ಸಂವೇದನೆಗಳು' ಎನ್ನುವ ಆರನೇ ಅಧ್ಯಾಯದಲ್ಲಿ ಕಣಿ ಹೇಳುವ ತನ್ನ ಪ್ರತಿಭಾ ವಿಲಾಸದ ಮೂಲಕ ನೊಂದ ಮಹಿಳೆಯರೊಂದಿಗೆ ಸಖ್ಯಭಾವದಿಂದ ವರ್ತಿಸಿ ಅವರ ಮಾನಸಿಕ ತುಮುಲಗಳನ್ನು ಪರಿಹರಿಸುವ ನೆಲೆಗಳನ್ನು ಚರ್ಚಿಸಲಾಗಿದೆ. ತನ್ನಲ್ಲಿಯೇ ಸಮಸ್ಯೆಗಳಿದ್ದಾಗಲೂ, ಅವೆಲ್ಲವನ್ನು ಮರೆತು ಕಣಿ ಕೇಳುವ ಹೆಣ್ಣುಮಕ್ಕಳ ಸಮಸ್ಯೆಗಳಿಗೆ ಕಿವಿಯಾಗುವ, ಆಪ್ತತೆಯಿಂದ ಅವರೊಂದಿಗೆ ಸಂವಹನಿಸುವ, ಅವರ ಸಮಸ್ಯೆಗೆ ಸ್ಪಂದಿಸುವ ಕೊರವಂಜಿಯ ಸಖ್ಯಭಾವವನ್ನು ಇಲ್ಲಿ ತಿಳಿಯಲಾಗಿದೆ. ಅವಳ ಮನೋವಿಶ್ಲೇಷಣಾತ್ಮಕ ಶಕ್ತಿಯನ್ನು ಇಲ್ಲಿ ಗುರುತಿಸಿಕೊಳ್ಳಲಾಗಿದೆ.

'ಕೊರವಂಜಿ : ದಂದ್ವಗಳ ಸಮನ್ವಯ' ಎನ್ನುವ ಏಳನೆಯ ಅಧ್ಯಾಯದಲ್ಲಿ ಕೊರವಂಜಿ ಬದುಕಿನ ಕೌಟುಂಬಿಕ, ಸಾಮುದಾಯಿಕ, ಸಾಮಾಜಿಕ ಹಾಗೂ ಮಾನಸಿಕ ದ್ವಂದ್ವಗಳ ಕುರಿತು ಚರ್ಚಿಸಲಾಗಿದೆ. ಅವಳು ಒಂದೇ ವಿಷಯವನ್ನು ಕುರಿತು ಹೇಗೆ ವಿಭಿನ್ನ ಭಾವನೆಗಳನ್ನು

ವ್ಯಕ್ತಪಡಿಸುತ್ತಾಳೆ ಎಂಬುದರ ಬಗ್ಗೆ ಇಲ್ಲಿ ತಿಳಿಯಲಾಗಿದೆ. ಅವಳ ದ್ವಂದ್ವಭಾವಗಳಿಗೆ ಕಾರಣ ಗುರುತಿಸಿಕೊಳ್ಳಲಾಗಿದೆ.

'ಕೊರವಂಜಿ ಮುಳುಗಿ ಏಳುವ ವಿಧಾನ' ಎನ್ನುವ ಎಂಟನೆಯ ಅಧ್ಯಾಯದಲ್ಲಿ ಕೊರವಂಜಿ ಬದುಕಿನ ಏಳು ಬೀಳುಗಳ ಕುರಿತು ಸಾಮಾಜಿಕ ಹಾಗೂ ಸಾಂಸ್ಕೃತಿಕ ನೆಲೆಯಲ್ಲಿ ಚರ್ಚಿಸಲಾಗಿದೆ. ಲಿಂಗ, ಕುಟುಂಬ, ಜಾತಿ, ಸಮಾಜದಿಂದ ತನಗೆದುರಾಗುವ ಸಮಸ್ಯೆಗಳ ಸುಳಿಯಲ್ಲಿ ಸಿಲುಕುವಿಕೆ ಹಾಗೂ ಕೆಲವೊಮ್ಮೆ ಅವನ್ನು ಮೀರಿ ಬೆಳೆದು ನಿಲ್ಲುವ ರೀತಿಗಳನ್ನು ಕುರಿತು ಚರ್ಚಿಸಲಾಗಿದೆ.

ಒಂಭತ್ತನೇ ಅಧ್ಯಾಯವು 'ಕೊರವಂಜಿ: ಪ್ರದರ್ಶನ ಕಲೆಗಳು.' ಇದರಲ್ಲಿ ವಿವಿಧ ಜಾನಪದ ಪ್ರದರ್ಶನಗಳಲ್ಲಿ ಕಾಣುವ ಕೊರವಂಜಿಯ ನಡೆಗಳನ್ನು ವಿವರಿಸಿಕೊಳ್ಳಲಾಗಿದೆ. ಕೊರವಂಜಿ ನೃತ್ಯ, ಕೊರವಂಜಿ ಕೋಲು, ಕೊರವಂಜಿ ಕೋಲಾಟ, ಶ್ರೀಕೃಷ್ಣ ಪಾರಿಜಾತ ಮುಂತಾದ ಕಲಾಪ್ರಕಾರಗಳಲ್ಲಿ ಬರುವ ಕೊರವಂಜಿ ಪಾತ್ರದ ವಿಶಿಷ್ಟತೆಯ ಬಗ್ಗೆ ಚರ್ಚಿಸಲಾಗಿದೆ.

ಹತ್ತನೇ ಅಧ್ಯಾಯವು 'ಕೊರವಂಜಿಯ ದಾರ್ಶನಿಕ ಹಾಗೂ ಆಧ್ಯಾತ್ಮಿಕ ಸಂಕಥನ' ಇದರಲ್ಲಿ ವಿವಿಧ ಪೌರಾಣಿಕ, ಧಾರ್ಮಿಕ ಹಾಗೂ ದಾರ್ಶನಿಕ ಮಜಲುಗಳಲ್ಲಿ ಕೊರವಂಜಿಯ ಸಂಕಥನ ಮೂರ್ತ ಹಾಗೂ ಅಮೂರ್ತ ರೂಪಗಳಲ್ಲಿ ಬೆಳೆದು ಬಂದು ನೆಲೆಗಳನ್ನು ಗುರುತಿಸಿಕೊಳ್ಳಲಾಗಿದೆ.

ಅಧ್ಯಾಯ ಹನ್ನೊಂದು 'ಕೊರವಂಜಿ ಸಾಂಸ್ಕೃತೀಕರಣದ ಬಿಡೆ ಮತ್ತು ಬಿಡುಗಡೆ' ಎನ್ನುವುದಾಗಿದ್ದು ಇದು ಒಟ್ಟು ನನ್ನ ಅಧ್ಯಯನದ ಫಲಿತಗಳನ್ನು ದಾಖಲಿಸಿದ್ದೇನೆ.

ಒಟ್ಟು ಈ ಅಧ್ಯಯನದಲ್ಲಿ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗಳಲ್ಲಿ ನಿರೂಪಿತವಾದ ಕೊರವಂಜಿಯ ಬಹುಮುಖಿ ಸಂವೇದನೆಗಳನ್ನು ವಿವಿಧ ಅಧ್ಯಾಯಗಳಡಿಯಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

* * *

ಲಿಂಗಭೀತಿಯೆ ಎಲ್ಲ ಅಸಮಾನತೆ ಹಾಗೂ ಜೀವಭಯದ ಮೂಲಕಾರಣ. ಎಲ್ಲಿಯವರೆಗೆ ಈ ಲಿಂಗಭೀತಿಯು ನಿವಾರಣೆಯಾಗುವುದಿಲ್ಲವೋ, ಅಲ್ಲಿಯವರೆಗೂ ಈ ಜೀವಭೀತಿ ನಿರ್ಮೂಲವಾಗಲಾರದು. ಎಲ್ಲ ಭೀತಿಯ ಮೂಲ ದೇಹ ಭಯ. ಅದು ಲಿಂಗಪ್ರಜ್ಞೆಯಿಂದಲೇ ಹುಟ್ಟಿರುವಂಥದ್ದು. ಲಿಂಗಭಯ ಕೇವಲ ಸ್ತ್ರೀಗೆ ಮಾತ್ರ ಸೀಮಿತವಾದುದಲ್ಲ. ಪುರುಷರಿಗೂ, ಶಿಖಂಡಿಗಳಿಗೂ ಇರುವಂಥದ್ದು.

ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀ ಸ್ವತಂತ್ರಳಲ್ಲ, ಅವಳು ಪರತಂತ್ರಳು, ಅವಲಂಬಿತಳು ಎಂದು ವಾದಿಸಲಾಗುತ್ತದೆ. ಆದರೆ ಈ ಜಗತ್ತನ್ನು ಸೂಕ್ಷ್ಮವಾಗಿ ಗ್ರಹಿಸಿದರೆ ಇಲ್ಲಿ ಹೆಣ್ಣು, ಗಂಡು ಯಾರೂ ಸ್ವತಂತ್ರರಲ್ಲ. ಪುರುಷನೂ ಬಂಧಿತನೇ. ಸಂಪೂರ್ಣ ಸ್ವತಂತ್ರನೆಂಬ ಯಾವ ಪುರುಷನು ನಮಗೆ ಚರಿತ್ರೆಯಲ್ಲಿ ಕಾಣುವುದಿಲ್ಲ. ಅವನು ಒಂದಿಲ್ಲೊಂದು ಬಂಧನಕ್ಕೆ ಒಳಗಾಗಿ ಯಾವುದೋ ಅವ್ಯಕ್ತ ಭಯದೊಳಗೆ ಬದುಕುತ್ತಿದ್ದಾನೆ. ಅವನು ಯಾವುದಾದರೊಂದು ಕುಟುಂಬಕ್ಕೆ ತನ್ನನ್ನು ಬಂಧಿಸಿಕೊಂಡವನೇ. ಮಾನಸಿಕವಾಗಿ ಅವನು ಅವಲಂಬಿತನೇ. ನಿರ್ಭೀತ ಸ್ವಾತಂತ್ರ್ಯ ಎನ್ನುವುದು ಗಳಿಸಲಾಗದ ಸ್ವತ್ತು. ಆದರೆ ಇಂಥ ಸ್ವಾತಂತ್ರ್ಯದ ಕಲ್ಪನೆಯೇ ಎಲ್ಲ ಹೋರಾಟಗಳ ತಾಯಿಬೇರು ಎನ್ನುವುದು ಅಷ್ಟೇ ಸತ್ಯ.

ಇನ್ನು ಸ್ತ್ರೀಯರ ಘರ್ಷಣೆಯ ಸ್ವರೂಪಗಳನ್ನು ಈ ಹಿನ್ನೆಲೆಯಲ್ಲಿ ಅವಲೋಕಿಸುವುದಾದರೆ, ಸ್ತ್ರೀಯರಲ್ಲಿಯೇ ಮೇಲ್ವರ್ಗ, ಮಧ್ಯಮವರ್ಗ ಮತ್ತು ಕೆಳವರ್ಗಗಳೆಂದು ವಿಭಜಿಸಿ ಅವರನ್ನು, ಅವರ ಸಮಸ್ಯೆಗಳನ್ನು ತೆಳುವುಗೊಳಿಸಲಾಗಿದೆ.

ಮೇಲ್ವರ್ಗದ ಮಹಿಳೆಯರಲ್ಲಿ ಅವಲಂಬನೆಗಿಂತ ಸ್ವಾತಂತ್ರ್ಯ ಹೆಚ್ಚು. ತಮ್ಮದೆಯಾದ ಬದುಕಿನ ಕ್ರಮ, ಗುಂಪು ಪ್ರತ್ಯೇಕತೆಗಳ ನಡುವೆ ಹೆಚ್ಚು ಬದುಕುವ ಜನರಿವರು. ಇವರು ಕೆಳಗಿನ ಎರಡು ವರ್ಗದ ಸಮೀಕರಣಕ್ಕೆ ಬರಲಾರರು. ಅವರಿಗೆ ಲಿಂಗಪ್ರಜ್ಞೆಯಿದ್ದರೂ, ಅದಕ್ಕೆ ಒಂದು ಸೀಮಿತ ಚೌಕಟ್ಟಿನೊಳಗೆ ಮುಕ್ತಿ. ಅದು ಸಾಮಾಜಿಕ ಸಂದರ್ಭಗಳಿಗೆ ಮುಖಾಮುಖಿಯಾಗುವುದು ಕಡಿಮೆ.

ಇನ್ನು ಮಧ್ಯಮವರ್ಗದ ಮಹಿಳೆ ಒಂದು ರೀತಿ ಎಲ್ಲ ಸಮಸ್ಯೆಗಳ ಮೂಲ. "ಇವರಿಗೆ ದೇಹದ ಸುತ್ತ ಸಣ್ಣ ಸೆನ್ಸಿಬಿಲಿಟಿ. ಮುಟ್ಟಿದರೆ ಮುನಿಯಿಂದ ಮತ್ತು ಮುಟ್ಟಿದ್ದು ಇಷ್ಟವಾದರೆ ಅರಳುವ ಎರಡೂ ಸಂಗತಿಗಳ ಮಟ್ಟಿಗೂ ಇವರು ಜಾಗೃತರು. ಆದ್ದರಿಂದಲೇ ಅವರದು ತೀರ ಜಸ್ಟಿಸ್ ಸಮಸ್ಯೆ. ಆಯ್ಕೆ ಸ್ವಾತಂತ್ರ್ಯ ಮೇಲ್ವರ್ಗದವರಷ್ಟು ಸರಳವಿಲ್ಲ. ಮತ್ತೆ ಕೆಳವರ್ಗದವರಿಗಿಂತ ಉತ್ತಮರೆಂಬ ಭಾವದಿಂದಾಗಿ ಇವರದು ಅತಂತ್ರ ಸ್ವರ್ಗ. ಇವರದು ಲಿಂಗದ ಅರೆಪ್ರಜ್ಞಾವಸ್ಥೆ".೧

ಕೆಳವರ್ಗದ ಮಹಿಳೆಯದು ಮತ್ತೊಂದು ರೀತಿ ಸಮಸ್ಯೆ. ಈ ಲಿಂಗಪ್ರಜ್ಞೆ ಸಮಸ್ಯೆ ಅನತಿ ದೂರ. ದೇಹ ಪ್ರಜ್ಞೆಯ ಕುರಿತು ಅಸೂಕ್ಷ್ಮ ಸಂವೇದನೆ ಅವಳದು. ಅಂದು ದುಡಿದು ಅಂದಿನ ಅನ್ನ ಸಂಪಾದಿಸುವುದೇ ಅವಳ ಮುಖ್ಯ ಧ್ಯೇಯ. ತನ್ನನ್ನು ಗುರುತಿಸಬೇಕು, ಗುರುತಿಸಿಕೊಳ್ಳಬೇಕೆನ್ನುವುದರ ಕಡೆಗಿನ ವಾಂಛಲ್ಯ ಅವಳಿಂದ ದೂರ. ದುಡಿಮೆ ಅವಳ ಅಗತ್ಯ. ಈ ಹೊತ್ತಿನಲ್ಲಿ ತನ್ನದೆ ವರ್ಗದ ಗಂಡಸಿನೊಂದಿಗೆ ದಿನಬೆಳಗಾದರೆ ಮಾಡುವ ಕೂಲಿ ಸಂದರ್ಭದಲ್ಲಿ ಮುಟ್ಟಿ, ಸವರಿ ಮಾಡುವ ಕೆಲಸಗಳು ಅವಳಲ್ಲಿ ದೇಹದ ಯಾವ ವಿಕಾರಗಳನ್ನು ಸೃಷ್ಟಿಸಲಾರವು. ಹಾಗಂತ ಅವಳು ಸಂವೇದನಾ ಹೀನಳೆಂದಲ್ಲ. ಒಂದು ರೀತಿಯ ದೇಹ ಭಯವನ್ನು ಮೀರಿ ನಿಂತವಳು.

ಮೇಲ್ವರ್ಗದ ಮಹಿಳೆಗೆ ಹಣ ಹಾಗೂ ಘನಸ್ತಿಕೆ ಮುಖ್ಯ. ಸಾಮಾಜಿಕ ಸಂದರ್ಭದ ಗುರುತಿಸಿಕೊಳ್ಳುವ ಕ್ರಿಯೆ ಅವಳಿಗೆ ಮುಖ್ಯವಾಗುವುದಿಲ್ಲ. ಮಧ್ಯಮ ವರ್ಗದವರಿಗೆ ತನ್ನನ್ನು ಗುರುತಿಸಿಕೊಳ್ಳಬೇಕು. ಅದಕ್ಕಾಗಿ ಹೋರಾಟ ಮಾಡುತ್ತಾಳೆ. ಕೆಳವರ್ಗದ ಮಹಿಳೆಗೆ ಇಂಥ ಸಾಮಾಜಿಕ ಗುರುತಿಸಿಕೊಳ್ಳುವಿಕೆ (ಐಡೆಂಟಿಟಿ ಕ್ರೈಸಿಸ್)ಗಿಂತ ಮುಖ್ಯವಾದುದು ದುಡಿಮೆ ಎಂಬುದು ಗಮನಾರ್ಹ.

ದೇಹಭಯ ಹಾಗೂ ಲಿಂಗ ಅಸಮಾನತೆಯನ್ನು ಮೀರುವ ದೆಸೆಯಿಂದಲೇ ನಮ್ಮ ಎಲ್ಲ ಸ್ವಾತಂತ್ರ್ಯ ಹೋರಾಟಗಳು, ಪ್ರತಿಭಟನೆಗಳು ಹುಟ್ಟಿಕೊಂಡವು. ಕೊರವಂಜಿಯಂಥ ಕೆಳವರ್ಗದ ಮಹಿಳೆ ಏಕಕಾಲಕ್ಕೆ ತನ್ನಿಂದ, ತನ್ನ ಕುಟುಂಬದಿಂದ, ತನ್ನ ಸಮುದಾಯದಿಂದ, ತಾನಾಡುವ ಸಾಮಾಜಿಕ ಸಂದರ್ಭಗಳಿಂದ ಏಕಕಾಲಕ್ಕೆ ಸ್ವತಂತ್ರಳಾಗುವ ಹೋರಾಟಕ್ಕೆ ಇಳಿಯಬೇಕಾಗುತ್ತದೆ. ಕನ್ನಡ ಸಾಹಿತ್ಯ, ಸಂಸ್ಕೃತಿಯಲ್ಲಿ ಕಾಣುವ ಇಂಥ ಕೆಲವು ಸೂಕ್ಷ್ಮ ಹೋರಾಟ ಹಾಗೂ ಪ್ರತಿಭಟನೆಯ ಸಂಗತಿಗಳನ್ನು ನನ್ನ ಅಧ್ಯಯನಕ್ಕೆ ಪೂರಕವಾಗುವಂತೆ ಮುಂದೆ ವಿಶ್ಲೇಷಿಸಿಕೊಳ್ಳಲಾಗಿದೆ.

ಕೆಳವರ್ಗದ ಮಹಿಳೆಯರು ಮಾನಸಿಕವಾಗಿ, ದೈಹಿಕವಾಗಿ ಸದೃಢರಾದವರು. ಮಾನಸಿಕ ಸದೃಢತೆಯಿಂದ ಆತ್ಮವಿಶ್ವಾಸ ಗಳಿಸಿಕೊಂಡ ಕೆಳವರ್ಗದ ಮಹಿಳೆಯರಿಗೆ ಜೈವಿಕ ನೆಲೆಯಲ್ಲಿ ಹುಟ್ಟಿಕೊಂಡ ಲಿಂಗಭಯ ತೊಡಕಾಗಿಲ್ಲ. ಎಲ್ಲ ಅಸಮಾನತೆ ಹಾಗೂ ಜೀವಭಯಕ್ಕೆ ಕಾರಣವಾದಂತಹ ಲಿಂಗಭಯ ಮೇಲಿನ ಮಧ್ಯಮ ವರ್ಗದ ಮಹಿಳೆಯರನ್ನು ಕಾಡಿದಂತೆ ಕೆಳವರ್ಗದ ಮಹಿಳೆಯರನ್ನು ಕಾಡಲೇ ಇಲ್ಲ. ದೇಹ ನಮ್ಮ ಸ್ವಾತಂತ್ರ್ಯಕ್ಕೆ ಅಡ್ಡಿ ಎಂಬ ಭಾವನೆ ಈ ವರ್ಗವನ್ನು ಭಾದಿಸಲೇ ಇಲ್ಲ. ಇವರು ತಮ್ಮ ದೇಹದ ಮೇಲೆ ನಿಯಂತ್ರಣವಿಟ್ಟುಕೊಂಡಿದ್ದಾರೆ. ಜೊತೆಗೆ ತಮ್ಮ ಮಾನಸಿಕ ಸಮಚಿತ್ತದಿಂದ ಸಮಾನಭಾವನೆಯನ್ನು ಬೆಳೆಸಿಕೊಂಡಿದ್ದಾರೆ. ಇದರಿಂದ ಜೈವಿಕ ನೆಲೆಯಿಂದ ಹುಟ್ಟಿಕೊಂಡ ಲಿಂಗಭಯದಿಂದ ವಿಮುಕ್ತರಾಗಿದ್ದಾರೆ. ಇಂತಹ ಸ್ಥಿತಿ ಇವರಂತೆ ಉಳಿದವರಿಗೆ ಸಾಧ್ಯವಾಗಿಲ್ಲ.

ಒಲ್ಲದ ಗಂಡನಿಂದ ಸ್ವಾತಂತ್ರ್ಯವನ್ನು ಬಯಸಿದವಳು ಅಕ್ಕ. ಅವಳ ಬಂಧನಕ್ಕೆ ಕಾರಣವಾದುದು ದೇಹ ಸೌಂದರ್ಯ. ತನ್ನ ಸ್ವಾತಂತ್ರವನ್ನು ಕಸಿದುಕೊಂಡ ತನ್ನ ದೇಹದ ಬಗ್ಗೆ ಅಕ್ಕ ತಾತ್ಸಾರ ಭಾವನೆ ತಾಳುತ್ತಾಳೆ. ಅದರಿಂದ ಅವಳು ದೇಹದ ಮೇಲಿನ ಮೋಹ ತೊರೆದು ನಗ್ನಳಾಗುತ್ತಾಳೆ. ತನ್ನನ್ನು ನಿಯಂತ್ರಿಸಲು ಕಾರಣವಾದ ದೇಹದ ಬಗ್ಗೆ ಕೀಳುಭಾವನೆ ಬೆಳೆಸಿಕೊಳ್ಳುತ್ತಾಳೆ.

"ನಾರಿಯೆಂಬ ರೂಪಿಂಗೆ ನೀವು ಒಲಿದು ಬಂದಿರಣ್ಣಾ
ಮೂತ್ರವು ಬಿಂದು ಒಸರುವ ನಾಳವೆಂದು
ಕಂಗಾಣದೆ ಮುಂದುಗೆಟ್ಟು ಬಂದಿರಣ್ಣಾ"[೨]

ಎಂದು ದೇಹ ಮೂಲವಾದ ಸಮಸ್ಯೆಗಳನ್ನು ಪ್ರಶ್ನೆ ಮಾಡುತ್ತಾಳೆ. ಸ್ವಾತಂತ್ರ್ಯಹರಣಕ್ಕೆ ಕಾರಣವಾದ ಲಿಂಗಭಯ ಅಕ್ಕನ ನಗ್ನತೆ ಮತ್ತು ದೇಹದ ಬಗೆಗಿನ ಕೀಳರಿಮೆಯನ್ನು ಮೀರಲು ಕಾರಣವಾಗುತ್ತದೆ. ಆದ್ದರಿಂದ ಅವಳು ತನ್ನ ಜೈವಿಕ ದೇಹದ ಹಂಗನ್ನೇ ನಿರಾಕರಿಸುತ್ತಾಳೆ.

ಆದರೆ ಕೆಳವರ್ಗದ ವಚನಕಾರ್ತಿಯರಲ್ಲಿ ಅಕ್ಕನಂತೆ ದೇಹ ನಿವೃತ್ತಿಯ ಪ್ರವೃತ್ತಿ ಕಂಡುಬರುವುದಿಲ್ಲ. ಅವರೆಂದು ದೇಹ ತಮ್ಮ ಸಾಧನೆಗೆ ಅಡ್ಡಿ ಎಂದು ಭಾವಿಸಲಿಲ್ಲ. ಕೆಳವರ್ಗದ ವಚನಕಾರ್ತಿ ಗೊಗ್ಗವ್ವೆ ಹೇಳುವಂತೆ

"ಗಂಡು ಮೋಹಿಸಿ ಹೆಣ್ಣು ಹಿಡಿದಡೆ
ಅದು ಒಬ್ಬರ ಒಡವೆ ಎಂದು ಅರಿಯಬೇಕು
ಹೆಣ್ಣು ಮೋಹಿಸಿ ಗಂಡ ಹಿಡಿದಡೆ
ಉತ್ತರವಾವುದೆಂದರಿಯಬೇಕು
ಈ ಎರಡರ ಉಭಯವ ಕಳೆದು ಸುಖಿತಾನಾಗಬಲ್ಲಡೆ
ನಾಸ್ತಿನಾಥನು ಪರಿಪೂರ್ಣನೆಂಬೆ"[೩]

ಗಂಡು ಹೆಣ್ಣಿನಲ್ಲಿರುವ ಉಭಯದ ಭಯ ಕಳೆದವನೆ ಸುಖಿ ಎಂಬ ಧೋರಣೆ ಅವಳದು. ಗೊಗ್ಗವ್ವೆ ಅಕ್ಕನಂತೆ ದೇಹ ನಿರಾಕರಿಸಲಿಲ್ಲ. ಬದಲಾಗಿ ದೇಹಭಯ ಅಥವಾ ಲಿಂಗಭಯವನ್ನು ನಿರಾಕರಿಸಿದಳು. ಗಂಡು ಹೆಣ್ಣನ್ನು ತನ್ನ ಖಾಸಗಿ ಆಸ್ತಿಯನ್ನಾಗಿ ಮಾಡಿಕೊಳ್ಳುವುದನ್ನೆ ಪ್ರಶ್ನಿಸಿಸುತ್ತಾಳೆ. ಅವಳ ಲಿಂಗಭಯ ಕಳೆದುಕೊಳ್ಳುವಿಕೆಯೇ ಅವಳಲ್ಲಿ ಪ್ರಶ್ನಿಸುವ ಶಕ್ತಿಯನ್ನು ತಂದುಕೊಡುತ್ತದೆ. ದೇಹದ ಬಗೆಗಿನ ಭಯ ಕಳೆದುಕೊಂಡ ಈ ಕೆಳವರ್ಗದ ವಚನಕಾರ್ತಿಯರಲ್ಲಿ ದೇಹವನ್ನು ಕೀಳಾಗಿ ಕಾಣುವ ಪ್ರವೃತ್ತಿ ಎಂದಿಗೂ ಬೆಳೆಯಲಿಲ್ಲ.

ಅಂತೆಯೇ ದೇಹಭಯ ಕಳೆದುಕೊಂಡ ಕೆಳವರ್ಗದ ವಚನಕಾರ್ತಿಯರು ಲಿಂಗಸಂಬಂಧಿ ನೆಲೆಯಲ್ಲಿ ರಚಿತವಾದ ಸಾಂಪ್ರದಾಯಿಕ ಜೈವಿಕ ನೀತಿಗಳನ್ನು ಬುಡಮೇಲು ಮಾಡುವಂತಹ ವಚನಗಳನ್ನು ರಚಿಸಿದ್ದಾರೆ. ಕೆಳವರ್ಗದ ವಚನಕಾರ್ತಿ ಕದಿರೆಯ ರೆಮ್ಮೆವ್ವೆ

"ಎಲ್ಲರ ಹೆಂಡಿರು ತೊಳಸಿಕ್ಕುವರು
ಎನ್ನ ಗಂಡಂಗೆ ತೊಳಸುವದಿಲ್ಲ

ಎಲ್ಲರ ಗಂಡಂದಿರು ಬಸಿವರು
ಎನ್ನ ಗಂಡಂಗೆ ಬಸಿವುದಿಲ್ಲ
ಎಲ್ಲ ಗಂಡಂದಿರಿಗೆ ಬೀಜವುಂಟು
ಎನ್ನ ಗಂಡಂಗೆ ಅಂಡದ ಬೀಜವಿಲ್ಲ
ಎಲ್ಲ ಗಂಡಂದಿರು ಮೇಲೆ,
ಎನ್ನ ಗಂಡ ಕೆಳಗೆ ನಾ ಮೇಲೆ
ಕದಿರ ರೆಮ್ಮೆಯೊಡೆಯ ಗುಮ್ಮೇಶ್ವರ"[೪]

ಎಂಬ ವಚನ ಸಾಂಪ್ರದಾಯಿಕ ಅಸಮಾನತೆಯನ್ನೆ ಒಡೆದು ಹಾಕುತ್ತದೆ. ಲಿಂಗ ಸಮಾನತೆಯನ್ನು ತೊಡೆದು ಹಾಕುವ ಧೋರಣೆ ಈ ವಚನದಲ್ಲಿದೆ. ತನ್ನ ದೇಹದ ಬಗೆಗಿನ ಆತ್ಮವಿಶ್ವಾಸ ಅವಳ ಲಿಂಗಭಯವನ್ನು ಇಲ್ಲಿ ತೊಡೆದು ಹಾಕಿದೆ. ಅದರಿಂದ ಗಂಡಿಗಿಂತ ತಾನೇ ಪ್ರಬಲಳೆಂದು ಗೊಗ್ಗವ್ವೆ ಸಾರಿದ್ದಾಳೆ.

ಸನಾತನ ಸಂಪ್ರದಾಯದ ಪ್ರಕಾರ ದೇಹ ಸಾಧನೆಗೆ ತೊಡಕಾದದ್ದು. ಕಾಯವೇ ಮಾಯೆಗೆ ಮೂಲ. ಅದರಲ್ಲೂ ಬಹುತೇಕ ಧರ್ಮಗಳ ದೃಷ್ಟಿಯಲ್ಲಿ ಹೆಣ್ಣು ದೇಹ ಮೋಕ್ಷಕ್ಕೆ ಅನರ್ಹವಾದುದು. ಮೋಕ್ಷ ಪಡೆಯಬೇಕಾದರೆ ಗಂಡು ಜನ್ಮವನ್ನು ಎತ್ತಲೇಬೇಕೆಂಬ ನಂಬಿಕೆ ಬಹುತೇಕ ಧರ್ಮಗಳದ್ದು. ಆದರೆ ಕೆಳವರ್ಗದ ವಚನಕಾರ್ತಿಯರು ಈ ಸನಾತನ ತತ್ವವನ್ನೆ ಒಡೆದು ಹಾಕಿದ್ದಾರೆ. ಮಾಯೆಗೆ ಕಾರಣವೆಂದು ಹೇಳಲಾದ ಕಾಯವನ್ನು ಕಾಯಕತತ್ವ ಸಾಧನೆಗೆ ಸಾಧನವನ್ನಾಗಿ ಬಳಸಿದ್ದಾರೆ. ದೇಹವನ್ನು ದೇವಾಲಯವನ್ನಾಗಿ ಪರಿವರ್ತಿಸಿಕೊಂಡಿದ್ದಾರೆ. ಸನಾತನ ನಂಬಿಕೆಗಳಿಗೆ ವಿರುದ್ಧವಾದ ರೀತಿಯಲ್ಲಿ ಕೆಳವರ್ಗದ ವಚನಕಾರ್ತಿಯರು ಮತ್ತು ಕೆಳವರ್ಗದ ಮಹಿಳೆಯರು ತಮ್ಮ ಜೀವನವನ್ನು ರೂಪಿಸಿಕೊಂಡಿದ್ದಾರೆ ಎನ್ನುವುದು ಕುತೂಹಲದ ವಿಚಾರ.

ಅದರಂತೆಯೇ ನಮ್ಮ ಸಂಪ್ರದಾಯಗಳಲ್ಲಿ ಸಂಸಾರವು ಸಾಧನೆಗೆ ತೊಡಕು ಎಂಬ ನಂಬಿಕೆಯಿದೆ. ವೈದಿಕ ಸಂಪ್ರದಾಯದ ಮಹಾನ್ ಸಾಧಕರೆಲ್ಲರೂ ಸಂಸಾರವನ್ನು ತ್ಯಜಿಸಿ ಸಾಧನೆ ಮಾಡಿದರು. ಶೂನ್ಯಸಿಂಹಾಸನಾಧಿಪತಿ ಎನಿಸಿದ ಅಲ್ಲಮಪ್ರಭು ಸಹ

"ಸಂಸಾರವೆಂಬ ಹೆಣ ಬಿದ್ದಿರೆ
ತಿನಬಂದ ನಾಯಿಜಗಳವ ನೋಡಿರೆ"[೫]

ಎಂದು ಸಂಸಾರದ ಬಗ್ಗೆ ಕೀಳುಭಾವನೆಯನ್ನು ವ್ಯಕ್ತಪಡಿಸುತ್ತಾನೆ. ಅಂತೆಯೇ ಅಕ್ಕ ಸಹ ಸಂಸಾರವನ್ನು ತೊರೆದು ಬಂದೇ ಸಾಧನೆಯನ್ನು ಮಾಡುತ್ತಾಳೆ. ಸಂಪ್ರದಾಯ ಮೀರಲು ಪ್ರಯತ್ನಿಸಿದ ಶರಣರಲ್ಲೂ ಸಂಸಾರದ ಬಗ್ಗೆ ತಾತ್ಸಾರ ಭಾವನೆಯೇ ಇದೆ. ಬಸವಣ್ಣನವರನ್ನು ಬಿಟ್ಟು ಬಹುತೇಕ ಮೇಲ್ವರ್ಗದ ಶರಣರಲ್ಲಿ ಸಂಸಾರದ ನಿರಾಕರಣೆಯನ್ನೇ ಕಾಣುತ್ತೇವೆ. ಆದರೆ ಕೆಳವರ್ಗದ ಶರಣೆಯರಲ್ಲಿ, ಕೆಳವರ್ಗದ ಮಹಿಳೆಯರಲ್ಲಿ ಯಾವತ್ತು ಈ ಭಾವನೆ ಕಾಣುವುದಿಲ್ಲ.

ಅವರೆಂದು ಸಂಸಾರವನ್ನು ತಮ್ಮ ಸಾಧನೆಗೆ ತೊಡಕು ಎಂದು ಭಾವಿಸಿರಲಿಲ್ಲ. ಸಂಸಾರದಲ್ಲಿದ್ದುಕೊಂಡೆ ಸಾಧನೆಯನ್ನು ಮಾಡುವ ಗುಣವನ್ನು ಈ ಕೆಳವರ್ಗದ ಮಹಿಳೆಯರಲ್ಲಿ ಕಾಣುತ್ತೇವೆ.

ಆಯ್ದಕ್ಕಿ ಲಕ್ಕಮ್ಮ, ಕದಿರೆ ರೆಮ್ಮವ್ವೆ, ಅಮುಗೆರಾಯಮ್ಮ, ಬಾಚಿಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ, ದಶರಯ್ಯಗಳ ಪುಣ್ಯಸ್ತ್ರೀ ವೀರಮ್ಮ ಇವರೆಲ್ಲರೂ ಸಂಸಾರದಲ್ಲಿದ್ದುಕೊಂಡೆ ಶರಣ ತತ್ವಗಳನ್ನು ಪಾಲಿಸುತ್ತಾರೆ. ಇವರೆಂದು ಸಂಸಾರವನ್ನು ತಮ್ಮ ಸಾಧನೆಗೆ ತೊಡಕೆಂದು ಭಾವಿಸಿರಲಿಲ್ಲ. ಅಕ್ಕನಂತೆ ಇವರೆಂದು ಸಂಸಾರ ತೊರೆಯಲು ಪ್ರಯತ್ನಿಸಲಿಲ್ಲ. ಬದಲಾಗಿ ಇವರು ಸಂಸಾರವನ್ನು ತಮ್ಮ ಆಯ್ಕೆಯನ್ನಾಗಿ ಮಾಡಿಕೊಂಡಿದ್ದರು. ಅದನ್ನು ತಮ್ಮ ಅಗತ್ಯವೆಂದು ಭಾವಿಸಿದ್ದರು. ಆಯ್ಕೆ ಅಥವಾ ಅಗತ್ಯವೆಂದು ಪರಿಭಾವಿಸಿದಾಗ ಅದರ ಬಗ್ಗೆ ಜವಾಬ್ಧಾರಿಯ ಭಾವನೆ ಬೆಳೆಯುತ್ತದೆ. ಆಗ ಅದನ್ನು ಕಟ್ಟುವುದರಲ್ಲಿಯೇ ಸಂತೃಪ್ತಿಯ ಭಾವನೆಯನ್ನು ಕಾಣಲು ಸಾಧ್ಯವಾಗುತ್ತದೆ. ಸಂಸಾರ ಹಾಗೂ ಆಧ್ಯಾತ್ಮ ಸಾಧನೆಯನ್ನು ತಮ್ಮ ಅಗತ್ಯವನ್ನಾಗಿ ಸ್ವೀಕರಿಸಿದ ಕೆಳವರ್ಗದ ವಚನಕಾರ್ತಿಯರು ಅದನ್ನು ನಿರ್ವಹಿಸುವುದರಲ್ಲಿ ಸಂತೃಪ್ತಿಯನ್ನು ಕಂಡುಕೊಂಡರು.

ನಿರಾಕರಣೆ ಸುಲಭಮಾರ್ಗವಾದರೆ, ಸ್ವೀಕರಣೆ ಸಂಘರ್ಷಮಯವಾದುದು. ಕೆಡೆಯುವಿಕೆ ಅತ್ಯಂತ ಸುಲಭದ ಕಾರ್ಯವಾದರೆ, ಕಟ್ಟುವಿಕೆ ಅತ್ಯಂತ ಕಠಿಣವಾದುದು. ಕೆಳವರ್ಗದ ವಚನಕಾರ್ತಿಯರು ಕಟ್ಟುವಿಕೆಯಂತಹ ಕಠಿಣ ಮಾರ್ಗವನ್ನೆ ಆಯ್ಕೆಮಾಡಿಕೊಂಡಿದ್ದರು. ಲಿಂಗಭಯ, ಜೀವಭಯವನ್ನು ಮೀರಿದ ಕೆಳವರ್ಗದ ವಚನಕಾರ್ತಿಯರಾರು ಮೇಲ್ವರ್ಗದ ಅಕ್ಕನಂತೆ ಸಂಸಾರವನ್ನು ನಿರಾಕರಿಸಲಿಲ್ಲ. ದೇಹ ಮತ್ತು ಸಂಸಾರವನ್ನು ನಿರಾಕರಿಸಿದ ಅಕ್ಕ ದೇಹ ಮತ್ತು ಸಂಸಾರಗಳ ಸಂಘರ್ಷವನ್ನು ಎದುರಿಸಿ ಬದುಕಿದ ಕೆಳವರ್ಗದ ವಚನಕಾರ್ತಿಯರ್‍ಯಾರಿಗೂ ಮೇಲ್ಪಂಕ್ತಿಯಾಗಲೇ ಇಲ್ಲ. "ಅಸಾಂಪ್ರದಾಯಿಕ ಸಾಹಸದ ಒಂದು ಪ್ರಯತ್ನ ಅಕ್ಕಮಹಾದೇವಿ"[೬] ಗಿಂತ ಪಲಾಯನವಾದವನ್ನು ಮಾಡದ ಕೆಳವರ್ಗದ ವಚನಕಾರ್ತಿಯರ ಸಂಘರ್ಷವೇ ಹಿರಿದೆನಿಸುತ್ತದೆ.

ಕುಟುಂಬದ ಕಟ್ಟುವಿಕೆಯಲ್ಲಿ ಪ್ರಮುಖ ಪಾತ್ರವಹಿಸುವ ಕೆಳವರ್ಗದ ಮಹಿಳೆಯರನ್ನು ಮೇಲ್ವರ್ಗದಂತೆ ಸತಿಪದ್ಧತಿ, ವೈಧವ್ಯದಂತಹ ಸಾಂಪ್ರದಾಯಿಕ ಸಮಸ್ಯೆಗಳು ಕಾಡಲಿಲ್ಲ. ಕೆಳವರ್ಗದಲ್ಲಿ ಹೆಣ್ಣು ದುಡಿಯುವ ಮೂಲ. ಇಂತಹ ಮಹಿಳೆಯರನ್ನು ಸತಿಪದ್ಧತಿಗೆ ಈಡುಮಾಡಿದರೆ, ವೈಧವ್ಯದ ನೆಪದಿಂದ ಮೂಲೆಗೆ ಕೂಡಿಸಿದರೆ, ಉತ್ಪಾದನೆ ಮತ್ತು ಆದಾಯದ ಮೂಲವನ್ನೆ ಕಳೆದು ಕೊಂಡಂತಾಗುತ್ತದೆ ಎಂಬ ಕಾರಣದಿಂದ ಇಂತಹ ಯಾವ ಬಂಧನಗಳು ಈ ಮಹಿಳೆಯರನ್ನು ಸುತ್ತಿಕೊಳ್ಳಲಿಲ್ಲ. ಆದರೆ ಕುಟುಂಬದಲ್ಲಿ, ಕುಟುಂಬ ನಿರ್ವಹಣೆ, ಬಂಜೆತನ, ಬಹುಪತ್ನಿತ್ವ, ಚಟಗಳಿಗೆ ದಾಸನಾದ ಗಂಡ, ಆಲಸಿಗಂಡನಂತಹ ಸಮಸ್ಯೆಗಳನ್ನು ಎದುರಿಸಬೇಕಾಯ್ತು. ಕುಟುಂಬವನ್ನು ಅಗತ್ಯವೆಂದು ಭಾವಿಸಿದ ಇವಳು ಆ ಕುಟುಂಬವನ್ನು ಸುಭದ್ರಗೊಳಿಸಲು ಯತ್ನಿಸಬೇಕಾಯಿತು. ಅದಕ್ಕಾಗಿ ಅವಳು ಪತಿಯನ್ನು ತಿದ್ದುವ, ಹೊಂದಾಣಿಕೆ ಮಾಡಿಕೊಳ್ಳುವ, ಕುಟುಂಬ ರಕ್ಷಿಸುವ ಹಾಗೂ ಕಟ್ಟಿಕೊಳ್ಳುವ ಸಂಘರ್ಷದಲ್ಲಿ ತೊಡಗುತ್ತಾಳೆ.

ನಾವು ನಮ್ಮ ನಡವಳಿಕೆ, ಆಚಾರ, ವಿಚಾರಗಳನ್ನು ಮಾದರಿಯನ್ನಾಗಿ ರೂಪಿಸಿಕೊಂಡರೆ, ಮಾದರಿ ಕುಟುಂಬ, ಮಾದರಿ ಸಮಾಜ ನಿರ್ಮಾಣ ಸಾಧ್ಯ. ಮೊದಲು ನಾವು ನಮ್ಮ ತಪ್ಪು

ಒಪ್ಪುಗಳನ್ನು ತಿದ್ದಿಕೊಳ್ಳಬೇಕು. ಅಂದಾಗಲೇ ಸಮಾಜಕ್ಕೆ ಮಾದರಿಯಾಗಲು ಸಾಧ್ಯ. ಕೆಳವರ್ಗದ ಮಹಿಳೆಯರಲ್ಲಿ ತಮ್ಮ, ತಮ್ಮ ಕುಟುಂಬದ ಮಿತಿಗಳನ್ನು ತಿದ್ದಿಕೊಳ್ಳುವ ಮೂಲಕ ಸಮಾಜಕ್ಕೆ ಮಾದರಿಯಾಗುವ ಪ್ರಯತ್ನಗಳನ್ನು ಕಾಣುತ್ತೇವೆ.

ಆಯ್ದಕ್ಕಿ ಲಕ್ಕಮ್ಮ ಗಂಡ ಅಗತ್ಯಕ್ಕಿಂತ ಹೆಚ್ಚು ಅಕ್ಕಿಯನ್ನು ತಂದಾಗ ಅವಳು

"ಆಸೆಯೆಂಬುದು ಅರಸಂಗಲ್ಲದೆ
ಶಿವಭಕ್ತರಿಗುಂಟೆ ಅಯ್ಯಾ?
ರೋಷಯೆಂಬುದು ಯಮದೂತರಿಗಲ್ಲದೆ
ಅಜಾತರಿಗುಂಟೆ ಅಯ್ಯಾ? ಈಸಕ್ಕಿಯಾಸೆ ನಿಮಗೇಕೆ?
ಈಶ್ವರನೊಪ್ಪ, ಮಾರಯ್ಯ ಪ್ರಿಯ
ಅಮರೇಶ್ವರಲಿಂಗಕ್ಕೆ ದೂರ ಮಾರಯ್ಯ"೭

ಎಂದು ಅವನನ್ನು ದೂರುತ್ತಾಳೆ. ಆಸೆ ಇರಬೇಕೆ ಹೊರತು ಅದು ನಮ್ಮಂಥವರಿಗಲ್ಲ. ಕೂಡಿಡುವ ಸಂಪ್ರದಾಯ ನಮ್ಮದಲ್ಲ ಎಂದು ತಿಳಿಹೇಳುತ್ತಾಳೆ. ತಾನು ಅತಿಯಾಸೆ ಪಡದೆ ಅತಿ ಆಸೆಯಿಂದ ಹೆಚ್ಚು ಅಕ್ಕಿ ತಂದ ಗಂಡನನ್ನು ತರಾಟೆಗೆ ತೆಗೆದುಕೊಳ್ಳುತ್ತಾಳೆ. ಮಿತವ್ಯಯದ ತತ್ವವನ್ನು ಅನುಸರಿಸುವುದರೊಂದಿಗೆ, ಗಂಡನಿಗೂ ತಿಳಿಹೇಳಿ, ಇಡೀ ಸಮಾಜಕ್ಕೆ ಮಿತವ್ಯಯದ ತತ್ವವನ್ನು ಹೇಳಿಕೊಡುತ್ತಾಳೆ. ಇಲ್ಲಿ ಅವಳು, ತಾನು ಹಾಗೂ ತನ್ನ ಕುಟುಂಬದ ಬಗ್ಗೆ ಮಾತ್ರ ಯೋಚಿಸದೆ, ಇಡೀ ಸಮಾಜದ ಬಗ್ಗೆ ಚಿಂತಿಸುತ್ತಾಳೆ. ಆಯ್ದು ತಂದ ಅಕ್ಕಿಯಲ್ಲೆ ಶರಣರನ್ನು ತೃಪ್ತಿಪಡಿಸಿ ತಾನು ಉಣ್ಣುವ ಇವಳು, ತಾನು ಕೂಡಿಟ್ಟರೆ ಸಮಾಜದ ಇನ್ನೋರ್ವ ವ್ಯಕ್ತಿಗೆ ಅನ್ನವಿಲ್ಲದಂತಾಗುತ್ತದೆಂಬ ಪರಿಕಲ್ಪನೆ ಹೊಂದಿದ್ದಳು. ಹೀಗೆ ಲೋಕವನ್ನು ತನ್ನ ಕುಟುಂಬವನ್ನಾಗಿ ಭಾವಿಸಿ ಅದಕ್ಕಾಗಿ ಪರಿತಪಿಸುವ ವ್ಯಕ್ತಿತ್ವ ಕೆಳವರ್ಗದ ಮಹಿಳೆಯರಲ್ಲಿದೆ. ಕೂಡಿಡದೆ ಸಮಾಜಕ್ಕೆ ಕೊಟ್ಟುಕೊಳ್ಳುವ, ಮನೋಭಾವ ಕೆಳವರ್ಗದ ಮಹಿಳೆಯರದು. ಕೌಟುಂಬಿಕ ನೆಲೆಯಿಂದ ವಿಸ್ತರಿಸಿಕೊಂಡು ಸಾರ್ವತ್ರಿಕಗೊಳ್ಳುವ ಬಗೆ ಇವರದು.

ಶರಣರ ಜೊತೆ ಚರ್ಚೆಯಲ್ಲಿ ನಿರತನಾದ ಆಯ್ದಕ್ಕಿ ಮಾರಯ್ಯನನ್ನು ಲಕ್ಕಮ್ಮ ತುಂಬಿದ ಸಭೆಯಲ್ಲಿ "ಕಾಯಕ ನಿಂದಿತ್ತು ಹೋಗಯ್ಯಾ ಎನ್ನಾಳ್ದನೇ"೮ ಎಂದು ಎಚ್ಚರಿಸುತ್ತಾಳೆ. ಸಂಪ್ರದಾಯದ ಪ್ರಕಾರ ಹೆಂಡತಿ ಗಂಡನಿಗೆ ಎದುರು ಮಾತನಾಡುವುದು ತಪ್ಪು ಎನ್ನುವ ಸಾಂಪ್ರದಾಯಿಕ ನಂಬಿಕೆ ಇರುವಾಗ, ಈ ವಚನಕಾರ್ತಿ ಶರಣರಿಂದ ತುಂಬಿದ ಅನುಭವಮಂಟಪದಲ್ಲಿ ಪತಿಗೆ ಕಾಯಕದ ಮಹತ್ವವನ್ನು ಅರುಹಿ ಆ ಸಾಂಪ್ರದಾಯಿಕ ನಂಬಿಕೆಯನ್ನೇ ಮುರಿಯುತ್ತಾಳೆ. ತಾನು ಆಯ್ಕೆಮಾಡಿಕೊಂಡ ಸಂಸಾರವನ್ನು ಮುನ್ನಡೆಸಲು ಗಂಡನ ದುಡಿಮೆಯ ಅಗತ್ಯವಿದೆ ಎಂಬ ಅರಿವು ಅವಳಿಗಿದೆ. ತನ್ನ ಅರಿವು ಮತ್ತು ತಾನು ಕಳೆದುಕೊಂಡ ಲಿಂಗಭಯದಿಂದ ಲಕ್ಕಮ್ಮ ಸಭೆಯ ಎದುರು ನಿರ್ಭಯದಿಂದ ಮಾತನಾಡುತ್ತಾಳೆ. ಈ ಮೂಲಕ ತನ್ನ ಕರ್ತವ್ಯವನ್ನೇ ಮರೆತ ಗಂಡನನ್ನು ತಿದ್ದುತ್ತಾಳೆ. ಹೀಗೆ ಸ್ವಂತ

ಅರಿವು ಮತ್ತು ನಿರ್ಭಯ ಮಾತಿನ ಮೂಲಕ ಕೆಳವರ್ಗದ ಮಹಿಳೆಯರು ತಮ್ಮ ಬದುಕನ್ನು ರೂಢಿಸಿಕೊಂಡಿದ್ದನ್ನು ಕಾಣಬಹುದು.

ಆಸೆಬುರುಕ, ಆಲಸಿ ಗಂಡನನ್ನು ತಿದ್ದಿ ಹಾದಿಗೆ ತಂದಂತೆ, ಅನುಮಾನ ಪಡುವ ಗಂಡನನ್ನು ತಿದ್ದುವ ಆ ಮೂಲಕ ತಮ್ಮ ಕುಟುಂಬವನ್ನು ಸುಭದ್ರಗೊಳಿಸಿಕೊಳ್ಳುವ ಶಕ್ತಿ ಕೆಳವರ್ಗದ ಮಹಿಳೆಯರಲ್ಲಿ ಕಂಡುಬರುತ್ತದೆ. ತಮ್ಮ ಅರಿವು, ವಿಚಾರ, ನಂಬಿಕೆ, ಆತ್ಮವಿಶ್ವಾಸ, ಸ್ವಾಭಿಮಾನದಿಂದ ಇಂತಹ ಪ್ರಸಂಗಗಳನ್ನು ನಿರ್ವಹಿಸುತ್ತಾರೆ.

ಮಲೆಮಾದೇಶ್ವರ ಕಾವ್ಯದ ಸಂಕಮ್ಮ ಮಹಿಳೆಯರ ಸ್ವಾಭಿಮಾನದ ಪ್ರತೀಕವಾಗಿದ್ದಾಳೆ. ಬೇಟೆಗೆ ಹೊರಟ ನೀಲಯ್ಯ ಬಂಜೆಯಾದ ಸಂಕಮ್ಮನಿಗೆ ಪಾತಿವ್ರತ್ಯಕ್ಕೆ ಸಂಬಂಧಿಸಿದಂತೆ "ನನಗೆ ಬಲಗೈ ಭಾಷೆ ಮಾಡ್ಬೇಣ್ಣೆ"[೯] ಎಂದು ಭಾಷೆ ಕೇಳುತ್ತಾನೆ. ಆದರೆ ಸ್ವಾಭಿಮಾನಿ ಸಂಕಮ್ಮ ಬಲಗೈ ಭಾಷೆ ಕೊಡಲು ನಿರಾಕರಿಸುತ್ತಾಳೆ.

"ಭೂಮಿ ತಾಯಿ ಆಕಾಸವೇಣಿ ಸಾಕ್ಷಿಯಾಗಿ
ಪತಿಗೆ ಭಾಷೆ ಕೊಡುವುದಿಲ್ಲ.
ಯಜಮಾನ ಭಾಷೆ ಕೊಟ್ಟ ಮೇಲೆ
ನನ್ನ ಧರ್ಮ ಉಳಿಯುವದಿಲ್ಲ"[೧೦]

ಎಂದು ತನ್ನ ಪಾತಿವ್ರತ್ಯದ ಬಗ್ಗೆ ಅನುಮಾನ ಪಡುವದನ್ನು ನಿರಾಕರಿಸುತ್ತಾಳೆ. "ನನ್ನ ಶಿರಸವನ್ನ ತಂದು ದೊಡ್ಡಿ ಬಾಗ್ಲಿಗೆ ಕಟ್ಟಿದ್ರೋವೆ ಪತಿಗೆ ಭಾಷೆ ಕೊಡುವುದಿಲ್ಲ ಯಜಮಾನ"[೧೧] ಎಂದು ತನ್ನ ಖಚಿತವಾದ ನಿರ್ಧಾರವನ್ನು ಪತಿಗೆ ತಿಳಿಸುತ್ತಾಳೆ. ಅವಳ ಶೀಲವನ್ನು ಆಧಾರವಾಗಿಟ್ಟುಕೊಂಡು ಅವಳನ್ನು ಹತ್ತಿಕ್ಕುವ, ಅವಳ ಸ್ವಾಭಿಮಾನಕ್ಕೆ ಧಕ್ಕೆ ಉಂಟುಮಾಡುವಂತಹ ಸಾಂಪ್ರದಾಯಿಕ ವ್ಯವಸ್ಥೆಗಳನ್ನು ಸಂಕಮ್ಮ ಪ್ರತಿಭಟಿಸುತ್ತಾಳೆ.

ಮಹಿಳೆ ಅಪಮಾನ ಬೇಕಾದರೂ ಸಹಿಸುತ್ತಾಳೆ. ಆದರೆ ಅನುಮಾನವನ್ನು ಮಾತ್ರ ಸಹಿಸುವುದಿಲ್ಲ. ತನ್ನ ಮೇಲೆ ನಂಬಿಕೆಯಿಲ್ಲದ, ತನ್ನ ಸ್ವಾಭಿಮಾನಕ್ಕೆ ಧಕ್ಕೆ ತರುವ, ತನ್ನ ಹಕ್ಕನ್ನು ಕಿತ್ತುಕೊಳ್ಳುವ ಗಂಡನ ವಿರುದ್ಧ ಪ್ರತಿಭಟಿಸುತ್ತಾಳೆ. ಆ ಮೂಲಕ ಅವನನ್ನು ಅನುಮಾನ ಪಡುವದರಿಂದ ಬಿಡಿಸಿ ನಂಬಿಕೆಯಿಡುವ ಸರಿದಾರಿಗೆ ತರಲು ಪ್ರಯತ್ನಿಸುತ್ತಾಳೆ.

ಸಂಸಾರವನ್ನು ಕಟ್ಟುವ, ಗಂಡನನ್ನು ತಿದ್ದುವ, ಕುಟುಂಬ ಮುನ್ನಡೆಸುವ ಕೆಳವರ್ಗದ ಮಹಿಳೆ ಕುಟುಂಬದಲ್ಲಿ ಅನುಮಾನಗಳುಂಟಾದಾಗ ಅದರ ವಿರುದ್ಧ ಸೆಟೆದು ನಿಲ್ಲುತ್ತಾರೆ. ಅಪಮಾನ ಸಹಿಸಿದರು ಅನುಮಾನ ಸಹಿಸದಿರುವ ಕೆಳವರ್ಗದ ಮಹಿಳೆಯರು ಪತಿಯನ್ನು ತೊರೆದು ಬದುಕು ರೂಪಿಸಿಕೊಂಡ ಉದಾಹರಣೆಗಳು ಇವೆ.

ಭಾರತದ ಪ್ರಾಚೀನ ಧಾರ್ಮಿಕ ಕೃತಿಯಾದ ಮಹಾಭಾರತದಲ್ಲಿಯೇ ಪತಿಯನ್ನು ತೊರೆದ ಕೆಳವರ್ಗದ ಮಹಿಳೆಯನ್ನು ಕಾಣಬಹುದಾಗಿದೆ. ಶಂತಲು ಮಹಾರಾಜನನ್ನು ಮದುವೆಯಾದ

ಕೆಳವರ್ಗದ ಗಂಗೆ, ಮದುವೆಯ ಸಂದರ್ಭದಲ್ಲಿಯೇ ನಾನು ಏನು ಮಾಡಿದರೂ ನನ್ನನ್ನು ಪ್ರಶ್ನಿಸಬಾರದು ಎಂಬ ಷರತ್ತು ಹಾಕಿರುತ್ತಾಳೆ. ಏಳು ಬಾರಿ ಮಕ್ಕಳನ್ನು ಗಂಗೆ ನದಿಗೆ ಎಸೆದರು ಸುಮ್ಮನಿದ್ದ ಶಂತಲು ಎಂಟನೆಯ ಮಗುವನ್ನು ನದಿಗೆ ಎಸೆಯುವಾಗ ಅವಳನ್ನು ತಡೆದು ಪ್ರಶ್ನಿಸಿಸುತ್ತಾನೆ. ಆಗ ಗಂಗೆ "ಅವನೀಂದ್ರಾ ಕೊಟ್ಟ ಮಾತಿಗೆ ತಪ್ಪಿ ನನಗೆ ಅವಮಾನ ಮಾಡಿದ್ದೀಯಾ. ನನ್ನ ಕೆಲಸಕ್ಕೆ ಅಡ್ಡಿಯುಂಟು ಮಾಡಿ ಅಪ್ರಿಯವಾದ ಮಾತುಗಳನ್ನು ಆಡಿದ್ದೀಯಾ ಇನ್ನು ನನಗೂ ನಿನಗೂ ಯಾವ ಸಂಬಂಧವು ಇಲ್ಲ"[೧೨] ಎಂದು ಹೇಳಿ ಅವನನ್ನು ತೊರೆದು ಹೋಗುತ್ತಾಳೆ.

ಇಲ್ಲಿ ಗಂಗೆ ಶಂತಲುನೊಂದಿಗೆ ಸಂಸಾರ ಮಾಡಲಾರದೆ ಅಥವಾ ಸಂಸಾರ ನಿಭಾಯಿಸುವ ಶಕ್ತಿಯಿಲ್ಲದೆ ಅವನನ್ನು ನಿರಾಕರಿಸಿ ಹೋಗುವದಿಲ್ಲ. ಬದಲಾಗಿ ತನ್ನನ್ನು ಪ್ರಶ್ನಿಸುವ ಮೂಲಕ ತನ್ನ ಸ್ವಾತಂತ್ರ್ಯವನ್ನು ಕಿತ್ತುಕೊಂಡು, ತನ್ನ ಮೇಲೆ ಅಧಿಕಾರ ಚಲಾಯಿಸುವ ಗಂಡನೊಂದಿಗೆ ಬಾಳುವ ಅನಿವಾರ್ಯತೆಗೆ ಇಳಿಯುವುದಿಲ್ಲ. ಸ್ವಾಭಿಮಾನದಿಂದ ಗಂಗೆ ಅವನನ್ನು ತೊರೆಯುತ್ತಾಳೆ.

ತಮಗೆ ವಿಧಿಸಲಾಗಿರುವ ಪಾತಿವ್ರತ್ಯದ ನಿಬಂಧನೆಯನ್ನು ಪುರುಷರು ಅನುಸರಿಸಬೇಕೆಂಬ ಅಪೇಕ್ಷೆಯನ್ನು ಕೆಳವರ್ಗದ ಮಹಿಳೆಯರು ಹೊಂದಿದ್ದಾರೆ. 'ಸಿರಿಪಾಡ್ದನ'ದ ಸಿರಿ ತನ್ನ ಸೀಮಂತದ ಬಯಕೆಯ ಸೀರೆಯನ್ನು ತನ್ನ ಪತಿಯ ಸೂಳೆ ಉಟ್ಟುಬಿಟ್ಟಿದ್ದರಿಂದ ಅದನ್ನು ಉಡಲು ನಿರಾಕರಿಸುತ್ತಾಳೆ.

"ಈ ಪಟ್ಟೆ ಸೀರೆ
ಕಡೇರಿಕಾರ್ಲದ ಕೊಡಿ ಕುಂಬಳೆಯ ಸೂಳೆ
ಸಿದ್ದು ಉಟ್ಟಬಿಟ್ಟ ಪಟ್ಟಿಸೀರೆ
ಅದನ್ನ ನನ್ನ ಮೈಯಲ್ಲಿ ಉಡಲಾರೆ
ಇಂದು ನಾನು ಉಟ್ಟ ಹಳೆ ಸೀರೆಯಲ್ಲೇ
ನನಗೆ ಬಯಕೆಯ ಮದುವೆಯ ಸಮ್ಮಾನ ಆಗಬೇಕು"[೧೩]

ಎಂದು ಆ ಸೀರೆಯನ್ನು ಸತ್ಯದಂಡಿಗೆಯ ಕೋಲಿಗೆ ಬೀಸಿ ಎಸೆಯುತ್ತಾಳೆ. ಅವಳ ಈ ನಿರಾಕರಣೆಯ ಹಿಂದೆ ತನ್ನ ಪತಿಯು ಸಹ ಈ ಪಾತಿವ್ರತ್ಯದ ನಿಯಮವನ್ನು ಪಾಲಿಸಬೇಕೆಂಬ ಆಗ್ರಹವಿದೆ.

ನಂತರ ತವರನ್ನು ಬಿಟ್ಟು ಮಗುವಿನೊಂದಿಗೆ ಗಂಡನ ಮನೆಗೆ ಬಂದಾಗ ಗಂಡ ಅವಳನ್ನು "ತವರನ್ನು ಧಿಕ್ಕರಿಸಿ ಬಂದ ಹೆಣ್ಣು ನೀನು ತಾನೇ"[೧೪] ಎಂದು ಅವಳನ್ನು ಅಪಮಾನಿಸುತ್ತಾನೆ. ಆಗ ಕೆರಳಿದ ಸಿರಿ ಕೈ ಬಳೆ ಒಡೆದು, ಮೂಗಿನ ನತ್ತು ಕಿತ್ತು, ಕೊರಳಿನ ಕರಿಮಣಿ ಕಡೆದು ಎಸೆದು, ವಿಚ್ಛೇದನ ಕೇಳುತ್ತಾ "ಇನ್ನು ಮುಂದಾದರೂ ಕೆಟ್ಟ ಗಂಡನೊಂದಿಗೆ ಬಾಳುವ ಹೆಣ್ಣಿನ ಗೋಳು ತಪ್ಪಬೇಕು. ಅಂಥ ಹೆಣ್ಣಿಗೆ ಎರಡನೇ ಮದುವೆಯಾಗುವ ಕಟ್ಟು ಬರಬೇಕು"[೧೫] ಎಂದು ಕ್ರೋಧದಿಂದ ಹೇಳಿ ಗಂಡನ ಮನೆಗೆ ಕೆಟ್ಟದಾಗಲಿ ಎಂದು ಮಣ್ಣು ಮುಟ್ಟಿ ಶಾಪ ಹಾಕುತ್ತಾಳೆ.

ತಾನಿರುವಾಗ ಅನ್ಯಸ್ತ್ರೀ ಸಂಗ ಮಾಡುವ, ತನ್ನನ್ನು ಅಪಮಾನಿಸುವ ಪತಿಯನ್ನು ಸಿರಿ ನಿರಾಕರಿಸುತ್ತಾಳೆ. ಜೊತೆಗೆ ಅವನೇ ಇಲ್ಲದ ಮೇಲೆ ಅವನ ಇರುವಿಕೆಯನ್ನು ಸೂಚಿಸುವ

ವಸ್ತುಗಳೇಕೆಂದು ಅವುಗಳನ್ನು ಕಿತ್ತೆಸೆಯುತ್ತಾಳೆ. ತನ್ನನ್ನು ಬಂಧನಕ್ಕೀಡುಮಾಡುವ ಸಾಂಪ್ರದಾಯಿಕ ಗುರುತುಗಳನ್ನು ನಿರಾಕರಿಸುತ್ತಾಳೆ. ಅವಳ ಈ ನಿರಾಕರಣೆಯ ಹಿಂದೆ ತನ್ನ ಪತಿಯು ಸಹ ಈ ಪಾತಿವ್ರತ್ಯದ ನಿಯಮವನ್ನು ಪಾಲಿಸಬೇಕೆಂಬ ಆಗ್ರಹವಿದೆ.

'ನಾಗರಕನ್ನೆ' ಎಂಬ ಜನಪದ ಕಾವ್ಯದಲ್ಲಿ ಮಹಿಳೆ ಪತಿಯ ಲಂಪಟತನವನ್ನು ವಿರೋಧಿಸುವ ಪ್ರಸಂಗವಿದೆ.[೧೬] ಸೂಳೆಗೆ ಹೋದ ಪತಿಯನ್ನು ಸರಿದಾರಿಗೆ ತರಲು ನಾಗರಕನ್ನೆ ಗೊಲ್ಲತಿಯ ವೇಷ ಹಾಕಿ ಸೂಳೆ ಮನೆಗೆ ಹೋಗುತ್ತಾಳೆ. ತನ್ನ ರೂಪಕ್ಕೆ ಮೋಹಗೊಂಡ ಪತಿ ಅವಳೊಂದಿಗೆ ಬರಲು ಸಿದ್ಧನಾದಾಗ ಸೂಳೆ ಮೂಗನ್ನು ಕತ್ತರಿಸಿ ಬಾ ಎಂದು ತಿಳಿಸುತ್ತಾಳೆ. ಸೂಳೆಯ ಮೂಗನ್ನು ಕತ್ತರಿಸಿದ ಪತಿಯನ್ನು ಮನೆಗೆ ಕರೆದೊಯ್ಯುತ್ತಾಳೆ. ಆದರೆ ಅವನ ಜೊತೆ ಸಂಸಾರ ಮಾಡದೆ ಅಗ್ನಿಗೆ ಹಾರುತ್ತಾಳೆ. ಪತಿಯು ಅಗ್ನಿಗೆ ಹಾರುತ್ತಾನೆ. ಆದರೆ ಅಗ್ನಿಯಿಂದ ಹೊರಹೊಮ್ಮಿದ ಹೊಗೆ ಮಾತ್ರ ಎರಡು ಕವಲುಗಳಾಗಿ ಹೊರಹೊಮ್ಮುತ್ತದೆ. ಇಲ್ಲಿ ನಾಗರಕನ್ಯೆ ತನ್ನ ಸಂಸಾರವನ್ನು ಹಾಳು ಮಾಡಿದ ಸೂಳೆ ಮೂಗನ್ನು ಕತ್ತರಿಸಿ ಪ್ರತಿಕಾರ ತೀರಿಸಿಕೊಂಡು ಪಾಠ ಕಲಿಸುತ್ತಾಳೆ. ಜೊತೆಗೆ ತನಗೆ ಮೋಸ ಮಾಡಿದ ಗಂಡನನ್ನು ಸತ್ತ ನಂತರ ಹೊಗೆಯಲ್ಲಿಯೂ ಸೇರಲು ಇಷ್ಟಪಡುವುದಿಲ್ಲ. ನೈತಿಕತೆ ಮೀರುವ, ಮೋಸ ಮಾಡುವ ವ್ಯಕ್ತಿಯೊಂದಿಗೆ ಜೀವನದಲ್ಲಿ ಮಾತ್ರವಲ್ಲ ಸಾವಿನಲ್ಲಿಯೂ ಒಂದಾಗಲು ಬಯಸುವುದಿಲ್ಲ. ಪ್ರಾಮಾಣಿಕತೆ, ನಂಬಿಕೆಯ ಬದುಕನ್ನು ಜೀವಿಸುವ ಕೆಳವರ್ಗದ ಮಹಿಳೆಯರು ಮತ್ತೊಬ್ಬರಿಂದಲೂ ಅದನ್ನು ನಿರೀಕ್ಷಿಸುತ್ತಾರೆ.

ತಮ್ಮ ಬದುಕಿಗಾಗಿ ಕುಟುಂಬದಲ್ಲಿ ಬರುವ ಅಪಮಾನಗಳನ್ನು ಸಹಿಸುವ ಕೆಳವರ್ಗದ ಮಹಿಳೆಯರು, ತಮ್ಮ ಕುಟುಂಬದ ನಿಕಟವರ್ತಿಗಳು ಅಥವಾ ಸಮುದಾಯದವರು ಅಪಮಾನಿಸಿದರೆ ಅವರ ವಿರುದ್ಧ ತಿರುಗಿ ನಿಲ್ಲುವ ಛಾತಿಯನ್ನು ಸಹ ಹೊಂದಿದ್ದಾರೆ.

'ವಡ್ಡಾರಾಧನೆ' ಕೃತಿಯ 'ಸುಕುಮಾರಸ್ವಾಮಿಯ ಕಥೆ'ಯಲ್ಲಿ ತಮಗಾದ ಅಪಮಾನಕ್ಕೆ ಪ್ರತಿಕಾರ ತೀರಿಸಿಕೊಳ್ಳುವ ಕೆಳವರ್ಗದ ಮಹಿಳೆಯ ಚಿತ್ರಣವನ್ನು ಕಾಣಬಹುದು. ಈ ಕಥೆಯಲ್ಲಿ ಅಗ್ನಿಭೂತಿಯ ಹೆಂಡತಿ ಸೋಮದತ್ತೆ ಮೈದುನ ವಾಯುಭೂತಿಗೆ ಒಳ್ಳೆಯ ಉಪದೇಶ ನೀಡುತ್ತಾಳೆ. ಆದರೆ ಮೈದುನ ಅವಳ ಮನೆಯಲ್ಲಿರುವುದನ್ನೆಲ್ಲ ಕಿತ್ತುಕೊಂಡು ನಿನ್ನ ಗಂಡ ಸವಣನಿದ್ದಲ್ಲಿಗೆ ಹೋಗು ಎಂದು ಹೇಳಿ ಅವಳನ್ನು ಕಾಲಿನಿಂದ ಒದ್ದು ಕಳಿಸುತ್ತಾನೆ. ಇದರಿಂದ ನೊಂದ ಸೋಮದತ್ತೆ "ಮುಂದಿನ ಜನ್ಮದಲ್ಲಿ ನರಿಯಾಗಿ ಹುಟ್ಟಿ ನನ್ನ ನಾಲ್ಕು ಮಕ್ಕಳೊಂದಿಗೆ ಬಂದು ನಿನ್ನ ಕರುಳನ್ನು ಬಗೆದು ತಿನ್ನುತ್ತೇನೆ"[೧೭] ಎಂದು ಪ್ರತಿಜ್ಞೆ ಮಾಡಿ ಹೋಗುತ್ತಾಳೆ. ಅಂತೆಯೇ ಮುಂದಿನ ಜನ್ಮದಲ್ಲಿ ಪ್ರತಿಜ್ಞೆ ನೆರವೇರಿಸಿಕೊಳ್ಳುತ್ತಾಳೆ. ಅತ್ತಿಗೆ ಎಂಬ ಗೌರವ ಕೊಡದೆ ಅವಳನ್ನು ಕಾಲಿನಿಂದ ಒದ್ದು ಅಪಮಾನಗೊಳಿಸಿದ್ದರಿಂದ, ನೊಂದು ಅಪಮಾನಿತಗೊಂಡ ಸೋಮದತ್ತೆ ಅವನ ಅಹಂಕಾರ, ಹೇಯ ನಡುವಳಿಕೆಗೆ ಸವಾಲು ಹಾಕಿ ಅದನ್ನು ಸಾಧಿಸಿಕೊಳ್ಳುತ್ತಾಳೆ.

ಹೀಗೆ ಕುಟುಂಬದ ನಿರ್ವಹಣೆಯ ಜವಾಬ್ದಾರಿ ಹೊತ್ತ ಕೆಳವರ್ಗದ ಮಹಿಳೆಯರು ಕೌಟುಂಬಿಕ ಬದುಕನ್ನು ರೂಪಿಸಿಕೊಳ್ಳುವುದರೊಂದಿಗೆ ಕುಟುಂಬದ ಆರ್ಥಿಕ ಪರಿಸ್ಥಿತಿಯ ನಿರ್ವಹಣೆಗಾಗಿ

ದುಡಿಯುವದು ಅನಿವಾರ್ಯವಾಗಿತ್ತು. ಈ ದುಡಿತಕ್ಕಾಗಿ ಅವಳು ಮನೆಯಿಂದ ಹೊರಬೀಳಬೇಕಾಯ್ತು. ಆ ಅನಿವಾರ್ಯತೆಯೇ ಅವಳಿಗೆ ಹೊರಗಡೆ ಬಂದಾಗ ಎದುರಾದಂತಹ ಸಮಸ್ಯೆಗಳನ್ನು ಎದುರಿಸುವ ಛಲ, ಧೈರ್ಯ ತಂದುಕೊಟ್ಟಿತು. ಇಲ್ಲಿ ಅವಳ ಹಕ್ಕುಗಳಿಗೆ ಚ್ಯುತಿಯಾಗುವಂತಹ, ಅವಳು ಒಪ್ಪಿಕೊಂಡ ಮೌಲ್ಯಗಳಿಗೆ ಧಕ್ಕೆಯಾಗುವಂತಹ, ಗೌರವ, ಸ್ವಾಭಿಮಾನಗಳನ್ನು ನಾಶಗೊಳಿಸುವಂತಹ ಸಂದರ್ಭಗಳು ಅವಳಿಗೆ ಎದುರಾದವು. ಅಂತಹ ಪ್ರಸಂಗಗಳಲ್ಲಿ ತನಗೆ ಕುತ್ತು ತಂದವರ ವಿರುದ್ಧ ಸಂಘರ್ಷಕ್ಕಿಳಿದು ತನ್ನ ಸ್ವಾತಂತ್ರ್ಯ ಹಾಗೂ ಜೀವವನ್ನು ರಕ್ಷಿಸಿಕೊಂಡಳು. ಧಾರ್ಮಿಕ ಅಕ್ರಮಗಳಾದಾಗ ಅವುಗಳ ವಿರುದ್ಧ ಹೋರಾಡಿ ತನ್ನ ಸಂಸ್ಕೃತಿಯನ್ನು ರಕ್ಷಿಸಿಕೊಂಡಳು. ಪುರುಷರ ಆಕ್ರಮಣದಂತಹ ಪ್ರಸಂಗಗಳು ಎದುರಾದಾಗ ಅವುಗಳನ್ನು ತನ್ನ ಚಾಣಾಕ್ಷತನದಿಂದ ಪರಿಹರಿಸಿಕೊಂಡಳು. ಪುರುಷ ಅಹಂಕಾರ ತೋರಿದಾಗ ಆತನನ್ನು ಪ್ರಶ್ನಿಸುವ ಎದೆಗಾರಿಕೆ ತೋರಿದಳು. ಜಾತಿ ಆಧರಿಸಿ ಕೀಳಾಗಿ ಕಂಡಾಗ ಸಾಹಿತ್ಯ, ಕಲೆಗಳಲ್ಲಿ ಪ್ರೌಢಿಮೆಯನ್ನು ಸಾಧಿಸುವ ಮೂಲಕ ಆ ಕೀಳುತನವನ್ನು ನೀಗಿಕೊಂಡಳು. ಅಪಮಾನವಾದಾಗ ಅಪಮಾನಿಸಿದವರನ್ನು ತಿರಸ್ಕರಿಸಿ ನಡೆದಳು. ತನ್ನ ಸಂಕಷ್ಟಗಳನ್ನು ನಿವಾರಿಸಿಕೊಳ್ಳುವುದರೊಂದಿಗೆ ಸಂಕಷ್ಟದಲ್ಲಿರುವವರಿಗೆ ಸಾಂತ್ವನ, ಮಾರ್ಗದರ್ಶನ ಮಾಡಿದಳು. ತನ್ನ ಹಕ್ಕುಗಳಿಗೆ ಚ್ಯುತಿ ಬಂದಾಗ ಅವುಗಳಿಗಾಗಿ ಹೋರಾಡಿದಳು.

ಬದುಕಿಗಾಗಿ ಬಯಲಿಗೆ ಬಂದ ಇಂಥ ಮಹಿಳೆಯರು ಸುಶಿಕ್ಷಿತ ಮಹಿಳೆಯರಿಗಿಂತ ಹೆಚ್ಚಿನ ಭದ್ರತೆ, ಸ್ವಾವಲಂಬನೆಯನ್ನು ಗಳಿಸಿಕೊಂಡರು. ಕುಟುಂಬ ನಿರ್ವಹಣೆಯನ್ನು ಕೇವಲ ಕರ್ತವ್ಯವೆಂದು ತಿಳಿಯದೆ ಅದನ್ನು ತನ್ನ ಬದುಕೆಂದು ಭಾವಿಸಿದಳು. ಆ ಬದುಕು ರೂಪಿಸಿಕೊಳ್ಳುವ ಆಸೆಯೇ ಅವಳಿಗೆ ಎದುರಾದ ಎಲ್ಲ ಸಮಸ್ಯೆಗಳನ್ನು ಎದುರಿಸುವ ಶಕ್ತಿಯನ್ನು ನೀಡಿತು. ಆ ಮೂಲಕ ತನ್ನ ಕುಟುಂಬದ ಸುರಕ್ಷತೆಯನ್ನು ಮಾಡಿಕೊಂಡಳು.

ಲಂಕೇಶರ 'ಅವ್ವ' ಕೆಳವರ್ಗದ ಮಹಿಳೆಯರ ದುಡಿತಕ್ಕೆ ಒಂದು ಜ್ವಲಂತ ಸಾಕ್ಷಿಯಾಗಿದ್ದಾಳೆ. ಇಲ್ಲಿ ಅವ್ವ ಬದುಕಿದ್ದು

"ಕಾಳುಕಡ್ಡಿಗೆ ದುಡಿತಕ್ಕೆ ಮಕ್ಕಳಿಗೆ
ಮೇಲೊಂದು ಸೂರು
ಅಕ್ಕಿ ರೊಟ್ಟಿ ಹಚಡಕ್ಕೆ ಸರಿಕರ
ಎದುರು ತಲೆಯೆತ್ತಿ ನಡೆಯಲಿಕ್ಕೆ"[೧೮]

ಇದಕ್ಕಾಗಿ ಅವ್ವ ಪುರುಷನಿಗೆ ಸಮನಾಗಿ ಪಲ್ಲ ಜೋಳದ ಚೀಲವನ್ನು ಹೊರುತ್ತಾಳೆ. ಹೆಂಟೆಗೊಂದು ಮೊಗೆ ನೀರುಣಿಸುತ್ತಾಳೆ. ಹೊಲವನ್ನು ಕೈಯಲ್ಲಿ ಊಳುತ್ತಾಳೆ. ಈ ಮೈಮುರಿವ ದುಡಿತ ಅವಳಿಗೆ ಹೊರೆಯಲ್ಲ. ಅವಳು ದುಡಿಮೆಯನ್ನು ತನ್ನ ಬದುಕಾಗಿ ಮಾಡಿಕೊಂಡು ಸಮಾಜದಲ್ಲಿ ಹೋರಾಡುತ್ತಾಳೆ. ಇಂತಹ ಅವ್ವ ದೇವರ ಪೂಜೆ, ಉಪವಾಸ, ವ್ರತಗಳನ್ನು ಮಾಡುವುದಿಲ್ಲ. ಸೀತೆ, ಸಾವಿತ್ರಿಯರು ಅವಳಿಗೆ ಆದರ್ಶ ಮಹಿಳೆಯರೂ ಅಲ್ಲ. ಅವಳ ಬದುಕು ಕಟ್ಟಿಕೊಳ್ಳಲು ಅವಳಿಗೆ ಅವಳೇ ಆದರ್ಶ.

ಚಿಕ್ಕಮಕ್ಕಳು, ಗಂಡನನ್ನು ಸಾಕುವ ಇವಳು ಅದಕ್ಕಾಗಿ ನಾಯಿ, ಕೋತಿಯ ಹಾಗೆ ಗೋಣಗಾಟ, ಚೀರಾಟ ಮಾಡುತ್ತಾಳೆ ಹೊರತು, ಅವರ ವಿರುದ್ಧ ಜೋರಾಗಿ ಘರ್ಜಿಸುವುದೂ ಇಲ್ಲ. ಅವರ ಹೊರೆಯನ್ನು ನಿರಾಕರಿಸುವುದೂ ಇಲ್ಲ. ಆದರೆ ಇವಳು ಉರಿದೇಳುವದು "ಮಗ ಕೆಟ್ಟರೆ, ಗಂಡ ಪರಸ್ತ್ರೀಯರ ಕಡೆ ಹೋದಾಗ ಮಾತ್ರ."[೧೯] ಮನೆಯ ನಿರ್ವಹಣೆಗೆ ಹೊರಗೆ ದುಡಿಯುವ ಕೆಳವರ್ಗದ ಮಹಿಳೆಯರು ಮನೆ ನಿರ್ವಹಿಸುವುದರೊಂದಿಗೆ ಗಂಡ, ಮಕ್ಕಳು ದಾರಿತಪ್ಪದಂತೆ ಎಚ್ಚರಿಕೆ ವಹಿಸುವ ಕಾರ್ಯವನ್ನು ಮಾಡುತ್ತಾರೆ.

ಕೆಳವರ್ಗದ ಮಹಿಳೆಯ ಪಾಲಿಗೆ ದುಡಿತವೇ ದೇವರು. ಅದರಿಂದ ಬದುಕು ಕಟ್ಟಿಕೊಳ್ಳುವುದೇ ದೇವರ ಸೇವೆ ಹೊರತು, ಉಪವಾಸ, ವೃತಗಳ ಪಾಲನೆಯಲ್ಲ. ದುಡಿತ ಮತ್ತು ಅದರಿಂದ ಬದುಕು ಕಟ್ಟಿಕೊಳ್ಳಲು ಸಮಾಜದ ರೀತಿನೀತಿಗಳಿಗೆ ಭಿನ್ನವಾಗಿ ನಡೆಯುವುದು ಕೆಳವರ್ಗದ ಮಹಿಳೆಯರಿಗೆ ಕಷ್ಟದ ಕೆಲಸವಲ್ಲ. ಬಡತನ ಹಾಗೂ ಸ್ವಾಭಿಮಾನದ ದುಡಿಮೆ ಅವರಿಗೆ ಈ ಸ್ವಾವಲಂಬಿತನವನ್ನು ತಂದುಕೊಟ್ಟಿದೆ.

ಸಮಾಜದಲ್ಲಿ ಒಳ್ಳೆಯ ಗುಣದ ಸೋಗು ಹಾಕಿ ಮತ್ತೊಬ್ಬರನ್ನು ವಂಚಿಸುವ, ಪರಸ್ತ್ರೀಯರನ್ನು ಆಸೆಪಡುವ ಜನರು ಇರುತ್ತಾರೆ. ದುಡಿತಕ್ಕಾಗಿ ಹೊರಬಂದ ಈ ಮಹಿಳೆಯರು ಅಂಥವರಿಂದ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ಕೆಳವರ್ಗದ ಮಹಿಳೆಯರು ಧೈರ್ಯದಿಂದ ಅವರಿಗೆ ಪ್ರತ್ಯುತ್ತರ ಕೊಟ್ಟು, ಚಾಣಾಕ್ಷತನದಿಂದ ಅಂಥವರಿಗೆ ಪಾಠ ಕಲಿಸಿ ತಮಗೆ ಎದುರಾದ ಸಮಸ್ಯೆಗಳನ್ನೆಲ್ಲ ನಿವಾರಿಸಿಕೊಳ್ಳುತ್ತಾರೆ.

ಶರಣೆ ಅಮ್ಮುಗೆ ರಾಯಮ್ಮ ಶರಣರ ವೇಷ ತೊಟ್ಟು ಒಳಗೆ ಪರಸ್ತ್ರೀ ವ್ಯಾಮೋಹ ಹೊಂದಿದ ಲಂಪಟರನ್ನು ತರಾಟೆಗೆ ತೆಗೆದುಕೊಳ್ಳುವ ಬಗೆ ವಿಶಿಷ್ಟವಾದುದು.

> "ಕಾವಿಕಾಷಾಂಬರವ ಹೊದ್ದು ಕಾಮ ವಿಕಾರಕ್ಕೆ ತಿರುಗುವ
> ಕರ್ಮಿಗಳ ಮುಖವ ನೋಡಲಾಗದು
> ಜಂಗಮವಾಗಿ ಜಗದಿಚ್ಚೆಯ ನುಡಿವ,
> ಜಂಗುಳಿಗಳ ಮುಖವ ನೋಡಲಾಗದು,
> ಲಿಂಗೈಕ್ಯರೆನಿಸಿಕೊಂಡು ಅಂಗವಿಕಾರಕ್ಕೆ ತಿರುಗುವ,
> ಲಿಂಗದ್ರೋಹಿಗಳ ಮುಖವ ನೋಡಲಾಗದು
> ಕಾಣಾ ಅಮುಗೇಶ್ವರ ಲಿಂಗವೇ"[೨೦]

ಎಂದು ಕಾಮವಿಕಾರಿಗಳ ಬಗ್ಗೆ ನಿರ್ಭಯದಿಂದ ದೂರುತ್ತಾಳೆ. ಕೆಳವರ್ಗದ ವಚನಕಾರ್ತಿ ಅಮುಗೆರಾಯಮ್ಮ ತಾನು ನಿವಾರಿಸಿಕೊಂಡ ಲಿಂಗಭಯ, ಗಳಿಸಿದ ಮನೋಬಲದ ಸಾಮರ್ಥ್ಯದಿಂದ ಇಂಥವರ ವಿರುದ್ಧ ಕಟುವಾದ ಮಾತುಗಳನ್ನಾಡುತ್ತಾಳೆ.

'ಕೊರಾಚಿಕಂಚಿ' ಎಂಬ ಜನಪದ ಕಾವ್ಯ ಮೇಲ್ವರ್ಗದ ಆಕ್ರಮಣಕಾರಿ ನೀತಿವಿರುದ್ಧ ಪ್ರತಿಭಟಿಸುವ ಹಾಗೂ ಪ್ರಶ್ನಿಸುವ ಕೆಳವರ್ಗದ ಮಹಿಳೆಯ ಗಟ್ಟಿತನವನ್ನು ಕಟ್ಟಿಕೊಡುತ್ತದೆ.[೨೧] ಮೇಲ್ವರ್ಗದ

ನಾರಾಯಣಸ್ವಾಮಿ ತನ್ನನ್ನು ಬಯಸಿದಾಗ ಗಂಡನಿಗೆ ಊಟಕ್ಕಿಟ್ಟು ಬರುವೆನೆಂದು ಉಪಾಯದಿಂದ ತೆರಳಿ, ನಾರಾಯಣನ ಹೆಂಡತಿ ಮಾಲಕ್ಷ್ಮಿ ಅಮ್ಮೋರನ್ನು ಅವನಲ್ಲಿಗೆ ಕಳುಹಿಸಿ ತಾನು ಆತನ ಲೈಂಗಿಕ ವಾಂಛಲ್ಯತೆಯಿಂದ ಪಾರಾಗುತ್ತಾಳೆ. ಅವಳು ಇಲ್ಲಿ ನಾರಾಯಣನಿಂದ ತಪ್ಪಿಸಿಕೊಳ್ಳಲು ಪತಿ ಅಥವಾ ಬೇರೆಯವರ ಸಹಾಯ ಪಡೆಯದೆ ತಾನೇ ಯುಕ್ತಿ ಬಳಿಸಿ ಆತನಿಂದ ಪಾರಾಗುತ್ತಾಳೆ.

ಕೆಳವರ್ಗದ ಮಹಿಳೆಯರು ಜಾತಿಯಾಧಾರಿತ ಕೀಳುತನದ ನೆಲೆಗಳನ್ನು ಪ್ರತಿಭಟಿಸುತ್ತಾರೆ. ಹಾಗೆ ಹೇಳಿದವರ ಜಾತಿಯನ್ನು ಪ್ರಶ್ನಿಸುವ ಎದೆಗಾರಿಕೆ ಇವರಲ್ಲಿದೆ. ಅಮ್ಮುಗೆ ರಾಯಮ್ಮ,

"ಶೀಲವಂತನಾದಡೆ ಜಾತಿ ಬಿಡಬೇಕು
ಶಿವಜ್ಞಾನಿಯಾದಡೆ ಸಮಯವ ಬಿಡಬೇಕು
ಹಿಂಗಲ್ಲದೆ ಜಗದಲ್ಲಿ ನಡೆವ ಭ್ರಾಂತರ ಸುದ್ಧಿಯೇಕೆ
ನಿಭ್ರಾಂತನಾದ ಶರಣ ಅಮುಗೇಶ್ವರಾ"[೨೨]

ಎಂದು ಜಾತಿಯನ್ನು ಆಚರಿಸುವವರು ಶರಣರಲ್ಲ ಎಂದು ದೂರುತ್ತಾಳೆ.

ಕೆಳವರ್ಗದವರ ಮುಖ ನೋಡುವುದು ಅಪವಾದ ಎಂಬ ವೈದಿಕ ಧರ್ಮ ಕಟ್ಟಿದ ಕಥೆಯನ್ನು ಭಂಜಿಸಿ ಆ ಪರಂಪರೆಗೆ ಸವಾಲು ಹಾಕಿದವಳು ಕೆಳವರ್ಗದ ವಚನಕಾರ್ತಿಯರಲ್ಲಿ ಒಬ್ಬಳಾದ ಉರಿಲಿಂಗದೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ –

"ಶಿವಭಕ್ತ ಹೊತ್ತಾರೆಯೆದ್ದು ಗುರುಲಿಂಗ ಜಂಗಮಕ್ಕೆ ಶರಣೆನ್ನದೆ
ಮುನ್ನ ಒಂಟಿ ಬ್ರಾಹ್ಮಣ ಕಂಡು ಶರಣಾರ್ಥಿ ಎಂದಡೆ
ಎಂಬತ್ತನಾಲ್ಕು ಯೋನಿಯಲ್ಲಿ ಹಂದಿಯ ಬಸುರಲ್ಲಿ ಬಪ್ಪುದು ತಪ್ಪದು ಕಾಣಾ
ಉರಿಲಿಂಗ ಪೆದ್ದಿಗಳರಸ ಒಲ್ಲೆನವ್ವಾ"[೨೩]

ಎಂದು ವೈದಿಕ ಸಂಪ್ರದಾಯವನ್ನು ಧಿಕ್ಕರಿಸುತ್ತಾಳೆ. ಆ ಸಂಪ್ರದಾಯದಿಂದ ಉಂಡ ನೋವುಗಳು ಅದರ ವಿರುದ್ಧ ಈ ಮಹಿಳೆಯರು ತಿರುಗಿ ಬೀಳುವಂತೆ ಮಾಡುತ್ತವೆ.

ಕುವೆಂಪು ಅವರ 'ಬೆರಳ್ಗೆ ಕೊರಳ್' ನಾಟಕ ಕೆಳವರ್ಗದ ಮಹಿಳೆಯರ ಘರ್ಷಣೆಯನ್ನೆ ಕಟ್ಟಿಕೊಡುತ್ತದೆ. ಕೆಳಜಾತಿಯವನಿಗೆ ವಿದ್ಯೆ ಕಲಿಸಲು ನಿರಾಕರಿಸಿದ ದ್ರೋಣಾಚಾರ್ಯರು, ಅರ್ಜುನನಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲು ಏಕಲವ್ಯನ ಬೆರಳನ್ನು ಬಲಿ ಪಡೆಯುತ್ತಾರೆ. ಜಾತಿ ಮತ್ತು ಆರ್ಥಿಕ ಪ್ರಾಬಲ್ಯದಿಂದ ದ್ರೋಣಾಚಾರ್ಯರು ಏಕಲವ್ಯನ ಬೆರಳು ಪಡೆದಾಗ ಏಕಲವ್ಯ ಯಾವುದೇ ಪ್ರತಿರೋಧವಿಲ್ಲದೆ ನೀಡುತ್ತಾನೆ. ಆದರೆ ನಂತರ ಬಂದ ಏಕಲವ್ಯನ ತಾಯಿ ತನ್ನ ಮಗನಿಗಾದ ಸ್ಥಿತಿಯಿಂದ ನೊಂದು ಹೊಟ್ಟೆಯುರಿದುಕೊಂಡು ಇದಕ್ಕೆ ಕಾರಣರಾದವರ ವಿರುದ್ಧ

"ಆರ್ಗೊ ಬಲಿ ನನ್ನ ಕಂದನ ಬೆರಳ್
ಬಲಿಯಕ್ಕೆ ಆ ಪಾಪಿಯ ಕೊರಳ್"[೨೪]

ಎಂದು ಶಾಪ ಹಾಕುತ್ತಾಳೆ. ಮೇಲ್ವರ್ಗದ ಅಹಂಕಾರದ ಅಟ್ಟಹಾಸಕ್ಕೆ ಮುಗ್ಧ ಮಗನ ಬೆರಳು ಬಲಿಯಾದದ್ದು ಅವಳಲ್ಲಿ ಕ್ರೋಧವನ್ನುಂಟು ಮಾಡುತ್ತದೆ. ತನ್ನ ಮಗನ ವಿದ್ಯೆ, ಶಕ್ತಿಯನ್ನು ನಾಶಗೊಳಿಸಿದವರ ವಿರುದ್ಧ ಕುದಿದು ಶಾಪನೀಡುತ್ತಾಳೆ. ದ್ರೋಣಾಚಾರ್ಯರು ಜಾತಿ, ವರ್ಗದಿಂದ ಮೇಲಿದ್ದರೂ, ಶ್ರೇಷ್ಠ ಬಿಲ್ವಿದ್ಯೆ ಗುರುವಾಗಿದ್ದರೂ, ಏಕಲವ್ಯನ ತಾಯಿಯ ಶಾಪಕ್ಕೆ ತನ್ನ ಕೊರಳನ್ನು ಬಲಿಕೊಡಬೇಕಾಗುತ್ತದೆ.

ಹಾಗೆಯೇ ತಾವು ಒಪ್ಪಿಕೊಂಡ ತತ್ವಗಳಿಗೆ ಬದ್ಧರಾಗಿರುವ ಕೆಳವರ್ಗದ ಮಹಿಳೆಯರು ತಮ್ಮ ತತ್ವಗಳಿಗೆ, ಆಚಾರವಿಚಾರಗಳಿಗೆ ಧಕ್ಕೆಯಾದಾಗ ಅದನ್ನು ಪ್ರತಿಭಟಿಸುವ ಧೋರಣೆಯನ್ನು ಕಾಣಬಹುದಾಗಿದೆ.

ಕ್ಷೌರಿಕ ವೃತ್ತಿಯನ್ನು ಮಾಡುವ ಕನ್ನಡಿ ಕಾಯಕದ ರೇವಮ್ಮ ಶರಣರು ಲಿಂಗ ಜಂಗಮ ಪ್ರಸಾದಕ್ಕೆ ನಿಷ್ಠರಾಗಿ ನಡೆಯಬೇಕೆಂದು ಹೇಳುತ್ತಾಳೆ. ಹಾಗೆ ನಡೆಯದವರು ಅನಾಚಾರಿಗಳು.

"ಕೈಯಲ್ಲಿ ಕನ್ನಡಿಯಿರಲು ತನ್ನ ತಾ ನೋಡಬಾರದೆ?
ಲಿಂಗಜಂಗಮದ ಪ್ರಸಾದಕ್ಕೆ ತಪ್ಪಿದಲ್ಲಿ ಕೊಲ್ಲಬಾರದೆ?
ಕೊಂದದೆ ಮುಕ್ತಿಯಿಲ್ಲವೆಂಬುವವರ ಬಾಯಲ್ಲಿ
ಪಡಿಹಾರನ ಪಾದರಕ್ಷೆಯನ್ನಿಕ್ಕಿವೆ ಮುಂಡಿಗೆಯನೆತ್ತಿರೊ ಭ್ರಷ್ಟಭವಿಗಳಿರಾ!
ಎತ್ತಲಾರದ ಸತ್ತ ಕುನ್ನಿ–ನಾಯ ಬಾಲವ ನಾಲಗೆ ಮುರುಟಿರೋ
ಸದ್ಗುರು ಸಂಗ ನಿರಂಗಲಿಂಗದಲ್ಲಿ"[೨೫]

ಎಂದು ತತ್ವ, ಸಿದ್ಧಾಂತಗಳನ್ನು ಮೀರಿ ನಡೆಯುವ ಅನಾಚಾರಿಗಳನ್ನು ಕಠೋರವಾಗಿ ವಿರೋಧಿಸುತ್ತಾಳೆ.

ಸೂಳೆಸಂಕವ್ವೆ ತನ್ನ ವಚನದಲ್ಲಿ ವ್ರತಹೀನರನ್ನು ಹೀಗಳೆಯುತ್ತಾಳೆ. ಅಂಥ ವ್ರತಹೀನರ ಸಂಗ ಮಾಡಿದಡೆ ನಿರ್ಲಜ್ಜೇಶ್ವರ "ಕಾದ ಕತ್ತಿಯಲ್ಲಿ ನಮ್ಮ ಕೈ, ಕಿವಿ, ಮೂಗ ಕೊಯ್ದ"[೨೬] ನೆಂದು ಹೇಳುತ್ತಾಳೆ. ತಾನು ನಂಬಿಕೊಂಡು ಬಂದ ಮೌಲ್ಯಗಳಿಗೆ ವಿರುದ್ಧವಾದವರ ಸಂಗ ಮಾಡುವವರನ್ನು ಸಹ ಈ ಶರಣೆ ವಿರೋಧಿಸುತ್ತಾಳೆ.

ಹಾದರಕಾಯಕದ ಮಾರಯ್ಯಗಳ ಪುಣ್ಯಸ್ತ್ರೀ ಗಂಗಮ್ಮ ನಾವು ಮಾಡುವ ಕಾಯಕ ವೃತ್ತಿಯಲ್ಲಿ ನಂಬಿಕೆ ಇರಬೇಕು ಎನ್ನುತ್ತಾಳೆ.

"ಆವಕಾಯಕವ ಮಾಡಿದಡು ಒಂದೆ ಕಾಯಕವಯ್ಯಾ
ಆವ ವ್ರತವಾದರೂ ಒಂದೇ ವ್ರತವಯ್ಯಾ
ಆಯ ತಪ್ಪಿದಡೆ ಸಾವಿಲ್ಲ
ವ್ರತ ತಪ್ಪಿದಡೆ ಕೂಡಲಿಲ್ಲ
ಕಾಕಪಿಕದಂತೆ ಕೂಡಲು
ನಾಯಕ ನರಕ ಗಂಗೇಶ್ವರಲಿಂಗದಲ್ಲಿ"[೨೭]

ಎಂದು ವ್ರತ ಹಾಗೂ ಕಾಯಕ ತಪ್ಪಿದವರು ಕಾಕಪಿಕದಂತೆ ನಾಯಕನರಕ ಸೇರುವರು ಎನ್ನುತ್ತಾಳೆ.

ಅಂತೆಯೇ ಶ್ರೀಮಂತವರ್ಗ ಮತ್ತು ಅದಕ್ಕೆ ಅಧೀನರಾದವರನ್ನು ಕೆಳವರ್ಗದ ವಚನಕಾರ್ತಿಯರು ವಿರೋಧಿಸಿದ್ದಾರೆ. ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ

"ಒಡೆಯರೆಂಬ ತುಡುಗುಣಿಗಳು ತಾವು ಪೂಜೆಗೊಂಬಲ್ಲಿ,
ಅವರ ಮನೆಗೆ ಹೂ ಹಣ್ಣು ಕಾಯ ಪತ್ರಗಳ ತಾಹ
ಹೋಗುವ ಬರುವ ಊಳಿಗವ ಕೊಂಬಾತ ಭಕ್ತನಲ್ಲ,
ಅಲ್ಲಿ ಪೂಜೆಗೊಂಬಾತ ಜಂಗಮನಲ್ಲ
ಇವರಿಬ್ಬರೂ ನಾಯಕನರಕಕ್ಕೆ ಯೋಗ್ಯರಯ್ಯಾ
ಅವರ ಉರಿಲಿಂಗ ಪೆದ್ದಿಗಳರಸ ಒಲ್ಲನೊಲ್ಲನವ್ವಾ"[೨೮]

ಹೀಗೆ ಕೆಳವರ್ಗದ ವಚನಕಾರ್ತಿಯರು ಸಂಸಾರ ಮತ್ತು ಆಧ್ಯಾತ್ಮವನ್ನು ಸಮಾನವಾಗಿ ತೆಗೆದುಕೊಂಡು ಬದುಕು ರೂಪಿಸಿಕೊಂಡರು.

ಸಾಹಿತ್ಯದಂತೆ ಸಂಸ್ಕೃತಿಯಲ್ಲಿಯೂ(ನಿತ್ಯ ಬದುಕಿನಲ್ಲಿಯೂ) ಇಂತಹ ಸಂಘರ್ಷದ ಮೂಲಕ ಬದುಕನ್ನು ರೂಪಿಸಿಕೊಂಡ ಕೆಳವರ್ಗದ ಮಹಿಳೆಯರನ್ನು ಕಾಣಬಹುದಾಗಿದೆ.

ಪಾರಿಜಾತ ಕಲಾವಿದೆ ಯಲ್ಲವ್ವ ರೊಡ್ಡಪ್ಪನವರ ಕೆಳಜಾತಿ, ಕೆಳವರ್ಗಕ್ಕೆ ಸೇರಿದವಳು. ಚಿಕ್ಕವಳಿರುವಾಗಲೇ ಕಲೆ ಅವಳನ್ನು ಕೈಬೀಸಿ ಕರೆದಾಗ ಅವಳು ಅದರತ್ತ ಆಕರ್ಷಿತಳಾದಳು. ನಂತರ ಬದುಕು ಕಟ್ಟಿಕೊಳ್ಳಲು ದುಡಿಮೆ ಅನಿವಾರ್ಯವಾದಾಗ, ಅವಳು ಕಲೆಯಿಂದಲೇ ಬದುಕು ರೂಪಿಸಿಕೊಳ್ಳುವ ಪ್ರಯತ್ನಕ್ಕೆ ಮುಂದಾದಳು. ಹೆಣ್ಣುಮಗಳೊಬ್ಬಳು ಗಂಡಸರೊಂದಿಗೆ ಊರೂರು ತಿರುಗುವದು, ಕಲಾವಿದೆಯಾಗುವದು ಅಪಮಾನ ಎಂದು ತಿಳಿದಿದ್ದ ಸಮಾಜ ಅವಳನ್ನು ಕೀಳಾಗಿ ಕಂಡಿತು. ಆದರೆ ಯಲ್ಲವ್ವ ಈ ಅಪಮಾನವನ್ನೇ ಮೆಟ್ಟಿನಿಂತಳು. ಆಟಕ್ಕಾಗಿ ಪುರುಷ ಕಲಾವಿದರೊಂದಿಗೆ ಏಕಾಂಗಿಯಾಗಿ ಊರೂರು ತಿರುಗಿದಳು. ಅನಿವಾರ್ಯ ಸಂದರ್ಭಗಳಲ್ಲಿ ಪುರುಷರು ಹಿಡಿದು ನಿಂತ ಬಟ್ಟೆಯ ಹಿಂದೆಯೇ ಕುಳಿತು ಸ್ನಾನ ಮಾಡಿದಳು. ಅವಳು ಲಿಂಗಭಯವನ್ನು ಮೀರಿದ್ದರಿಂದ, ತನ್ನೊಂದಿಗಿದ್ದವರನ್ನು ತನ್ನ ಕುಟುಂಬದವರೆಂದು ಭಾವಿಸಿದ್ದರಿಂದ, ತನ್ನ ಬಗ್ಗೆ ಆತ್ಮವಿಶ್ವಾಸ ಇಟ್ಟುಕೊಂಡಿದ್ದರಿಂದ ಮತ್ತು ತನ್ನ ಬದುಕನ್ನು ರೂಪಿಸಿಕೊಳ್ಳುವ ಅಗತ್ಯ ಹೊಂದಿದ್ದರಿಂದ ಪುರುಷರ ಜೊತೆ ಹೋಗುವುದು, ಸಮಾಜದಲ್ಲಿ ಅಪಮಾನಕ್ಕೆ ಈಡಾಗುವದು ಅವಳಿಗೆ ಸಮಸ್ಯೆಯಾಗಿ ಕಾಡಲಿಲ್ಲ. ಅವುಗಳನ್ನು ಸಹಜವಾಗಿ ಎದುರಿಸಿದಳು. ಅವನ್ನೆಲ್ಲ ಮೆಟ್ಟಿನಿಂತಿದ್ದರಿಂದ ಇಂದು ಅವಳು ಶ್ರೇಷ್ಠ ಕಲಾವಿದೆಯಾಗಿ ಹೊರಹೊಮ್ಮಿ 'ಹಂಪಿಯ ಕನ್ನಡ ವಿಶ್ವವಿದ್ಯಾಲಯ'ದಿಂದ ಅತ್ಯುನ್ನತ ಪ್ರಶಸ್ತಿಯಾದ 'ನಾಡೋಜ' ಪದವಿಯನ್ನು ಪಡೆಯಲು ಸಾಧ್ಯವಾಯ್ತು. ಯಾವ ಸಮಾಜ ಮೊದಲು ಅವಳನ್ನು ಕೀಳಾಗಿ ಕಂಡಿತ್ತೋ, ಅದೇ ಸಮಾಜ ಅವಳಲ್ಲಿಯ ಕಲೆಯನ್ನು ಮೆಚ್ಚಿ ಅವಳನ್ನು

ಸತ್ಕರಿಸಿತು. ಯಲ್ಲವ್ವ ತನಗಾದ ಎಲ್ಲ ಅಪಮಾನವನ್ನು ತನ್ನ ಸೃಜನಶೀಲತೆಯ ಮುಖಾಂತರ ಹೋಗಲಾಡಿಸಿಕೊಂಡಳು. ಅದರಲ್ಲಿಯೇ ಆನಂದವನ್ನು ಕಂಡಳು. ಕಲೆಯಿಂದ ಪಡೆದ ಆನಂದ ಮತ್ತು ಅದರಲ್ಲಿಯ ತಲ್ಲೀನತೆಯಿಂದ ಅವಳ ಕೌಟುಂಬಿಕ ಸಮಸ್ಯೆಗಳು ಸಹ ಅವಳಿಗೆ ದೊಡ್ಡದಾಗಲಿಲ್ಲ. ಕಲೆಯ ಮೂಲಕ ಆಧ್ಯಾತ್ಮದತ್ತ ಹೊರಳಿದಳು.

ಕೂದಲು ತುಂಬಿ ಜೀವನ ನಡೆಸುವ ಶಾಂತವ್ವ ಕೊರವರ ಅದಕ್ಕಾಗಿ ನೆರಳು ಬಿಸಿಲೆನ್ನದೆ ದಿನನಿತ್ಯ ಊರೂರು ಅಲೆಯುತ್ತಾಳೆ. ಅವಳ ಕೆಲಸವನ್ನು ಕಂಡು ಕೆಲವರು ಕೀಳಾಗಿ ಕಾಣುತ್ತಾರೆ. ಕೆಲವರು ಆತ್ಮೀಯತೆಯಿಂದ ಮಾತನಾಡಿಸುತ್ತಾರೆ. ಕೀಳಾಗಿ ಕಂಡಾಗ ಅದನ್ನು ಲೆಕ್ಕಿಸದೆ ಮುನ್ನುಗ್ಗುತ್ತಾಳೆ. ಗೌರವದಿಂದ ಕಂಡಾಗ ಮುಗುಳ್ನಗುತ್ತಾ ಅದನ್ನು ಸ್ವಾಗತಿಸಿ ಅವರೊಂದಿಗೆ ತನ್ನ ಕಷ್ಟಸುಖವನ್ನು ಹೇಳಿಕೊಂಡು ಬೇಕಾದ್ದನ್ನು ಬೇಡಿ ಈಸಿದುಕೊಂಡು ಅವರಿಗೆ ಬೇಕಾದ ವಸ್ತುಗಳನ್ನು ನೀಡಿ ಮುಂದೆ ಸಾಗುತ್ತಾಳೆ. ಕೊಡುಕೊಳ್ಳುವುದರಲ್ಲಿಯೇ ಇವಳು ಸಂತೋಷ ಕಾಣುತ್ತಾಳೆ. ಕೂದಲು ಸಂಗ್ರಹಣೆಯ ಜೊತೆಗೆ ಚಿಕ್ಕಪುಟ್ಟ ವಸ್ತುಗಳನ್ನು ಮಾರಾಟ ಮಾಡುವ ಇವಳಿಗೆ ಅವಳ ದುಡಿಮೆ ಯಾವತ್ತು ಹೊರೆ ಅನ್ನಿಸುವುದೇ ಇಲ್ಲ. ಕೀಳು ಎನ್ನಿಸುವುದೂ ಇಲ್ಲ. ತನ್ನ ಬದುಕು ರೂಪಿಸಿಕೊಳ್ಳಲು ಸಹಾಯಕವಾಗುವ ಕೆಲಸವನ್ನು ನಿಷ್ಠೆಯಿಂದ ನಿರ್ವಹಿಸುತ್ತಾಳೆ. ಅದರಲ್ಲಿಯೇ ಸಂತೃಪ್ತಿ ನೆಮ್ಮದಿ ಕಾಣುತ್ತಾಳೆ.

ಬಟ್ಟೆ ಒಗೆಯುವ, ಪಾತ್ರೆ ತೊಳೆಯುವ ಕೆಲಸ ಮಾಡುವ ಯಂಕಮ್ಮ ಗಾಣಿಗೇರ ತನ್ನ ಕುಟುಂಬದ ನಿರ್ವಹಣೆಗೆ ಕಷ್ಟಪಡುತ್ತಿದ್ದರೂ ಅದನ್ನು ತೋರ್ಪಡಿಸದೇ ಎಲ್ಲರೊಂದಿಗೆ ನಗುನಗುತ್ತಾ ಮಾತನಾಡುತ್ತಾಳೆ. ಬಟ್ಟೆ ಒಗೆಯುವಾಗ, ಪಾತ್ರೆ ತಿಕ್ಕುವಾಗ ಸೀರೆ ಮೊಣಕಾಲವರೆಗೆ ಬರುವಂತೆ ಕಚ್ಚೆ ಕಟ್ಟಿ ಕೆಲಸ ಮಾಡುತ್ತಾಳೆ. ದೇಹದ ಭಯವನ್ನು ಮೀರಿನಿಂತ ಇವಳಿಗೆ ಹಾಗೇ ಕೆಲಸ ಮಾಡುವಾಗ ಮಧ್ಯಮವರ್ಗದ, ಸುಶಿಕ್ಷಿತ ಮಹಿಳೆಯರನ್ನು ಕಾಡುವ ಯಾವ ಸಂಕೋಚವನ್ನು ಇವಳು ಅನುಭವಿಸಲಾರಳು. ತನ್ನ ಬದುಕು ಕಟ್ಟಿಕೊಳ್ಳಲು ದುಡಿಮೆ ಮಾಡುವುದೇ ಅವಳಿಗೆ ಮುಖ್ಯ.

ಪಾತ್ರೆಗಳನ್ನು ಮಾರಾಟ ಮಾಡುವ ಶಾಂತವ್ವ ವಾಸ್ಪರ ಬೆಳಗಾಗೆದ್ದು ಭಾರವಾದ ಬುಟ್ಟಿಯನ್ನು ತಲೆಮೇಲೆ ಹೊತ್ತು ಹೊರಟರೆ ಮತ್ತೆ ಮರಳುವುದು ಸಾಯಂಕಾಲವೇ. ತನ್ನ ಮಕ್ಕಳನ್ನು ಸಾಕುವ ಜವಾಬ್ದಾರಿಯಿಂದ ನಿತ್ಯ ಬಸ್ಸಿನಲ್ಲಿ ಊರೂರು ಸಂಚರಿಸಿ ಪಾತ್ರೆ ಮಾರುತ್ತಾಳೆ. ಹಾಗೇ ಹೊರಟಾಗ ಕೆಲವು ಜನ ಅವಳನ್ನು ಕೀಳಾಗಿ ಕಾಣುತ್ತಾರೆ. ಅವಳ ಪಾತ್ರೆ ಬುಟ್ಟಿ ಬಡೆದಾಗ ಅವಳನ್ನು ಬಯ್ಯುತ್ತಾರೆ. ಆ ಯಾವ ಮಾತುಗಳಿಗೆ ಕಿವಿಗೊಡದ ಶಾಂತವ್ವ ತನ್ನ ಬದುಕು ಕಟ್ಟಿಕೊಳ್ಳಲು ಅಗತ್ಯವಾದ ಈ ದುಡಿಮೆಯಲ್ಲಿಯೇ ಸುಖಕಾಣುತ್ತಾಳೆ.

ಮನೆಕಟ್ಟುವ ಕೆಲಸ ನಿರ್ವಹಿಸುವ ಚೆನ್ನಮ್ಮ ವಡ್ಡರ ತನ್ನ ಕೆಲಸದಲ್ಲಿ ತನ್ನ ರಟ್ಟೆಯ ಶಕ್ತಿಯನ್ನೆ ನಂಬಿಕೊಂಡವಳು. ತನ್ನ ವರ್ಗದ ಪುರುಷರೊಂದಿಗೆ ಕಾರ್ಯ ನಿರ್ವಹಿಸುವ ಇವಳು ಆ ಕೆಲಸದ ಸಂದರ್ಭದಲ್ಲಾಗುವ ಮುಟ್ಟುತಟ್ಟುವಿಕೆಯಂತಹ ಸ್ಪರ್ಶಗಳಿಗೆ ಬೆಲೆ ಕೊಡದವಳು. ಅಲ್ಲಿ ಕೆಲಸ

ಮಾಡುವವರೆಲ್ಲ ತನ್ನ ಕಟುಂಬದವರೆಂಬ ಭಾವನೆ, ಸಹೋದರತೆಯ ತತ್ವ ಅವಳಲ್ಲಿ ಈ ಯಾವ ಸ್ಪರ್ಶಗಳು ಅಸಹನೀಯ ಎನಿಸುವಂತೆ ಮಾಡುವುದಿಲ್ಲ.

ಪುರುಷರು ದೈಹಿಕವಾಗಿ ಪ್ರಬಲರಾದರೆ ಮಹಿಳೆಯರು ಮಾನಸಿಕವಾಗಿ ಹೆಚ್ಚು ಪ್ರಬಲರು. ತಮಗೆ ಜೀವನದಲ್ಲಿ ಎದುರಾಗುವ ಸಮಸ್ಯೆಗಳನ್ನು ಎದುರಿಸಿ ಪರಿಹಾರ ಕಂಡುಕೊಳ್ಳುವ ತಾಳ್ಮೆ, ಮಾನಸಿಕ ಸಾಮರ್ಥ್ಯ ಮಹಿಳೆಯರಿಲ್ಲಿರುತ್ತದೆ. ತಮಗೊದಗಿದ ಸೌಲಭ್ಯಗಳು, ಸಾಮಾಜಿಕ ಸ್ಥಾನಮಾನಗಳಿಂದ ಮೇಲ್ವರ್ಗ ಮತ್ತು ಮಧ್ಯಮವರ್ಗದ ಮಹಿಳೆಯರು ಮಾನಸಿಕವಾಗಿ ದುರ್ಬಲರಾದಂತೆ ತೋರುತ್ತಾರೆ. ಆದರೆ ಇವುಗಳ ಹಂಗಿಲ್ಲದ ಸದಾ ಬದುಕಿಗಾಗಿ ಹೋರಾಟ ಮಾಡುವ ಕೆಳವರ್ಗದ ಮಹಿಳೆಯರು ತಮ್ಮ ಮಾನಸಿಕ ಸಾಮರ್ಥ್ಯವನ್ನು ಸದಾ ಜಾಗೃತವಾಗಿಟ್ಟುಕೊಂಡಿರುತ್ತಾರೆ. ಹೀಗಾಗಿ ಸಮಸ್ಯೆಗಳನ್ನು ಮೀರಿ ಬೆಳೆಯುವ ಪ್ರೌಢಿಮೆ ಕೆಳವರ್ಗದ ಮಹಿಳೆಯರಿಗೆ ಸಾಧ್ಯವಾಗಿದೆ.

ಮೇಲ್ವರ್ಗ, ಮಧ್ಯಮವರ್ಗದ ಸುಶಿಕ್ಷಿತರು ಸಹ ಎದುರಿಸಲಾರದ ಸಮಸ್ಯೆಗಳಿಗೆ ಈ ಮಹಿಳೆಯರು ಮುಖಾಮುಖಿಯಾಗುತ್ತಾರೆ. ಆರ್ಥಿಕ ಸ್ವಾವಲಂಬನೆ, ಶಿಕ್ಷಣ ಸ್ವಾತಂತ್ರ್ಯ ಪಡೆಯುವ ಶಕ್ತಿಯನ್ನು ನೀಡುತ್ತದೆ ಎನ್ನುತ್ತಾರೆ. ಆದರೆ ಇದ್ಯಾವುದು ಇಲ್ಲದ ಕೆಳವರ್ಗದ ಮಹಿಳೆಯರು ಸುಶಿಕ್ಷಿತರು, ಆರ್ಥಿಕವಾಗಿ ಬಲಾಢ್ಯರು ಎದುರಿಸಲಾಗದಂತಹ ಸಮಸ್ಯೆಗಳನ್ನು ಧೈರ್ಯವಾಗಿ ಎದುರಿಸಿ ಅವುಗಳಿಂದ ಪಾರಾಗಿ ಬರುತ್ತಾರೆ. ದೇಹಭಯದ ನಿರಾಕರಣೆ, ಆತ್ಮವಿಶ್ವಾಸ, ಸಮಾಜ ಪ್ರೇಮ, ಸ್ವಾಭಿಮಾನಗಳೇ ಇವರ ಯಶಸ್ಸಿಗೆ ಕಾರಣ. ಇವರಲ್ಲಿರುವ ಆತ್ಮವಿಶ್ವಾಸ, ಅವರ ಮನಸ್ಸಿನಿಂದ ಬಂದದ್ದು. ಬುಡದಿಂದ ಬಂದದ್ದು ಕೊನೆಯವರೆಗೆ ಎಂಬಂತೆ ಮನಸ್ಸಿನಿಂದ ಮೂಡಿಬಂದ ಆತ್ಮವಿಶ್ವಾಸ ಅವರನ್ನು ಮುನ್ನಡೆಸುತ್ತದೆ. ಅವರು ಎಂದಿಗೂ ಬೇಡಿ ಪಡೆದವರಲ್ಲ ತಾವೇ ಪಡೆದುಕೊಂಡವರು. ಹೀಗಾಗಿ ಕೊಟ್ಟಾಗ ಇಸಿದುಕೊಳ್ಳುವ ಮೇಲ್ವರ್ಗದ ಸುಶಿಕ್ಷಿತರಿಗಿಂತ ಇವರು ಪ್ರಬಲರಾಗಿದ್ದಾರೆ.

ನಿರ್ಭಿತ ಸ್ವಾತಂತ್ರ್ಯದ ಹಸಿವು ಎಲ್ಲ ಹೋರಾಟ ಹಾಗೂ ಸಂಘರ್ಷದ ಮೂಲಧಾತುವಾಗಿದೆ. ಕೊರವಂಜಿಯಂಥ ಕೆಳವರ್ಗದ ಮಹಿಳೆಯರ ಹೋರಾಟಗಳು ಜೀವಸ್ವಾತಂತ್ರ್ಯದ ಹಸಿವಿನಿಂದ ಹುಟ್ಟಿದಂಥವುಗಳು. ಸ್ವಾತಂತ್ರ್ಯದ ಒಳಹಸಿವೇ ಹೆಣ್ಣಿನ ಅಥವಾ ವ್ಯಕ್ತಿಯ ಬಂಧನದ ಬಿಡುಗಡೆಗೆ ಒತ್ತಾಯಿಸುತ್ತದೆ. ಜೀವ ಸ್ವಾತಂತ್ರ್ಯದ ಹಸಿವಿಗೆ ಹೆಣ್ಣು ಗಂಡೆಂಬ ಬೇಧವಿಲ್ಲ. ಸ್ವಾತಂತ್ರ್ಯದ ಪರಮಾನಂದವೇ ಜೀವ ಬೆಳವಣಿಗೆಗೆ ಕಾರಣ.

ಆದರೆ ಇಂಥ ಜೀವ ಸ್ವಾತಂತ್ರ್ಯದ ಸಾಧ್ಯತೆಗಳನ್ನು ಮಹಿಳೆಯರಿಂದ ಕಸಿದುಕೊಳ್ಳಲಾಗಿದೆ. ಅವಳು ಪೂಜೆ ಮಾಡಬಾರದು, ತಪಸ್ವಿಯಾಗಲಾರಳು. ಅವಳು ಮೋಕ್ಷಕ್ಕೆ ಅನರ್ಹಳು ಎನ್ನುವ ಮೂಲಕ ಅವಳ ಸ್ವಾತಂತ್ರ್ಯದ ಹಸಿವನ್ನು ಹತ್ತಿಕ್ಕಲಾಗಿದೆ.

ಸಮರ್ಪಣೆ ಮತ್ತು ಪ್ರೀತಿ ಇವೆರಡು ಜೀವಸ್ವಾತಂತ್ರ್ಯದ ಹಸಿವಿಗೆ ಇರಬೇಕಾದ ಎರಡು ಗುಣಗಳು. ಕೊಟ್ಟು ಕೊಳ್ಳುವ ನೆಲೆ ವಿಸ್ತಾರ ಸ್ವರೂಪದ್ದು. ತನ್ನನ್ನು ತಾನು ವಿಸ್ತಾರಗೊಳಿಸಿಕೊಳ್ಳುವುದು.

ತಾನು ತನ್ನನ್ನು ಕೊಟ್ಟುಕೊಳ್ಳಬೇಕು, ಕಳೆದುಕೊಳ್ಳಬೇಕು. ತನ್ನ ಸಮರ್ಪಣಾಭಾವ ಜೀವಿಗೆ ಒಂದು ಗಾಢ ಅನುಭವವನ್ನು ನೀಡುತ್ತದೆ. ಇಂಥ ಜೀವಭಾವದ ಸೆಲೆಯಾಗಿ ಸಾತ್ವಿಕ ಸಂಘರ್ಷ ಮಾಡಿದ ಕೊರವಂಜಿಯನ್ನು ಕುರಿತು ತಾತ್ವಿಕವಾಗಿ ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸುವುದು ನನ್ನ ಉದ್ದೇಶವಾಗಿದೆ.

**ಕೊನೆಟಿಪ್ಪಣಿ**

೧. ವೀಣಾ ಬನ್ನಂಜೆ, ಮಹಿಳೆಯರ ಅಸಾಂಪ್ರದಾಯಿಕ ಸಾಹಸ, ಒಳಗನ್ನಡಿ, ಪುಟ–೧೨೩, ೨೦೧೧

೨. ವೀರಣ್ಣ ರಾಜೂರ (ಸಂ), ಶಿವಶರಣೆಯರ ವಚನ ಸಂಪುಟ, ಪುಟ–೯೬, ೧೯೯೩

೩. ವೀರಣ್ಣ ರಾಜೂರ (ಸಂ), ಶಿವಶರಣೆಯರ ವಚನ ಸಂಪುಟ, ಪುಟ–೨೨೬, ೧೯೯೩

೪. ವೀರಣ್ಣ ರಾಜೂರ (ಸಂ), ಶಿವಶರಣೆಯರ ವಚನ ಸಂಪುಟ, ಪುಟ–೨೧೧, ೧೯೯೩

೫. ಮಲ್ಲಾಪುರ ಬಿ.ವ್ಹಿ. (ಸಂ), ಅಲ್ಲಮಪ್ರಭುದೇವರ ವಚನ ಸಂಪುಟ, ಪುಟ–೧೪; ೧೯೯೩

೬. ವೀಣಾ ಬನ್ನಂಜೆ, ಮಹಿಳೆಯರ ಅಸಾಂಪ್ರದಾಯಿಕ ಸಾಹಸ, ಒಳಗನ್ನಡಿ, ಪುಟ–೧೩೦; ೨೦೧೧

೭. ವೀರಣ್ಣ ರಾಜೂರ (ಸಂ), ಶಿವಶರಣೆಯರ ವಚನ ಸಂಪುಟ, ಪುಟ–೨೦೦; ೧೯೯೩

೮. ಅದೇ, ಪುಟ–೨೦೦

೯. ಡಾ. ಕೇಶವನ್ ಪ್ರಸಾದ ಕೆ.(ಸಂ), ಮಲೆಮಾದೇಶ್ವರ, ಪುಟ–೧೫೨, ೧೯೯೭

೧೦. ಡಾ. ಕೇಶವನ್ ಪ್ರಸಾದ ಕೆ.(ಸಂ), ಮಲೆಮಾದೇಶ್ವರ, ಪುಟ–೧೫೪, ೧೯೯೭

೧೧. ಡಾ. ಕೇಶವನ್ ಪ್ರಸಾದ ಕೆ.(ಸಂ), ಮಲೆಮಾದೇಶ್ವರ, ಪುಟ–೧೬೭, ೧೯೯೭

೧೨. ಡಾ. ನಿರುಪಮಾ (ಸಂ), ಶ್ರೀ ಮಹಾಭಾರತ, ಪುಟ–೬೩, ೨೦೦೫

೧೩. ನಾವಡ ಎ.ವಿ.(ಸಂ), ಸಿರಿ ಪಾಡ್ದನ, ಪುಟ–೭೧, ೧೯೯೧

೧೪. ನಾವಡ ಎ.ವಿ.(ಸಂ), ಸಿರಿ ಪಾಡ್ದನ, ಪುಟ–೭೪, ೧೯೯೧

೧೫. ನಾವಡ ಎ.ವಿ.(ಸಂ), ಸಿರಿ ಪಾಡ್ದನ, ಪುಟ–೭೫, ೧೯೯೧

೧೬. ಬರಗೂರು ರಾಮಚಂದ್ರಪ್ಪ(ಸಂ), ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಪುಟ–೩೧೯, ೧೯೯೩

೧೭. ಬರಗೂರು ರಾಮಚಂದ್ರಪ್ಪ(ಸಂ), ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಪುಟ–೮೩, ೧೯೯೩

೧೮. ಲಂಕೇಶ ಪಿ., ಚಿತ್ರಸಮೂಹ, ಪುಟ-೨೦, ೧೯೯೯

೧೯. ಅದೇ, ಪುಟ-೨೦

೨೦. ವೀರಣ್ಣ ರಾಜೂರ (ಸಂ), ಶಿವಶರಣೆಯರ ವಚನ ಸಂಪುಟ, ಪುಟ-೧೭೮, ೧೯೯೩

೨೧. ಪ್ರಭಾಕರ ಎ.ಎಸ್.(ಸಂ), ಆದಿವಾಸಿ ಆಖ್ಯಾನ, ಪುಟ-೨೫೭, ೨೫೮, ೨೦೦೯

೨೨. ವೀರಣ್ಣ ರಾಜೂರ (ಸಂ), ಶಿವಶರಣೆಯರ ವಚನ ಸಂಪುಟ, ಪುಟ-೧೯೫, ೧೯೯೩

೨೩. ವೀರಣ್ಣ ರಾಜೂರ (ಸಂ), ಶಿವಶರಣೆಯರ ವಚನ ಸಂಪುಟ, ಪುಟ-೨೦೬, ೧೯೯೩

೨೪. ಕುವೆಂಪು ಅವರ ಮೂರು ನಾಟಕಗಳು, ಪುಟ-೧೧೮, ೨೦೦೩

೨೫. ವೀರಣ್ಣ ರಾಜೂರ (ಸಂ), ಶಿವಶರಣೆಯರ ವಚನ ಸಂಪುಟ, ಪುಟ-೨೧೩, ೧೯೯೩

೨೬. ವೀರಣ್ಣ ರಾಜೂರ (ಸಂ), ಶಿವಶರಣೆಯರ ವಚನ ಸಂಪುಟ, ಪುಟ-೨೬೦, ೧೯೯೩

೨೭. ಅದೇ, ಪುಟ-೨೬೦

೨೮. ವೀರಣ್ಣ ರಾಜೂರ (ಸಂ), ಶಿವಶರಣೆಯರ ವಚನ ಸಂಪುಟ, ಪುಟ-೨೦೫, ೧೯೯೩

* * *

ವೈದಿಕ ಸಾಹಿತ್ಯದ ಬಿಗಿಬಂಧಗಳು ದೂರವಾಗಿ, ಸಾಹಿತ್ಯದಲ್ಲಿ ಸಾಮಾನ್ಯ ವ್ಯಕ್ತಿಗಳು ಪಾತ್ರಗಳಾಗಿ ಪ್ರವೇಶ ಪಡೆಯುತ್ತಿರುವ ಕಾಲದಲ್ಲಿಯೇ "ಕೊರವಂಜಿ"ಯು ಸಾಹಿತ್ಯದಲ್ಲಿ ವಿಶಿಷ್ಟ ಪಾತ್ರವಾಗಿ ಪ್ರವೇಶ ಪಡೆದಳು. ಇವಳು ಕೇವಲ ಸಾಮಾನ್ಯ ಪಾತ್ರವಾಗಿಬರದೆ ಧಾರ್ಮಿಕ ಸಹಿಷ್ಣುವಾಗಿ, ಜ್ಞಾನಪ್ರಸಾರಕಿಯಾಗಿ, ಮಾನಸಿಕ ತಜ್ಞೆಯಾಗಿ, ಸಖಿಯಾಗಿ, ಶೋಷಿತ ಸಂವೇದನೆಗಳ ಪ್ರತೀಕವಾಗಿ, ಸಾಂಸ್ಕೃತಿಕ ಹರಿಕಾರಳಾಗಿ ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡಿದ್ದಾಳೆ. ಶಿಷ್ಟಸಾಹಿತ್ಯ, ಜನಪದಸಾಹಿತ್ಯ ಎಂಬ ಯಾವ ಬೇಧಭಾವವಿಲ್ಲದೆ ಎಲ್ಲ ಪ್ರಕಾರದ ಸಾಹಿತ್ಯದಲ್ಲಿಯೂ ಕೊರವಂಜಿಯ ಪ್ರವೇಶವಾಯಿತು. ಎಲ್ಲ ಪೌರಾಣಿಕ ಕಥೆಗಳಲ್ಲಿ ನಾರದನ ಪಾತ್ರ ಎಷ್ಟು ಸಹಜವೋ, ಅಷ್ಟೇ ಸಹಜವಾಗಿ ಕೊರವಂಜಿ ಸಾಹಿತ್ಯದ ಭಾಗವಾದಳು. ಇದನ್ನು ಕುರಿತೇ ಜಚನಿಯವರು "ಪುರಾಣದಲ್ಲಿ ನಾರದ ಪಾತ್ರವಿದ್ದಂತೆ ಜನಪದ ಸಾಹಿತ್ಯದಲ್ಲಿ ಕೊರವಂಜಿ ಪಾತ್ರವಿದೆ. ಕೊರವಂಜಿ ಇಲ್ಲದೆ ಜನಪದ ಸಾಹಿತ್ಯದ ಯಾವ ಕಥೆಯೂ ಕೊನೆಗಾಣುವದಿಲ್ಲ. ಕೊರವಂಜಿ ಕನ್ನಡದ ನಾರದ ನಾರದೆಯರು"[೧] ಎಂದು ಹೇಳಿದ್ದು ಗಮನಾರ್ಹವಾದುದು.

ಲಭ್ಯ ಮಾಹಿತಿಯಂತೆ ೧೨ನೇ ಶತಮಾನದ ಪೂರ್ವಾರ್ಧದಲ್ಲಿ ರಚಿತವಾದ ಕರ್ಣಪಾರ್ಯನ 'ನೇಮಿನಾಥ ಪುರಾಣ'ದಲ್ಲಿ ಕೊರವಂಜಿಯ ಮೊದಲ ಉಲ್ಲೇಖ ಸಿಗುತ್ತದೆ. ಅಲ್ಲಿಂದ ೨೧ನೇ ಶತಮಾನದಲ್ಲಿಯೂ ಕೊರವಂಜಿ ಕನ್ನಡ ಸಾಹಿತ್ಯ, ಸಂಸ್ಕೃತಿಯ ಭಾಗವಾಗಿದ್ದಾಳೆ. ಈ ಮೂಲಕ ಕನ್ನಡ ಸಾಹಿತ್ಯದಲ್ಲಿ ತನ್ನದೆಯಾದ ಒಂದು ವಿಶಿಷ್ಟ ಛಾಪನ್ನು ಮೂಡಿಸಿದ್ದಾಳೆ. ಅಂಥ ಕನ್ನಡದ ಪ್ರಮುಖ ಸಾಹಿತ್ಯ ಕೃತಿಗಳ ಮೂಲಕ ಕೊರವಂಜಿಯ ಸಂಕಂಥನವನ್ನು ಅರಿಯುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

## ೩.೧. ಶಿಷ್ಟ ಸಾಹಿತ್ಯ ಕೃತಿಗಳು

### ೩.೧.೧. ಕರ್ಣಪಾರ್ಯನ 'ಅರ್ಧನೇಮಿನಾಥ ಪುರಾಣ'

ಕ್ರಿ.ಶ. ೧೧೧೫ರಲ್ಲಿ ರಚಿತವಾದ ಕರ್ಣಪಾರ್ಯನ ನೇಮಿನಾಥಪುರಾಣ 'ಕೊರವಂಜಿ' ಪಾತ್ರವಿರುವ ಉಪಲಬ್ಧ ಮೊದಲ ಕನ್ನಡ ಸಾಹಿತ್ಯಕೃತಿ. ('ತಮಿಳಿನಲ್ಲಿ ೨ನೇ ಶತಮಾನಕ್ಕೆ ಸೇರಿದ 'ಶಿಲಪ್ಪದಿಗಾರಂ' ಕೃತಿಯಲ್ಲಿಯೂ ಕೊರವಂಜಿ ಕಣಿ ಹೇಳುವ ಬಗ್ಗೆ ಪ್ರಸ್ತಾಪವಿದೆ.)[೨] 'ನೇಮಿನಾಥಪುರಾಣ' ಜೈನಧರ್ಮದ ೨೨ನೇ ತೀರ್ಥಂಕರನಾದ 'ನೇಮಿನಾಥ'ನನ್ನು ಕುರಿತು ಬರೆದ ಪುರಾಣ. ಈ ಕೃತಿಯಲ್ಲಿ ರುಕ್ಮಿಣಿ ತನ್ನ ಮಗ ಮನ್ಮಥನಿಗೆ ಅಣ್ಣ ರುಕ್ಮನ ಮಗಳು ವಿದರ್ಭೆಯನ್ನು ತಂದುಕೊಳ್ಳುವ ಪ್ರಸಂಗದಲ್ಲಿ 'ಕೊರವಂಜಿ'ಯ ಉಲ್ಲೇಖ ಬರುತ್ತದೆ.

ಈ ಕಥೆಯಲ್ಲಿ ಬರುವ ಅಗ್ನಿಭೂತಿ, ವಾಯುಭೂತಿ ಸಹೋದರರು ತಾವು ಮಾಡಿದ ಪಾಪಪುಣ್ಯಗಳ ಫಲವಾಗಿ ಅನೇಕ ಜನ್ಮಗಳನ್ನು ಎತ್ತುತ್ತಾರೆ. ಈ ಭವಾವಳಿಯಲ್ಲಿ ಅಗ್ನಿಭೂತಿಯು ಕೃಷ್ಣರುಕ್ಮಿಣಿಯರಲ್ಲಿ ಮನ್ಮಥನಾಗಿಯೂ, ವಾಯುಭೂತಿಯು ಜಾಂಬವತಿಯಲ್ಲಿ ಶಂಭುಕುಮಾರನಾಗಿಯೂ ಜನಿಸುತ್ತಾರೆ. ಕೃಷ್ಣನೊಂದಿಗಿನ ವಿವಾಹದಿಂದ ತವರುಮನೆ ದೂರಾಯಿತೆಂದು ಚಿಂತಿಸುತ್ತಿದ್ದ ರುಕ್ಮಿಣಿ, ತನ್ನ ಅಣ್ಣನ ಮಗಳಾದ ವಿದರ್ಭೆಯನ್ನು ಮನ್ಮಥನಿಗೆ ತಂದುಕೊಳ್ಳುವ ಮೂಲಕ ಮತ್ತೆ ತವರಿನ ಸಂಬಂಧವನ್ನು ಗಟ್ಟಿಗೊಳಿಸಿಕೊಳ್ಳಲು ಬಯಸುತ್ತಾಳೆ. ಅದಕ್ಕಾಗಿ ನಯವಿನಯಶೀಲರಾದ ಮನುಷ್ಯರನ್ನು ಅಣ್ಣನ ಅರಮನೆಗೆ ಕಳಿಸುತ್ತಾಳೆ. ರುಕ್ಮಿಣಿ ನೀಡಿದ ಉಡುಗೊರೆಯನ್ನು ರುಕ್ಮಣಿಗೆ ನೀಡಿದ ಅವರು, ವಿದರ್ಭೆಯನ್ನು ಮನ್ಮಥನಿಗೆ ತಂದುಕೊಳ್ಳುವ ರುಕ್ಮಿಣಿಯ ಆಸೆಯನ್ನು ತಿಳಿಸುತ್ತಾರೆ. ಆದರೆ ಇದರಿಂದ ಕೋಪಗೊಂಡ ರುಕ್ಮ, 'ನನ್ನ ತಂದೆಯನ್ನು ಕೊಂದವನನ್ನು ಮದುವೆಯಾದ ಅವಳ ಮಗನಿಗೆ ನನ್ನ ಮಗಳನ್ನು ಕೊಡುವುದು ಸಾಧ್ಯವಿಲ್ಲ' ಎನ್ನುತ್ತಾನೆ. ಆಗ ಸಂಧಾನಕ್ಕಾಗಿ ಬಂದವರು 'ಹಿಂದಿನದನ್ನು ಮರೆತುಬಿಡು ರುಕ್ಮಿಣಿ ನಿನ್ನ ಮಗಳನ್ನು ಬೇರೆಯವರಿಗೆ ಕೊಡಲು ಬಿಡುವದಿಲ್ಲ' ಎನ್ನುತ್ತಾರೆ. ಆಗ ಮತ್ತಷ್ಟು ವ್ಯಗ್ರನಾದ ರುಕ್ಮ 'ಬೇಕಾದರೆ ಹಿಂದಿನಂತೆ ಹೆಣ್ಣನ್ನು ಹಾರಿಸಿಕೊಂಡು ಹೋಗಿರಿ. ಬೇಕಾದರೆ ಮಾದಿಗರಿಗೆ ಕೊಟ್ಟೇನು ನಿಮಗೆ ಕೊಡೆ' ಎನ್ನುತ್ತಾನೆ.

ಮರಳಿ ಬಂದ ಅವರು ರುಕ್ಮ ಹೇಳಿದ ಮಾತನ್ನು ರುಕ್ಮಿಣಿಗೆ ತಿಳಿಸುತ್ತಾರೆ. ಇದರಿಂದ ರುಕ್ಮಿಣಿ ಮನನೊಂದು, ಹತಾಶಳಾಗಿ ಕೂಡುತ್ತಾಳೆ. ತಾಯಿಯ ಮುಖವನ್ನು ನೋಡಿದ ಮನ್ಮಥ ಕಾರಣ ಕೇಳಿದಾಗ ನಡೆದ ಘಟನೆಯನ್ನು ತಿಳಿಸುತ್ತಾಳೆ. ಮನ್ಮಥ ನಿನ್ನ ಆಸೆಯನ್ನು ಈಡೇರಿಸುತ್ತೇನೆಂದು ತಾಯಿಗೆ ಮಾತು ಕೊಟ್ಟು, ಶಂಭುಕುಮಾರನೊಂದಿಗೆ ಕೌಂಡಿನ್ಯಪುರಕ್ಕೆ ತೆರಳಿ ಮಾದಿಗನ ವೇಷ ತೊಟ್ಟು ಹೋಗಿ ಹೆಣ್ಣು ಕೇಳುತ್ತಾನೆ. ಇವರ ಸೌಂದರ್ಯ ನೋಡಿದ ರುಕ್ಮ 'ನಿಮ್ಮ ಜಾತಿಯಲ್ಲಿ ಹೀಗಿರಲು ಸಾಧ್ಯವಿಲ್ಲ. ನೀವು ಮಾದಿಗರಲ್ಲ' ಎನ್ನುತ್ತಾನೆ. 'ನಾವು ದ್ವಾರಕಾಪುರದ ದ್ವಾರಪಾಲಕರಾದ್ದರಿಂದ ಸುಖವಾಗಿ ಉಂಡು, ಇಷ್ಟು ಸೌಂದರ್ಯವಂತರಾಗಿದ್ದೇವೆ. ನೀನು ಹೆಣ್ಣು ಕೊಡದಿದ್ದರೆ ಬಿಡು' ಎಂದು ಅಲ್ಲಿಂದ ತೆರಳುತ್ತಾರೆ. ನಂತರ 'ಪ್ರಜ್ಞಪ್ತಿವಿದ್ಯೆ'ಗೆ ಮಾದಿಗತಿ ವೇಷಹಾಕಿ ಮುತ್ತು ರತ್ನಗಳನ್ನು

ಕೊಟ್ಟುಕಳಿಸುತ್ತಾನೆ. ಅವಳು ಮುತ್ತುರತ್ನಗಳನ್ನು ನೀಡಿ ನನ್ನ ಮಗನಿಗೆ ಹೆಣ್ಣುಕೊಡೆಂದು ಕೇಳುತ್ತಾಳೆ. 'ಮಾದಿಗರ ಹತ್ತಿರ ಇಂತಹ ಅಮೂಲ್ಯವಸ್ತುಗಳಿರುವುದಿಲ್ಲ. ನೀನು ಮಾದಿಗಳಲ್ಲ' ಎಂದು ಅವಳನ್ನು ರುಕ್ಮ ಹೊರಕಳಿಸುತ್ತಾನೆ. ಪ್ರಜ್ಞಪ್ತಿವಿದ್ಯೆ ಮನ್ಮಥನಿಗೆ ನಡೆದ ಘಟನೆಯನ್ನು ತಿಳಿಸುತ್ತದೆ.

ನಂತರ ಮನ್ಮಥ, ಶಂಭುಕುಮಾರರು ವಿದರ್ಭೆ ಇರುವ ಉದ್ಯಾನದಲ್ಲಿ ತಿರುಗಾಡುವಾಗ, ವಿದರ್ಭೆ ಮಾದಿಗ ವೇಷದ ಮನ್ಮಥನಿಗೆ ಮನ ಸೋಲುತ್ತಾಳೆ. ಆಗ ಆತ 'ಕೊರವಂಜಿ' ವೇಷ ಧರಿಸಿ ಅವಳ ಹತ್ತಿರ ಹೋಗುತ್ತಾನೆ. ವಿದರ್ಭೆ ತನ್ನ ಇಷ್ಟಾರ್ಥವನ್ನು ಹೇಳಲಿ ಎಂದು ಕೊರವಂಜಿಯನ್ನು ಕರೆಸುತ್ತಾಳೆ. 'ಕೊರವಂಜಿ ನೀನು ಮಾದಿಗರಲ್ಲಿ ಹಿರಿಯನನ್ನು ಗಂಡನೆಂದು ಒಪ್ಪಿಕೊಂಡಿರುವೆ' ಎಂದಾಗ ಅವಳು ನಿರಾಕರಿಸುತ್ತಾಳೆ. ಆಗ ಕೊರವಂಜಿ, ಸುಳ್ಳು ಹೇಳದಿರು ನಿನ್ನ ಮನಸ್ಸಿನ ಇಷ್ಟಾರ್ಥ ದೇವರಾಣೆ ನೆರವೇರುತ್ತದೆ, ಎಂದು ಹೇಳಿ ಅಲ್ಲಿಂದ ತೆರಳುತ್ತಾಳೆ. ನಂತರ ಮತ್ತೆ ಮಾದಿಗ ವೇಷದಿಂದ ಬಂದ ಸೋದರರು ಅವಳನ್ನು ಕರೆದುಕೊಂಡು ದ್ವಾರಕಾವತಿಗೆ ಹೋಗುತ್ತಾರೆ. ನಂತರ ವಿದರ್ಭೆ ಮನ್ಮಥರ ವಿವಾಹ ನೆರವೇರುತ್ತದೆ.

ಈ ಕೃತಿಯಲ್ಲಿ ತಾಯಿಯ ಆಸೆಯನ್ನು ಈಡೇರಿಸಲು ಮಾದಿಗವೇಷ ಧರಿಸಿದ ಮನ್ಮಥ, ಮಾದಿಗ ವೇಷದಲ್ಲಿದ್ದಾಗ ತನ್ನನ್ನು ಮೋಹಿಸಿದ, ಅದರಿಂದ ಆತಂಕದಲ್ಲಿರುವ ವಿದರ್ಭೆಯನ್ನು ಸಮಾಧಾನ ಪಡಿಸಲು, ಅವಳಿಗೆ ಭರವಸೆ ನೀಡುವುದಕ್ಕಾಗಿ ಕೊರವಂಜಿ ವೇಷ ಧರಿಸುತ್ತಾನೆ. ಕೊರವಂಜಿ ರೂಪದಲ್ಲಿರುವ ಮನ್ಮಥನನ್ನು 'ಇಷ್ಟಾರ್ಥ ಹೇಳು' ಎಂದು ಕರೆಯಿಸಿಕೊಂಡಾಗ ನೀನು ಮಾದಿಗರಲ್ಲಿ ಚೆಲುವಾದ ಒಬ್ಬನನ್ನು ಗಂಡನೆಂದು ಸ್ವೀಕರಿಸಿರುವೆ ಎಂದು ಹೇಳುತ್ತಾಳೆ ಕೊರವಿ. ವಿದರ್ಭೆ 'ಛೇ ಛೇ ಸುಳ್ಳು' ಎಂದಾಗ, 'ನಿಜ ಮುಚ್ಚದೆ, ಅನುಮಾನವಿಲ್ಲದೆ ನಿನ್ನ ಇಷ್ಟವನ್ನು ತಿಳಿಸು ಹೇಗೆ ಕೈಗೂಡುವುದು ತಿಳಿಸುವೆ' ಎನ್ನುತ್ತಾನೆ. ಈ ಮೂಲಕ ಅವಳು ತನ್ನ ಮೇಲೆ ಮೋಹಗೊಂಡಿದ್ದಾಳೋ, ಇಲ್ಲವೋ ಎಂಬುದನ್ನು ಕೊರವಿ ರೂಪದ ಮನ್ಮಥ ವಿದರ್ಭೆಯ ಮೂಲಕವೇ ಬಾಯಿಬಿಡಿಸುತ್ತಾನೆ. ಜೊತೆಗೆ ಭಯದಲ್ಲಿರುವ ಅವಳಿಗೆ ಕಣಿಯ ಮೂಲಕ "ಅದು ನಿನಗಾದಪ್ಪುದು ಸಮ್ಮದದಿಂದಿರು ದೇವಿ ದೇವಿಯಾಣೆ ವಿಷಾದಾಸ್ಪದೆಯಾಗದಿರೆನೆ"[೩] ಎಂದು ದೇವರಾಣೆ ಹಾಕಿ ನಿನ್ನ ಮನಸ್ಸಿನ ಇಷ್ಟಾರ್ಥ ನೆರವೇರುತ್ತದೆಂದು ಭವಿಷ್ಯ ನುಡಿಯುತ್ತಾಳೆ. ಮನ್ಮಥ ಮಾದಿಗನ ರೂಪದಲ್ಲಿ ಬಂದಾಗ ವಿದರ್ಭೆ ಯಾವ ಅನುಮಾನವಿಲ್ಲದೆ ಅವನ ಜೊತೆ ಹೋಗುವುದು ಕೊರವಿ ಅವಳಲ್ಲಿ ತುಂಬಿದ ಭರವಸೆಯಿಂದಲೇ. ಇಲ್ಲಿ ಕೊರವಂಜಿಯು ಮನ್ಮಥನ ಮೇಲೆ ವಿದರ್ಭೆಗೆ ಪ್ರೀತಿ ಇದೆಯೋ? ಇಲ್ಲವೋ? ಎಂದು ತಿಳಿಯುವುದರೊಂದಿಗೆ, ಮಾದಿಗನ ಮೋಹಿಸಿದ ಗೊಂದಲದಲ್ಲಿದ್ದ ಅವಳಿಗೆ ಸಮಾಧಾನ ಮಾಡಿ ಅವಳಲ್ಲಿ ಮದುವೆಯಾಗುವ ಭರವಸೆ ತುಂಬುತ್ತಾಳೆ.

ಕವಿ ಯಾವ ಜಾತಿಗೆ ಸೇರಿದವನೇ ಆಗಿದ್ದರೂ ತನ್ನ ಕೃತಿಯಲ್ಲಿ ಆ ಕಾಲದ ಸಮಾಜದಲ್ಲಿರುವ ಜಾತಿ ಮತ್ತು ವರ್ಗ ಸಂಘರ್ಷವನ್ನು ಕಟ್ಟಿಕೊಡುತ್ತಾನೆ. ಇದಕ್ಕೆ ಕರ್ಣಪಾರ್ಯನು ಹೊರತಾಗಿಲ್ಲ. ೧೨ನೇ ಶತಮಾನದ ಆರಂಭ ಜೈನಮತ ಅವನತಿಯತ್ತ ಸಾಗಿ, ಸಮಾಜದಲ್ಲಿ ಧಾರ್ಮಿಕ, ಆರ್ಥಿಕ ಸಂಘರ್ಷಗಳು ಅಧಿಕವಾಗಿದ್ದ ಕಾಲ. ಅಲ್ಲಿ ಜಾತಿ ಮತಗಳ ತಾರತಮ್ಯ

ಅಧಿಕವಾಗಿತ್ತು. ಕೀಳುಜಾತಿಯವರನ್ನು ಅತ್ಯಂತ ಕೀಳಾಗಿ ಕಾಣುತ್ತಿದ್ದರು. ರುಕ್ಮನ ಮಗಳ ಮದುವೆ ವಿಷಯದಲ್ಲಿ "ನಿಮಗೀವುದನೊಯ್ದು ಮಾದಿಗಂಗಾಂ ಕುಡುವೆಂ"[೪] ಎನ್ನುವ ಮಾತು ಸಮಾಜದಲ್ಲಿ ಕೆಳಜಾತಿಯವರನ್ನು ಅತ್ಯಂತ ನಿಕೃಷ್ಟವಾಗಿ ಕಾಣುತ್ತಿದ್ದುದನ್ನು ಹೇಳುವುದರೊಂದಿಗೆ, ಅಹಂಕಾರದ ಮದದಿಂದ ಮೆರೆಯುವವರು ಅವರಿಗಿಂತ ಕೀಳು ಎಂಬುದನ್ನು ಸೂಚಿಸುತ್ತದೆ. ಅಹಂಕಾರದ ಮದದಲ್ಲಿರುವವರಿಗಿಂತ ಕೆಳಜಾತಿಯವರಿಗೆ ಮಗಳನ್ನು ಕೊಡುವುದೇ ಯೋಗ್ಯ ಎಂಬ ನಿರ್ಧಾರಕ್ಕೆ ಬರುವಂತಿದೆ ಅವನ ಮಾತು.

ಮಾದಿಗತಿ ತನ್ನ ಮಗನಿಗೆ ವಿದರ್ಭೆಯನ್ನು ಕೇಳಲು ಬಂದಾಗ ರುಕ್ಮನಾಡುವ ಮಾತು

"ಏನಿದು ಚೋದ್ಯಮೋ ಬಗೆಯಲ್  
ತಾನೀ ನವರತ್ನರಾಜಿಯುಂ ಮುಂ ಬಂದಾ  
ಮಾನವರ ಚೆಲ್ವುಮಿಂತಿವು  
ಹೀನಾನ್ವಯದೊಳ್ ಸಮಂತು ಘಟಿಯಿಸವೆಂತುಂ"[೫]

ಎಂದು ಕೆಳಜಾತಿಯವರಲ್ಲಿ ಇಂತಹ ರೂಪ ಸಂಪತ್ತು ಹೇಗೆ ಬಂತು ಎಂದು ಅಶ್ಚರ್ಯಪಡುವ ಮಾತು, ಊಳಿಗಮಾನ್ಯ ವ್ಯವಸ್ಥೆಯಲ್ಲಿ ರೂಪ ಹಾಗೂ ಆರ್ಥಿಕತೆ ಎಂಬುದು ಕೇವಲ ಅಧಿಕಾರ ಶಾಹಿಗಳ ಸ್ವತ್ತಾಗಿತ್ತು ಎಂಬುದನ್ನು ಪ್ರಚುರಪಡಿಸುತ್ತದೆ. ಇದು ಮಧ್ಯಕಾಲೀನ ಸಾಮಾಜಿಕ ವ್ಯವಸ್ಥೆಯಲ್ಲಿ ಆಳುವವರ ಮತ್ತು ಆಳಿಸಿಕೊಳ್ಳುವವರ ನಡುವಿನ ವ್ಯತ್ಯಾಸವನ್ನು ತೋರಿಸುತ್ತದೆ.

ಕೊನೆಗೆ ಕೊರವಂಜಿ ಮಾತು ಕೇಳಿ ಮಾದಿಗರ ಜೊತೆ ರುಕ್ಮಿಣಿ ಹೋಗುವದು, ಆ ಕಾಲದಲ್ಲಿ ಅಂತರ್‌ಜಾತಿ ವಿವಾಹ ನಡೆಯುತ್ತಿದ್ದುದ್ದರ ಸುಳಿವು ನೀಡುತ್ತದೆ. ಇದೇ ತರುವಾಯ ಬಂದ ಬಸವಣ್ಣ ಅಂತರಜಾತಿ ವಿವಾಹ ಮಾಡಿಸುತ್ತಾನೆ. ಅವನ ಕಾರ್ಯದ ಸುಳಿವು ಈ ಕಾವ್ಯದಲ್ಲೆ ದೊರೆಯುತ್ತದೆ.

ಜೈನನಾದ ಕರ್ಣಪಾರ್ಯ ತನ್ನ ಧರ್ಮದ ಕರ್ಮಾಂತರ ಅಥವಾ ಭವಾವಳಿಯ ಸನ್ನಿವೇಶದಲ್ಲಿಯು ಜಾತಿ ವ್ಯವಸ್ಥೆಯನ್ನು ತರುತ್ತಾನೆ. ಒಳ್ಳೆಯವನಾದ ಅಗ್ನಿಭೂತಿ ಮೇಲ್ಜಾತಿಯ ರುಕ್ಮಿಣಿಯ ಗರ್ಭದಲ್ಲಿ ಮನ್ಮಥನಾಗಿ ಜನಿಸುತ್ತಾನೆ. ಪಾಪ ಮಾಡಿದ ವಾಯುಭೂತಿ ಶೂದ್ರಹೆಣ್ಣಾದ ಜಾಂಬವತಿಯಲ್ಲಿ ಶಂಭುಕುಮಾರನಾಗಿ ಜನ್ಮತಾಳುತ್ತಾನೆ. ಒಳ್ಳೆಯಕಾರ್ಯ ಮಾಡಿದವರು ಮೇಲ್ಜಾತಿಯಲ್ಲಿಯೂ ಪಾಪ ಮಾಡಿದವರು ಕೆಳಜಾತಿಯಲ್ಲಿಯೂ ಜನಿಸುತ್ತಾರೆಂಬ ಮನೋಭಾವ ಇಲ್ಲಿದೆ. ಅಂದರೆ ಕೆಳಜಾತಿಗಳನ್ನು ಕೀಳಾಗಿ ಕಾಣುವ ಜಾತಿ ಸಂಕರದ ಸ್ವರೂಪಗಳನ್ನು ಇಲ್ಲಿ ನೋಡಬಹುದು.

### ೩.೧.೨. ವಚನ ಸಾಹಿತ್ಯ

ವಚನ ಸಾಹಿತ್ಯದಲ್ಲಿಯು ಕೊರವಂಜಿಯ ಪಾತ್ರ ಚಿತ್ರಣವನ್ನು ಕಾಣಬಹುದು 'ವಚನಸಾಹಿತ್ಯದಲ್ಲಿ ಕಣಿಕಾರರು ಇಪ್ಪತ್ತಾರು ಜನರಿದ್ದಾರೆ'.[೬] ಬಸವಣ್ಣ, ಚೆನ್ನಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು,

ಚೋಳೇಶ, ಶಾಂತಮಲ್ಲೇಶ, ನಾಗಿನಾಥ ಮುಂತಾದವರು ತಮ್ಮ ವಚನಗಳಲ್ಲಿ ಕೊರವಂಜಿಯ ಬಗ್ಗೆ ಪ್ರಸ್ತಾಪಿಸುತ್ತಾರೆ. ಡಾ. ವೀರಣ್ಣ ರಾಜೂರ ಅವರು 'ಹಳ್ಳದ ದಂಡೆಯಲ್ಲಿ ಬೆಳೆದ ಹುಲ್ಲು ತಂದು ಹಗ್ಗ ಹೊಸೆಯುವ ಕಾಯಕ ಕೈಗೊಂಡಿದ್ದ ನುಲಿಯ ಚಂದಯ್ಯ' ದನಕಟ್ಟುವ ಕಣ್ಣಿಯನ್ನು ಸಿದ್ಧಪಡಿಸುವ ಕಾಯಕ ಕೈಗೊಂಡಿದ್ದ ಕಾಲಕಣ್ಣಿಯ ಕಾಮಮ್ಮ ಇವರಿಬ್ಬರೂ ಕೊರವಂಜಿ ಜಾತಿಗೆ, ಅದರಲ್ಲೂ ಕೊಂಚಿಕೊರವರ ಜಾತಿಗೆ ಸೇರಿದ ಶರಣರಾಗಿರಬೇಕು"[೭] ಎನ್ನುತ್ತಾರೆ.

ಬಸವಣ್ಣನವರು ತಮ್ಮ ವಚನದಲ್ಲಿ ಕೊರವಿಯ ಪ್ರಸ್ತಾಪ ಮಾಡಿದ್ದಾರೆ. 'ಹಾವಾಡಿಗನು ಮೂಕೊರತಿಯು ತನ್ನ ಮಗನ ಮದುವೆಗೆ ಶಕುನ ನೋಡ ಹೋಗುವಾಗ ಇದಿರಲೊಬ್ಬ ಮೂಕೊರತಿ ಹಾವಾಡಿಗನ ಕಂಡು ಶಕುನ ಹೊಲ್ಲವೆಂಬ ಚದುರನೇ ನೋಡಾ ತನ್ನಸತಿ ಮೂಕೊರತಿ ತನ್ನ ಕೈಯಲ್ಲಿ ಹಾವು ತಾನು ತನ್ನ ಭಿನ್ನವನರಿಯದೆ ಅನ್ಯರೆಂಬ ಕುನ್ನಿಯನೇನೆಂಬ'[೮] ಹಾವಾಡಿಗ ಮತ್ತು ಮೂಕೊರತಿ ತಮ್ಮ ಮಗನ ಮದುವೆಗೆ ಶಕುನ ನೋಡಿ ಹೋಗುವಾಗ ಎದುರಿಗೆ ಮತ್ತೊಬ್ಬ ಹಾವಾಡಿಗ ಮೂಕೊರತಿ ಬರುತ್ತಾರೆ. ಆಗ ಶಕುನ ಸರಿಯಿಲ್ಲವೆಂದು ಅವರು ತಮ್ಮ ಕಾರ್ಯ ಬಿಟ್ಟು ಮರಳಿ ಹೋಗುತ್ತಾರೆ. ಇಲ್ಲಿ ಕೊರವಿಯ ಉಲ್ಲೇಖವಿದ್ದರೂ ಜಾತಿ ಜಾತಿಗಳೊಳಗೆ ಇದ್ದ ಅಸಮಾಧಾನ ಹಾಗೂ ಅಸಮಾನತೆಯ ನೆಲೆಗಳನ್ನು ಸೂಚಿಸುತ್ತದೆ. ಇಲ್ಲಿ ಕೊರವಿ ಕನಿಷ್ಠ ಜಾತಿಯವಳಾಗಿ ಚಿತ್ರಿತಗೊಂಡಿದ್ದಾಳೆ.

ಬಸವಣ್ಣನವರು ಈ ವಚನ ಶಕುನಗಳು ಹೇಗೆ ಕೆಳಜಾತಿಯವರಲ್ಲಿ ವಿಷಬೀಜವನ್ನು ಬಿತ್ತಿದ್ದವು ಎಂಬುದನ್ನು ತಿಳಿಸುತ್ತದೆ. ಮನುಷ್ಯ ಮನುಷ್ಯನನ್ನು ಗೌರವಿಸಬೇಕು. ಆದರೆ ಇಲ್ಲಿ ಮನುಷ್ಯ ಮನುಷ್ಯನನ್ನು ಅಪಶಕುನವೆಂದು ಕೀಳಾಗಿ ಕಾಣುತ್ತಾನೆ. ಹಾಗೆ ಅಪಶಕುನವೆಂದು ಕಾಣುವದು, ತನ್ನ ಜಾತಿಯ ವ್ಯಕ್ತಿಯನ್ನೆ ಹೊರತು ಮೇಲ್ಜಾತಿಯವನನ್ನಲ್ಲ. ಮೇಲ್ವರ್ಗದವರು ಜಾತಿಗೆ ಜಾತಿಯೇ ವೈರಿ ಎಂಬಂತೆ ಕೆಳಜಾತಿಯವರಲ್ಲಿ ಕೆಳಜಾತಿಯವರ ಬಗ್ಗೆಯೇ ಕೀಳುಮನೋಭಾವನೆ ಬೆಳೆಸಿ, ಅವರನ್ನು ಒಡೆದು ಆಳುವ ಶೋಷಣೆಯ ಮಾರ್ಗವನ್ನು ಅನುಸರಿಸುತ್ತಿದ್ದರು. ಬಸವಣ್ಣನವರ ವಚನ ಮೌಢ್ಯವನ್ನು ತೊರೆದು ವ್ಯಕ್ತಿ ವ್ಯಕ್ತಿಯನ್ನು ಗೌರವಿಸಿರಿ. ಅಂದಾಗ ನಿಮಗೂ ಗೌರವ ದೊರೆಯುವದೆಂದು ಸೂಚ್ಯವಾಗಿ ತಿಳಿಸುತ್ತದೆ.

ಅಕ್ಕಮಹಾದೇವಿ ವಚನಗಳ ಜೊತೆಗೆ ಕೆಲವು ಗೀತೆಗಳನ್ನು ರಚಿಸಿದ್ದು, ಅದರಲ್ಲಿ ಕೆಲವು ಹಾಡುಗಳು ಕೊರವಂಜಿ ಕಣಿ ಹೇಳುವ ಶೈಲಿಯಲ್ಲಿಯೇ ರಚಿತವಾಗಿವೆ. ಅಕ್ಕನ 'ಕೈತೋರೆ' ಎಂಬ ಪದ್ಯ ಕೊರವಂಜಿ ಕಣಿ ಹೇಳಲು ಕೈತೋರಿಸಲು ಹೇಳುತ್ತಿರುವಂತೆ ಜನಪದ ಧಾಟಿಯಲ್ಲಿಯೇ ಇದೆ. "ಕೈ ತೋರೆಯಮ್ಮ ನಿನ್ನ ಮೈಯೊಳಗಿರ್ದ ವಸ್ತುವ ವಿವರಿಸಿ ಹೇಳುವೆನಮ್ಮ ನಂಬು, ನಂಬೆಯಮ್ಮ. ಅರಿವಿನ ಬಗೆಯ ಹೇಳುವೆ, ಚೆಲುವೆತ್ತ ಬಾಳಿನಿರವ ಹೇಳುವೆ ಭಾವದ ಲಕ್ಷಣವ ಹೇಳುವೆ ತೋರೆಯಮ್ಮ ನಿನ್ನ ಕೈಯ ಕನ್ನಡಿಯ ತೋರೆಯಮ್ಮ"[೯] ಎನ್ನುತ್ತಾಳೆ. ಈ ಸಂಸಾರದ ಜಂಜಾಟ, ಅಲ್ಲಿರುವ ಸಂಕಟ ಪರಿಹರಿಸಿಕೊಳ್ಳುವ ಮಾರ್ಗವನ್ನು ಸೂಚಿಸುತ್ತಾಳೆ. ಈ ಸಂಕಟಗಳೆಲ್ಲ ನಿವಾರಣೆಯಾಗಬೇಕಾದರೆ ಶಂಭುಲಿಂಗನನ್ನು ಮಾತ್ರ ಪ್ರಾರ್ಥಿಸಬೇಕು.

"ಶಂಭುಲಿಂಗನ ಕೈ ಬಿಟ್ಟು ನೀ ಭಷ್ಟೆ;
ಇಂಬುಗೊಡುವವರಲ್ಲ, ಇದಿರಿಗಿಟ್ಟರಲ್ಲ;
ಹಂಬಲ ಬಿಡು ಭ್ರಷ್ಟದೈವವನೆಲ್ಲ
ನಂಬಿ ಶುದ್ಧವಾಗಿ ನಿಜಲಿಂಗದಲ್ಲಿ
ಮುಂಬಾಗಿಲನೊಳು ನೀ ನಿಂತು ಲಾಲಿಸು ಸೊಲ್ಲ
ಇಂತೀ ನಿಷ್ಟೆ ನಿರ್ಧಾರವಾಗಬೇಕಮ್ಮ."[೧೦]

ಎಂದು ಏಕದೇವೋಪಾಸನೆಯ ಬಗ್ಗೆ ಹೇಳುತ್ತಾಳೆ. ಲಿಂಗ ಪೂಜೆಯಿಂದ ಮಾತ್ರ ಭವಭಯ ಹರಿಯುವದೆನ್ನುತ್ತಾಳೆ.

"ಕಲ್ಯಾಣ ದಾಚೆಯ ವೈಪುರವಮ್ಮ,
ಅಲ್ಲಿಂದ ಬಂದು ಪೇಳಿದೆ ಎಲ್ಲವು ನಿಮ್ಮ"[೧೧]

ಎಂದು ತಾನು ಎಲ್ಲಿಂದ ಬಂದೆ ಎಂಬುದರ ಬಗ್ಗೆ ಮಾಹಿತಿಯನ್ನು ಕೊಡುತ್ತಾಳೆ. ಕಣಿ ಹೇಳುವ ಉಪಾದಿಯಲ್ಲಿ ಅಕ್ಕನ ವಚನಗಳಿರುವುದು ಗಮನಾರ್ಹ.

### ೩.೧.೩. ಹೆಳವನಕಟ್ಟೆ ಗಿರಿಯಮ್ಮನ 'ಲವಕುಶರ ಹಾಡು'

ಗಿರಿಯಮ್ಮನ 'ಲವಕುಶರ ಹಾಡು' ಕಾವ್ಯವು ಸೀತಾ ಪರಿತ್ಯಾಗದ ಪ್ರಸಂಗವನ್ನು ಒಳಗೊಂಡ ಕಾವ್ಯ. ಸೀತಾ ಪರಿತ್ಯಾಗದ ಕತೆ ಹಳೆಯದಾದರೂ, ಗಿರಿಯಮ್ಮ ಸೀತಾ ಪರಿತ್ಯಾಗಕ್ಕೆ ವಿಭಿನ್ನ ಕಾರಣವನ್ನು ಆಯ್ಕೆ ಮಾಡಿಕೊಂಡು ಇಲ್ಲಿ ಕಥೆ ರಚನೆ ಮಾಡಿದ್ದಾಳೆ.

ಗಿರಿಯಮ್ಮ ಕೊಂಡಪ್ಪನ ಪುತ್ರಿಗೆ ಈ ಕಾವ್ಯವನ್ನು ಹೇಳುತ್ತಾಳೆ. ಬೇಟೆಗಾಗಿ ಹೋದ ರಾಮ ಲಕ್ಷ್ಮಣರು ವಿಶ್ರಾಂತಿ ಪಡೆಯುತ್ತಿರುವಾಗ, ರಾಮ ಸೀತೆಯನ್ನು ತಾಟಕಿಯೊಬ್ಬಳು ಕೂದಲು ಹಿಡಿದು ಎಳೆಯುತ್ತಿರುವಂತೆ ಕನಸು ಕಾಣುತ್ತಾನೆ. ಇದರಿಂದ ಸೀತೆಗೆ ಉಳಿಗಾಲವಿಲ್ಲವೆಂದು ಭಯಗೊಂಡು ಧಾವಿಸಿ ಬರುತ್ತಾನೆ. ಅಷ್ಟರಲ್ಲಿಯೇ ಮಾಯದ ಗರತಿ ಅಸುರೆ ಅಯೋಧ್ಯಪುರ ಪ್ರವೇಶಿಸುತ್ತಾಳೆ. ದ್ವಾರಪಾಲಕರು ಬಿಡದಿದ್ದರೂ ಒಳಪ್ರವೇಶಿಸುತ್ತಾಳೆ. ಜಾನಕಿ ಹತ್ತಿರ ತೆರಳಿ ಅವಳಿಗೆ ನಾಗಸಂಪಿಗೆ ಹೂವನ್ನು ಉಡುಗೊರೆಯಾಗಿ ನೀಡುತ್ತಾಳೆ. 'ಎಲ್ಲಿಂದ ಬಂದೆ' ಎಂದು ಕೇಳಿದಾಗ 'ನಾಗಲೋಕದಿಂದ ಬಂದೆ. ನಿನಗಾಗಿ ನಾಗಸಂಪಿಗೆಯನ್ನು ತಂದೆ' ಎನ್ನುತ್ತಾಳೆ. ನಿನಗೆ 'ಹೊನ್ನು, ಹಣ, ಅನ್ನ ವಸ್ತ್ರವನ್ನು ನೀಡುವೆ' ಎಂದಾಗ 'ನಿನ್ನ ಯಾವ ಭಾಗ್ಯವು ನನಗೆ ಬೇಡ ಮುನ್ನಿನ ಅಸುರ ರೂಪವನ್ನು ಬರೆ' ಎನ್ನುತ್ತಾಳೆ. ಆಗ ಸೀತೆ 'ನಾನು ಅವನ ಕಂಡು, ಕೇಳಿ ಅರಿತಿಲ್ಲ. ರಾಮ ಬಂದರೆ ಬೈದಾರೂ ಹೋಗಿನ್ನು' ಎನ್ನುತ್ತಾಳೆ. ಆಗ ಕೊರವಿ ಭಸ್ಮವನ್ನು ಎರಚಿ ಅವಳು ತನ್ನ ಹತೋಟಿಗೆ ಬರುವಂತೆ ಮಾಡುತ್ತಾಳೆ. ಅವಳ ಹತೋಟಿಗೆ ಬಂದ ಸೀತೆ, ಅವನು ವನದಲ್ಲಿ ಬಂದಾಗ ಉಂಗುಷ್ಟ ಕಂಡಿದ್ದೆ ಎನ್ನುತ್ತಾಳೆ. ಕೊರವಿ ಅದನ್ನು ಬರೆ ಎನ್ನುತ್ತಾಳೆ. ನಂತರ ಒಂದೊಂದಾಗಿ ಹಿಂಬಡ, ಪಾದ, ಎದೆ, ತಲೆ ಬರೆಯಿಸಿ ಇಡೀ ರಾವಣನ ಚಿತ್ರ ಬಿಡಿಸಿಸುತ್ತಾಳೆ. ನಂತರ ಅದಕ್ಕೆ ವರಕೊಡು ಎನ್ನುತ್ತಾಳೆ. ಮೈಮರೆತಿದ್ದ ಸೀತೆ

"ಅಳಿದು ಉಳಿಯದಿರು ಉಳಿದು ನೀ ಕೆಡದಿರು
ಧರಿಯವಳಗೆ ಅಡಗದಿರು।
ಕಿರಿಯ ಲಕ್ಷ್ಮಣದೇವ ಹೊಡೆದರೆ ಮಡಿ ಎಂದು
ವರವ ಕೊಟ್ಟಳು ಸೀತೆ ಪಠಕೆ"[೧೨]

ಎಂದು ಲಕ್ಷ್ಮಣನಿಂದ ಮಾತ್ರ ಅದಕ್ಕೆ ನಾಶ ಬರಲಿ ಎಂದು ವರ ನೀಡುತ್ತಾಳೆ. ಆದರೆ ಅರಿವು ತಂದುಕೊಂಡ ಸೀತೆ ಮೋಸವಾಯ್ತೆಂದು ತಿಳಿದು ಆ ಪಟವನು ಹಾರಿಸುತ್ತಾಳೆ. ಆಗ ಪಟ ಕೇರಿಯಲ್ಲಿ ಸುತ್ತುತ್ತದೆ.

"ಉರಿಯೊಳಗಂಜದು ಧರೆಯೊಳಗಡಗದು
ಶರಧಿಯೊಳಗೆ ಮುಣಗದಿಹುದು।
ಹರದಿ ಜಾನಕಿ ಕೊಟ್ಟ ವರದಕಾರಣದಿಂದ
ಬರುತೆದ್ದು ಕುಣಿದಾಡುತಿಹುದು"[೧೩]

ಹೀಗೆ ಕುಣಿದಾಡುವ ಪಟವನ್ನು ಏನು ಮಾಡಬೇಕೆಂದು ತಿಳಿಯದೆ, ರಾಮ ಬಂದರೆ ಅನಾಹುತವಾಗುವದೆಂದು ಮಂಚದಡಿ ಮುಚ್ಚಿಡುತ್ತಾಳೆ. ಇಂದಿನ ವಿಧಿಯನು ಹೇಗೆ ಕಳೆಯಲೆಂದು ಭಯಗೊಳ್ಳುತ್ತಾಳೆ. ಅದೇ ವೇಳೆಗೆ ರಾಮ ಬೇಟೆಯಿಂದ ಮರಳುತ್ತಾನೆ. ಹಾದಿಯಲ್ಲಿ ಅಪಶಕುನಗಳಾಗುತ್ತವೆ. ಅರಮನೆಯಲ್ಲಿ ವಿಜಯೋತ್ಸವ ಆಚರಿಸುತ್ತಿದ್ದರು, ಸೀತೆ ಅಲ್ಲಿ ಬರದಾದಾಗ ರಾಮ ಕರೆಕಳಿಸುತ್ತಾನೆ. ಬಾಡಿದ ಸೀತೆಯ ಮುಖವನ್ನು ನೋಡಿ ಕಾರಣ ಕೇಳುತ್ತಾನೆ. ದುಷ್ಟ ಕನಸು ಕಂಡೆ ಎಂದು ಉತ್ತರಿಸುತ್ತಾಳೆ. ಸೀತೆಯನ್ನು ಸಮಾಧಾನ ಪಡಿಸಿ ಬಂಧುಬಾಂಧವರೊಡನೆ ಊಟಮಾಡಿ ಅಂತಃಪುರಕ್ಕೆ ಬರುತ್ತಾನೆ. ಅಲ್ಲಿರುವ ಸಿಂಹಾಸನದ ಮೇಲೆ ಕುಳಿತಾಗ ತಂದೆಯ ಕಾಲದ ಹಿರಿಸಿಂಹಾಸನ ಎರಡು ಭಾಗವಾಗುತ್ತದೆ. ಹೀಗೇಕಾಯ್ತೆಂದು ಹಾಸಿಗೆ ತೆಗೆಸಿದಾಗ ಅಲ್ಲಿ ಹತ್ತುತಲೆಯ ರಾವಣನ ಪಟವಿರುತ್ತದೆ. ಅದನ್ನು ನೋಡಿ ವ್ಯಗ್ರಗೊಂಡ ರಾಮ

"ಏಸುದಿವಸ ಗಾಸಿಯಾಗಿ ಬರೆದೆ, ಇವನ
ಏಸುದಿವಸ ಭೋಗಿಸಿದೆ"[೧೪]

ಎಂದು ಅವಳ ಮೇಲೆ ಅನುಮಾನ ಪಡುತ್ತಾನೆ. 'ನಾನು ನಿನ್ನ ಪತಿವ್ರತೆ ಎಂದು ತಂದೆ. ಹೆಂಗಸು ಎರಡು ತಲೆ ಹಾವು ಎನ್ನುವುದನ್ನು ಸತ್ಯಮಾಡಿದೆ. ಹಿಂದೆಯೇ ಹೇಳಿದ್ದರೆ ನಿಮ್ಮಿಬ್ಬರನು ಒಂದು ಗೂಡಿಸುತ್ತಿದ್ದೆ' ಎಂದು ಹೇಳುತ್ತಾನೆ. ಸೀತೆ ನಾನು ಪತಿವ್ರತೆ, ತಾಟಗಿತ್ತಿ ಬಂದು ಪಟ ಬರೆಸಿದಳು ಎಂದು ಬಗೆಬಗೆಯಾಗಿ ತಿಳಿಸುತ್ತಾಳೆ. ಆದರೆ ನಂಬದ ರಾಮ ಅವಳನ್ನು ಕಾಡಿಗೆ ಕರೆದುಕೊಂಡು ಹೋಗಿ ಕೊಲ್ಲಲು ಆಜ್ಞೆ ಮಾಡುತ್ತಾನೆ.

ನಂತರ ಉತ್ತರಾರ್ಧ ರಾಮಾಯಣದಂತೆ, ಸೀತಾ ಪರಿತ್ಯಾಗ, ಲವಕುಶ ಜನನ, ಸೀತೆಯ ಸುವರ್ಣಪುತ್ಥಳಿಯೊಂದಿಗೆ ರಾಮನ ಯಾಗ, ಅಶ್ವಮೇಧಯಾಗದ ಕುದುರೆ ವಾಲ್ಮಿಕಿ ಆಶ್ರಮದ

ಪ್ರವೇಶ, ಲವಕುಶ ಅದನ್ನು ಕಟ್ಟುವುದು, ಲವಕುಶರ ಕಾಳಗ, ಸೀತೆಯ ಪಾತಿವ್ರತ್ಯದ ಪರೀಕ್ಷೆ ಮುಂತಾದ ಘಟನೆಗಳೆಲ್ಲವೂ ನಡೆಯುತ್ತವೆ.

ಇಲ್ಲಿ ಶೂರ್ಪನಖಿ ತನ್ನ ಅಣ್ಣನ ಸಾವಿನ ಸೇಡನ್ನು ತೀರಿಸಿಕೊಳ್ಳಲು ಕೊರವಂಜಿ ವೇಷಧರಿಸುತ್ತಾಳೆ. ತನ್ನ ಕರೆಸಿದ ಜಾನಕಿಗೆ ನೀ ಮುಡಿ ಎಂದು ನಾಗಸಂಪಿಗೆ ನೀಡುತ್ತಾಳೆ. ಎಲ್ಲಿಯವಳೆಂದಾಗ 'ಈರೇಳು ಲೋಕ ಸುತ್ತಿ ನಾಗಲೋಕದಿಂದ ದೇವಲೋಕಕ್ಕೆ ಬಂದು ಅಲ್ಲಿಂದ ದೇವಿಗೆ ಕಾಣಿಕೆ ತಂದೆನು'ಎಂದು ಹೇಳಿ ಅವಳು ತನ್ನನ್ನು ನಂಬುವ ಹಾಗೆ ಮಾಡುತ್ತಾಳೆ. ಇವಳನ್ನು ನಂಬಿದ ಸೀತೆ ಇವಳಿಗೆ ಕಾಣಿಕೆ ಕೊಡಲು ಬಂದಾಗ ಇವಳು ಬೇಡುವದು ಅನ್ಯಕೊರವಿಯರಂತೆ ಸಾಮಾನ್ಯ ವಸ್ತುಗಳನ್ನಲ್ಲ. ಸೀತೆಯ ನೋವಿಗೆ ಕಾರಣನಾದ, ಯಾವ ವ್ಯಕ್ತಿಯನ್ನು ಸೀತೆ ಮರೆಯಲು ಪ್ರಯತ್ನಿಸುತ್ತಿದ್ದಳೋ, ಅಂತವನ ಚಿತ್ರ ಬರೆಯಲು ಹೇಳುತ್ತಾಳೆ. ಗೊತ್ತಿಲ್ಲದ ಹಾಗೆ ಮಾಯದ ಭಸ್ಮ ಎರಚಿ ಅವಳು ರಾವಣನ ಚಿತ್ರ ಬಿಡಿಸುವ ಹಾಗೆ ಮಾಡುತ್ತಾಳೆ. ಜೊತೆಗೆ ಅವಳ ಮುಖಾಂತರವೇ ಅದಕ್ಕೆ ನಾಶವಿಲ್ಲದ ವರಕೊಡಿಸುತ್ತಾಳೆ. ಯಾವ ಸೀತೆಯಿಂದ ತನ್ನ ಅಣ್ಣ ಸತ್ತನೋ, ಅವನ ಚಿತ್ರದಿಂದಲಾದರೂ ಅವನ ನಾಶಕ್ಕೆ ಕಾರಣಳಾದವಳ ಜೀವನ ಹಾಳಾಗಲೆಂದು ಕೊರವಿ ರೂಪದ ಶೂರ್ಪನಖಿ ಬಯಸುತ್ತಾಳೆ. ಹೆಂಡತಿ ಬಗ್ಗೆ ಕೆಟ್ಟ ಕನಸು ಕಂಡದಕ್ಕೆ ಓಡಿಬರುವಷ್ಟು ಸೀತೆಯ ಬಗ್ಗೆ ಪ್ರೀತಿ, ಕಾಳಜಿ ಇಟ್ಟಿರುವ ರಾಮನೇ, 'ನೀನು ರಾವಣನಿಗೆ ಮರುಳಾದದ್ದು ನಾನರಿಯೆ' ಎಂದು ಅವಳ ಬಗ್ಗೆ ಸಂಶಯ ಪಡುವ ಹಾಗೆ ಮಾಡುತ್ತಾಳೆ. ತನ್ನ ಮೋಹದ ಮಾತಿನ ಮೂಲಕವೇ ರಾವಣನ ಯಥಾವತ್ ಚಿತ್ರ ಬಿಡಿಸಿಸಿ ಅದು ನಾಶವಾಗದ ಹಾಗೆ ಮಾಡುತ್ತಾಳೆ.

ಈ ಕಾವ್ಯ ಸೀತೆಯ ಸಂದಿಗ್ಧ ಸ್ಥಿತಿಯನ್ನು ತೋರಿಸುತ್ತದೆ. ನಾವು ನೋಡಿದ ಯಾವ ಚಿತ್ರವು ನಮ್ಮ ಮನಸ್ಸನ್ನು ಆವರಿಸದಿರಲು ಸಾಧ್ಯವಿಲ್ಲ. ಹಾಗೆಯೇ ಸೀತೆ ಸಹ ರಾವಣನ ಮುಖವನ್ನು ನೋಡಿರುತ್ತಾಳೆ. ಅವನ ಮುಖಚಿತ್ರಣವು ಅವಳ ಮನಸ್ಸಲ್ಲಿರುತ್ತದೆ. ಆದರೆ ಪತಿವ್ರತೆಯಾದವಳು ಪರಪುರುಷನ ಮುಖ ನೋಡಬಾರದೆಂಬ ಸಾಮಾಜಿಕ ಕಟ್ಟಳೆಯಿಂದ ಎಲ್ಲಿ ತನಗೆ ಅಪವಾದ ಬರುತ್ತದೆಯೋ ಎಂದು ಅವನ ಚಿತ್ರ ಬರೆಯಲು ನಿರಾಕರಿಸುತ್ತಾಳೆ. ಆದರೆ ಪರಪುರುಷನ ಪಾದ ನೋಡುವದು ತಪ್ಪಲ್ಲ ಅದಕ್ಕಾಗಿ ಸೀತೆ "ಅಂದೆನ್ನ ವನಕ್ಕೆ ಪ್ರದಕ್ಷಿಣೆ ಬರುವಾಗ ಉಂಗುಷ್ಠವನ್ನು ಕಂಡುಬಲ್ಲೆ"[೧೫] ಎಂದು ಹೇಳಿ ಉಂಗುಷ್ಠ ಬರೆಯುತ್ತಾ ಇಡೀ ಅವನ ಚಿತ್ರ ಬರೆಯುತ್ತಾಳೆ. ಆತ ಕಾಟಕೊಟ್ಟ ಕಾರಣಕ್ಕೋ ಅಥವಾ ತಾನೊಪ್ಪದೇ ತನ್ನ ಮುಟ್ಟದ ಅವನ ಒಳ್ಳೆಯತನದ ಕಾರಣಕ್ಕೋ ಅವಳ ಮನಸ್ಸಲ್ಲಿ ರಾವಣನ ರೂಪವಿರುವದು ಸತ್ಯ. ಅಗಸನ ಅಪವಾದ ಸೀತೆಯ ಮೇಲೆ ದೈಹಿಕ ಭ್ರಷ್ಟತೆಯ ಅಪವಾದ ಹೊರಸಿದರೆ, ಚಿತ್ರಪಟ ಅವಳಿಗೆ ಮಾನಸಿಕವಾಗಿ ಭ್ರಷ್ಟತೆಯ ಅಪವಾದ ಹೊರಸುತ್ತದೆ.

ಎಲ್ಲ ಕಡೆ ಕೂಡಿಸುವ, ಶುಭಸೂಚಿಸುವ ಕೆಲಸ ಮಾಡುವ ಕೊರವಂಜಿ ಇಲ್ಲಿ ಮಾತ್ರ ಅಗಲಿಸುವ, ನೋವನ್ನುಂಟು ಮಾಡುವ ಕಾರ್ಯ ಮಾಡುತ್ತಾಳೆ. ಇಲ್ಲಿ ಶೂರ್ಪನಖಿ ಶೂದ್ರ ಹೆಣ್ಣು.

ಕೊರವಿ ಸಹ ಶೂದ್ರ ಹೆಣ್ಣು. ಶೂರ್ಪನಖಿ ಧರಿಸುವದು ಶೂದ್ರ ಹೆಣ್ಣಿನ ವೇಷವನ್ನು. ಎಲ್ಲ ಕಡೆ ದೇವಾನುದೇವತೆಗಳು 'ಕೊರವಂಜಿ'ಯಾಗಿ ಒಳ್ಳೆಯ ಕೆಲಸ ಮಾಡುತ್ತಾರೆ. ಇಲ್ಲಿ ಕೆಟ್ಟ ಕಾರ್ಯವಾಗುತ್ತಿರುವುದರಿಂದ ದೇವಾನು ದೇವತೆಗಳನ್ನು ಕೊರವಂಜಿಯಾಗಿ ತರದೆ ಶೂದ್ರ ಹೆಣ್ಣಾದ ಶೂರ್ಪನಖಿಯನ್ನು ತಂದಿರುವ ಸಾಧ್ಯತೆ ಇದೆ. ಅಂದರೆ ಹೆಣ್ಣಿನಿಂದ ಹೆಣ್ಣಿನ ನಾಶ ಮಾಡುವ ಪ್ರತೀಕವಾಗಿ ಅಪವಾದವನ್ನು ಕೆಳಜಾತಿ ಹೆಣ್ಣಿನ ಮೇಲೆ ಹೇರುವ ಮೂಲಕ ಕೆಳಕುಲದ ಹೆಣ್ಣನ್ನು ದುಷ್ಟಳಾಗಿ ಚಿತ್ರಿಸುವ ಹುನ್ನಾರವಿರುವಂತಿದೆ.

ಜನಪದ ಕವಿಗಳಿಗೆ ಮಾತ್ರ ಶೂದ್ರರು, ದೇವತೆಗಳೆಂಬ ಬೇಧವಿಲ್ಲ. ಮುದೇನೂರ ಸಂಗಣ್ಣ ಸಂಪಾದಿಸಿದ ಚಿತ್ರಪಟ ರಾಮಾಯಣದಲ್ಲಿ ಸೀತೆಯಿಂದ ಚಿತ್ರಪಟ ಬಿಡಿಸಿಸುವಳು ಮುನಿಪತ್ನಿ ಯೋಗಿನಿ. ಅಲ್ಲಿ ಮೇಲ್ವರ್ಗದ ಹೆಣ್ಣುಮಗಳೇ ಅಗಲಿಸುವ ಕಾರ್ಯ ಮಾಡುತ್ತಾಳೆ. ಆದರೆ ಶಿಷ್ಟ ಸಾಹಿತ್ಯದಲ್ಲಿ ಕೀಳುಕೆಲಸಕ್ಕೆ ಕೆಳವರ್ಗದವರನ್ನು ಹೆಚ್ಚಾಗಿ ಬಳಸಿಕೊಳ್ಳಲಾಗಿದೆ.

### ೩.೧.೪. ಹೆಳವನಕಟ್ಟೆ ಗಿರಿಯಮ್ಮನ ಬ್ರಹ್ಮಕೊರವಂಜಿ

ಲವಕುಶ ಕಾಳಗವು ರಾಮಾಯಣದ ಕಥೆಯನ್ನು ಹೊಂದಿದ್ದರೆ, ಗಿರಿಯಮ್ಮನ ಬ್ರಹ್ಮಕೊರವಂಜಿ ಮಹಾಭಾರತದ ಕಥಾವಸ್ತುವನ್ನು ಒಳಗೊಂಡ ಕಾವ್ಯವಾಗಿದೆ. ಕಂಸಾಸುರನ ಸೆರೆಮನೆಯಲ್ಲಿ ದೇವಕಿಯು ಕ್ಷಣವನ್ನು ಯುಗವಾಗಿ ಕಷ್ಟದಿಂದ ಕಳೆಯುತ್ತಿರುವಾಗ, 'ನಾರಾಯಣನು ನಿನ್ನ ಉದರದಲ್ಲಿ ಜನಿಸಿ ಕಂಸನನ್ನು ನಾಶಮಾಡಿ ನಿನ್ನನ್ನು ಈ ಸೆರೆಮನೆಯಿಂದ ಪಾರುಮಾಡುವ'ಎಂದು ದೇವಕಿಗೆ ಭವಿಷ್ಯ ನುಡಿಯುವುದಕ್ಕಾಗಿ ಇಲ್ಲಿ ಸಾಕ್ಷಾತ್ ಬ್ರಹ್ಮನೇ ಕೊರವಂಜಿ ವೇಷ ಧರಿಸಿ ಬರುತ್ತಾನೆ.

ಬ್ರಹ್ಮನು ಕೊರವಂಜಿಯಂತೆ ಸುಂದರವಾಗಿ ಅಲಂಕಾರಮಾಡಿಕೊಂಡು ೧೬ ಬಾಗಿಲು ದಾಟಿ 'ಯವ್ವಾ ಯವ್ವಾ' ಎನ್ನುತ್ತಾ ಕೋಗಿಲೆಯಂತೆ ಇಂಪಾದ ಧ್ವನಿಯಲಿ ಕೂಗುತ್ತಿರುವುದನ್ನು ಕಂಡ ದೇವಕಿ ಅವಳನ್ನು ಸನ್ನೆ ಮಾಡಿ ಕರೆಯುತ್ತಾಳೆ.

"ಎನ್ನವ್ವ ಎನ್ನಕ್ಕ ಎನ್ನ ತಂದೆಯ ಹೆತ್ತವ್ವ
ನಿನ್ನ ಮನದಾಯತವ ಹೇಳೇನು ಬಾರವ್ವ
ಎನ್ನ ಕೂಸಿಗೆ ಒಂದಿಷ್ಟನ್ನವನಿಕ್ಕವ್ವ"[೧೬]

ಎಂದು ಹೇಳಿ ಕೊರವಿ ಅವಳಿಗೆ ಕಣಿ ಹೇಳಲು ಸಿದ್ಧಳಾಗುತ್ತಾಳೆ. ತಾನು ಛಪ್ಪನ್ನಾರು ದೇಶವನು ಸುತ್ತಿದ್ದು, ನಾನು ತಪ್ಪು ಹೇಳುವ ಕೊರವಿಯಲ್ಲ ಎಂದು ಹೇಳಿ, ವೀಳ್ಯೆ ಕರ್ಪೂರವನ್ನು ಪಡೆಯುತ್ತಾಳೆ. ಅವಳ ಮಾತು ಕೇಳಿದ ದೇವಕಿ ಮಿಂದುಮಡಿಯುಟ್ಟು, ಮರದ ತುಂಬ ಮುತ್ತನಿಟ್ಟು ಅವಳ ಮುಂದೆ ಕುಳಿತುಕೊಳ್ಳುತ್ತಾಳೆ. ನಂತರ ತನ್ನ ದುಃಖದ ಕಾರಣವನ್ನು ಅವಳ ಮುಂದೆ ಬಿಚ್ಚಿಡುತ್ತಾಳೆ. ದುಷ್ಟಸೋದರ ನನ್ನ ಮಗನಿಂದ ತನ್ನ ಸಾವು ಇರುವುದನ್ನು ತಿಳಿದು ತಮ್ಮನ್ನು ಸೆರೆಯಲ್ಲಿಟ್ಟಿದ್ದು, ತನ್ನ ಏಳುಜನ ಮಕ್ಕಳನ್ನು ಕೊಂದುದ್ದನ್ನು ತಿಳಿಸುತ್ತಾಳೆ.

ಆಗ ಕೊರವಿ ತಿರುಪತಿ ತಿಮ್ಮಪ್ಪ, ಚಳ್ಳಪಿಳ್ಳೆರಾಯ ಮುಂತಾದ ದೇವರನ್ನು ಸ್ಮರಿಸಿ ನಿನ್ನ ಎಂಟನೆ ಗರ್ಭದಲ್ಲಿ ಕಂಸನ ಕಂಟಕ ಹುಟ್ಟುವನು, ಸಟೆಯ ಮಾತಾಡಿ ಸೆಳೆದುಕೊಂಡು ಹೋಗುವವಳು ನಾನಲ್ಲ, ಸದಾಶಿವನನ್ನು ತಟ್ಟಿ ಬಂದ ಈ ಕೊರವಿ ಸತ್ಯವನ್ನು ಹೇಳುವಳು ಎನ್ನುತ್ತಾಳೆ.

ಶ್ರಾವಣ ಬಹುಳಾಷ್ಟಮಿಯ ನಡುವಿರುಳು ರೋಹಿಣಿ ನಕ್ಷತ್ರದಲ್ಲಿ ಬ್ರಹ್ಮಪಿತನೇ ನಿನ್ನ ಮಗನಾಗಿ ಜನಿಸುವ. ಇವನು ಕಂಸನ ಕೈಗೆ ಸಿಗಲಾರ. ಇಂತಹ ಮಗುವನ್ನು ಹೆತ್ತ ವಸುದೇವ ಗೋಕುಲಕ್ಕೆ ಹೋಗುವಾಗ ಯಮುನೆ ಹಾದಿಬಿಡುವಳು. ಅಲ್ಲಿಂದ ತಂದ ದುರ್ಗೆಯನ್ನು ಕಂಸಕೊಲ್ಲಲು ಹೋದಾಗ ಅವಳು ಕೃಷ್ಣಗೋಕುಲದಲ್ಲಿ ಬೆಳೆದು ಕಂಸನನ್ನು ಸಂಹರಿಸುವ ವಿಷಯ ಹೇಳಿ ಹಾರಿ ಹೋಗುವಳು. ತನ್ನನ್ನು ಕೊಲ್ಲಲು ಕಂಸ ಕಳಿಸಿದ ರಾಕ್ಷಸರು, ಪೂತನಿ, ವತ್ಸನೆಂಬ ಅಸುರನ ಸಂಹರಿಸುವ, ಬಾಯಲ್ಲಿ ಬ್ರಹ್ಮಾಂಡ ತೋರುವ, ಗೋವರ್ಧನ ಗಿರಿಯನ್ನು ಬೆರಳಲ್ಲಿ ಎತ್ತುವ, ಗೋಪಿಯರೊಡನೆ ಜಲಕ್ರೀಡೆಯಾಡುವ, ರುಕ್ಮಿಣಿಗೆ ಒಲಿಯುತ್ತಾನೆಂದು ತಿಳಿಸುತ್ತಾಳೆ ಕೊರವಿ.

ತಾನು ಕಳಿಸಿದ ಭಟರು ಬರದಾಗ ಕಂಸ ಅಕ್ರೂರರೊಡನೆ ಮಾತಾಡಿ ಬಿಲ್ಲ ಹಬ್ಬದ ನೆಪದಲ್ಲಿ ಕೃಷ್ಣನ ಕರೆಸುತ್ತಾನೆ. ಆತ ಕ್ಷಣದಲ್ಲಿ ಬಿಲ್ಲು ಮುರಿದು ಕಂಸನನ್ನು ಸಂಹರಿಸಿ ಉಗ್ರಸೇನನಿಗೆ ಪಟ್ಟಕಟ್ಟಿ, ನಿಮ್ಮನ್ನು ಬಿಡಿಸುತ್ತಾನೆ. ಕೌರವರ ಕೊಂದು ಪಾಂಡವರ ಪ್ರತಿಪಾದಿಸುತ್ತಾನೆಂದು ಭವಿಷ್ಯ ನುಡಿಯುತ್ತಾಳೆ.

ಆದರೆ ಭಯಬಿಡದ ದೇವಕಿ 'ಹೀನ ಕಂಸನಿಟ್ಟ ಸೆರೆ ಹಿಂಗುವುದೇ ಆಸೆಯ ಕೊಡದಿರು' ಎಂದು ಅಧೀರಳಾಗಿ ನುಡಿಯುತ್ತಾಳೆ. ಆಗ ಅವಳನ್ನು ಸಂತೈಸುವ ಕೊರವಂಜಿ 'ನಾನು ಸತ್ಯಲೋಕದವಳು, ಹೊತ್ತ ಮಗುವಿನ ಆಣೆ, ಹಿಂದೆ ಬಲಿಚಕ್ರವರ್ತಿ ಭೂಮಿಯಲ್ಲಿ ಅಡಗುವ, ರಾವಣ ಸಂಹಾರವಾಗುವ ವಿಷಯವನ್ನು ಭವಿಷ್ಯ ನುಡಿದಿದ್ದೆ, ನನ್ನ ಮಾತು ಸುಳ್ಳಲ್ಲ' ಎಂದು ನಂಬಿಸಿ 'ಹೊಟ್ಟೆಹಸಿಯಿತು ಕೈಮುಟ್ಟಿ ಅನ್ನ, ಉಟ್ಟಸೀರೆ ಕೊಡು, ಮಗನಾದ ಮೇಲೆ ಊರ ಉಂಬಳಿ ಪಡೆಯುತ್ತೇನೆ'ಎಂದು ಹೇಳುತ್ತಾಳೆ. ದೇವಕಿ ಕಾಣಿಕೆಗಳನ್ನು ಕೊಡುವ ಭರವಸೆ ನೀಡುತ್ತಾಳೆ. 'ಈ ಮಾತು ಸತ್ಯ ಗಂಡ, ಮಕ್ಕಳಾಣೆ' ಎಂದು ಹೇಳಿ ಹೊತ್ತಾಯಿತು ಎಂದು ಅಲ್ಲಿಂದ ತೆರಳುತ್ತಾಳೆ. ಹೋಗುವಾಗ ವಾಲಗದಲ್ಲಿರುವ ಕಂಸಾಸುರನನ್ನು ಕಂಡು ಕಂದ ಹುಟ್ಟಿ ನಿನ್ನ ಕೊಲ್ಲುವ ಎಂದು ಸಾರುತ್ತಾ ತೆರಳುತ್ತಾಳೆ.

ಇಲ್ಲಿ ಕೊರವಂಜಿ ಬರುವುದು ಸಂಕಷ್ಟದಲ್ಲಿರುವ ಹೆಣ್ಣುಮಗಳಿಗೆ ಸಾಂತ್ವನ ಮಾಡಿ, ಅವಳ ಮನದ ನೋವು ನಿವಾರಿಸಿ, ಅವಳಿಗೆ ಭವಿಷ್ಯದ ಬಗ್ಗೆ ಭರವಸೆ ಮೂಡಿಸುವುದಕ್ಕಾಗಿ. ಅಣ್ಣನ ಕ್ರೂರತೆಯಿಂದ ಸೆರೆಯಲ್ಲಿದ್ದು, ಏಳು ಮಕ್ಕಳನ್ನು ಕಳೆದುಕೊಂಡ ದೇವಕಿ ಎಂಟನೇ ಗರ್ಭಧರಿಸಿ ಇದು ಸಹ ಅಣ್ಣನ ಕ್ರೂರತೆಗೆ ಎಲ್ಲಿ ಬಲಿಯಾಗುವುದೋ ಎಂಬ ಚಿಂತೆಯಲ್ಲಿರುವಾಗ. ಆತ್ಮೀಯತೆಗೆ

ನೋವನ್ನು ನಿವಾರಿಸುವ ಶಕ್ತಿಯಿದೆಯೆಂಬುದನ್ನು ಅರಿತ ಕೊರವಿ, 'ಎನ್ನವ್ವ ಎನ್ನಕ್ಕ ಎನ್ನ ತಂದೆಯ ಹೆತ್ತ ತಾಯಿ' ಎಂಬ ಬಾಂಧವ್ಯದ ಮಾತುಗಳ ಮೂಲಕ ಅವಳನ್ನು ಆತ್ಮೀಯಳನ್ನಾಗಿ ಮಾಡಿಕೊಂಡು ಅವಳ ನೋವನ್ನು ನಿವಾರಿಸುತ್ತಾಳೆ. ಇಲ್ಲಿಯವರೆಗೆ ಸೆರೆಯಲ್ಲಿರುವ ದೇವಕಿಯ ನೋವನ್ನು ಯಾರೂ ಕೇಳದ ಸಂದರ್ಭದಲ್ಲಿ ಕೊರವಂಜಿ ಶಾಂತಳಾಗಿ ಕುಳಿತು ಅವಳ ನೋವಿನ ಕತೆಯನ್ನು ಕೇಳಿ, ದೇವಕಿ ತನ್ನ ನೋವನ್ನು ಹೊರಹಾಕುವ ಹಾಗೆ ಮಾಡುತ್ತಾಳೆ. ನಂತರ ಅವಳಿಗೆ ಮಗ ಹುಟ್ಟುವ ವಿಷಯ ಮತ್ತು ಮಗ ಹುಟ್ಟಿದಾಗ ಆತನನ್ನು ಯಾವ ರೀತಿ ಕಾಪಾಡಿಕೊಳ್ಳಬೇಕೆಂದು ತಿಳಿಸುತ್ತಾಳೆ. ಜೊತೆಗೆ ಅವಳಿಗೆ ಅವಳ ಮಗನು ಮಾಡುವ ಬಾಲಲೀಲೆ, ಸಾಹಸಗಳೆಲ್ಲವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಾಳೆ. ಯಾವ ತಾಯಿಯಾದರೂ ಸಹ ತಮ್ಮ ಮಕ್ಕಳ ಬಗ್ಗೆ ಒಳ್ಳೆಯ ಮಾತುಗಳನ್ನು ಕೇಳಿದರೆ ಸಾಕು ತಮ್ಮೆಲ್ಲ ಕಷ್ಟಗಳನ್ನು ಮರೆಯುತ್ತಾರೆ. ಅಂತೆಯೇ ಕೊರವಂಜಿ ಕೃಷ್ಣನ ಬಗ್ಗೆ ಒಳ್ಳೆಯ ಮಾತುಗಳನ್ನಾಡಿ ಅವಳಲ್ಲಿ ಭವಿಷ್ಯದ ಬಗ್ಗೆ ಭರವಸೆ ಹುಟ್ಟಿಸುತ್ತಾಳೆ. ಕೊರವಂಜಿಯ ಇಷ್ಟೆಲ್ಲ ಮಾತು ಕೇಳಿದರೂ ದೇವಕಿ

"ಹೀನ ಕಂಸನಿಟ್ಟ ಸೆರೆ ಹಿಂಗುವದೆ ನಮಗೆ
ನೂನವಿಲ್ಲದೆ ಹೇಳೆ ನಂಬಿಸಬೇಡವೆನ್ನ
ಕಾಣಬಹದಕೆ ಕನ್ನಡಿ ಯಾಕೆ ಕೊರವಂಜಿ
ಏನು ಮಾಡುವೆ ನೀನು ನಮ್ಮ ಪ್ರಾರಬ್ಧಕ್ಕೆ"[೧೭]

ಎಂದು ಅಪನಂಬಿಕೆಯಿಂದ ಕೇಳಿದಾಗ ನಾಲ್ಕು ದಿವಸ ತಾಳು ನಾನು ಹುಸಿಯಾಡುವಳಲ್ಲ ಎಂದು ನಂಬಿಕೆ ಹುಟ್ಟಿಸುತ್ತಾಳೆ. ಆಗದಾಗದೆಂದು ಅನುಮಾನ ಬೇಡ ಎಂದು ಹೇಳಿ ಕೊನೆಗೆ

"ಆಡುವ ಕೂಸಿನಾಣೆ ಬೇಡುವ ಜೀವನಾಣೆ
ಕೂಡಿದ್ದ ಸವತಿಯ ಕಣ್ಣಾಣೆ ಕೇಳೇ ಅಮ್ಮಯ್ಯ"[೧೮]

ಎಂದು ತನ್ನ ಕುಟುಂಬದವರ ಆಣೆ ಮಾಡುತ್ತಾಳೆ. ಯಾವ ಹೆಣ್ಣುಮಗಳು ಸತ್ಯವಿರದೆ ಗಂಡ, ಮಕ್ಕಳಾಣೆ ಮಾಡುವದಿಲ್ಲ. ಹಾಗೆ ಮಾಡಿದರೆ ಯಾರ ಆಣೆ ಇಟ್ಟಿರುತ್ತಾರೋ, ಅವರಿಗೆ ಕೇಡಾಗುತ್ತದೆಂಬ ನಂಬಿಕೆಯಿದೆ. ಅಂಥದರಲ್ಲಿ ಕೊರವಿ ಗಂಡ, ಮಕ್ಕಳಾಣೆ ಹಾಕಿ ತಾನು ಸುಳ್ಳು ಹೇಳುವುದಿಲ್ಲ ಎಂಬುದನ್ನು ಸಾಬೀತು ಮಾಡುತ್ತಾಳೆ. ಎಂಟು ಮಕ್ಕಳನ್ನು ಹೆತ್ತರು, ತಾಯ್ತನದ ಸುಖವ ಕಾಣದ ದೇವಕಿಗೆ ಆಕೆಯ ಮಗು ಹತ್ತಿರವಿರದಿದ್ದರೂ ಜೀವಂತ ಉಳಿಯುವ ಭರವಸೆ ನೀಡುತ್ತಾಳೆ. ಹೀಗೆ ಕೊರವಂಜಿ ದೇವಕಿಗೆ ಆತ್ಮೀಯತೆಯಿಂದ ಮಾತನಾಡುವ, ಅವಳ ನೋವಿನ ಕಥೆ ಕೇಳುವ, ಅವಳ ಹುಟ್ಟುವ ಮಗುವಿನ ಬಗ್ಗೆ ಗುಣಗಾನ ಮಾಡುವ, ತನ್ನ ಬಗ್ಗೆ ನಂಬಿಕೆ ಹುಟ್ಟುವ ಹಾಗೆ ಮಾಡುವ ಮೂಲಕ ದೇವಕಿಯು ತನ್ನ ನೋವನ್ನೆಲ್ಲ ಕಳೆದುಕೊಳ್ಳುವ ಹಾಗೆ ಮಾಡುತ್ತಾಳೆ. ಗರ್ಭಿಣಿ ಹೆಣ್ಣುಮಕ್ಕಳು ಮಾನಸಿಕವಾಗಿ ನೊಂದರೆ ಹುಟ್ಟುವ ಮಗುವಿನ ಮೇಲೆ ಕೆಟ್ಟ ಪರಿಣಾಮವಾಗುತ್ತದೆ. ಇದನ್ನರಿತ ಕೊರವಂಜಿ ಅವಳ ನೋವನ್ನು ನಿವಾರಿಸಿ ಅವಳು ನಿರ್ಭಯದಿಂದ ಮಗುವಿಗೆ ಜನ್ಮ ಕೊಡುವ ಹಾಗೆ ಮಾಡುತ್ತಾಳೆ.

"ದುಷ್ಟ ಕಂಸನ ಕೊಂದು ಸೃಷ್ಟಿಯ ಭಾರವನಿಳುಹಿ
ಪಟ್ಟವ ಉಗ್ರಸೇನಗೆ ಕಟ್ಟಿ ರಕ್ಷಿಸುವನು ಕಾಣೆ
ಕರುಣಾಕರನು ನಿಮ್ಮ ಮೊರೆಯ ಲಾಲಿಸಿ ಮುನ್ನ
ಸೆರೆಯ ಬಿಡಿಸುವನು ಅರಿಕೆಯಿರಲಿ ನಿಮಗೆ"[೧೯]

ಎಂದು ಕೊರವಂಜಿ ಯಾವ ರೀತಿ ಕೃಷ್ಣ ದುಷ್ಟ ಸಂಹಾರ ಮಾಡಿ ಶಿಷ್ಟರಕ್ಷಣೆ ಮಾಡುವನೆಂದು ತಿಳಿಸಿ, ಅವಳ ಬಂಧನ ಹರಿದು ಸುಂದರ ಬದುಕು ಬರುವ ಬಗ್ಗೆ ತಿಳಿಸುತ್ತಾಳೆ. ಈ ಮೂಲಕ ಅವಳಲ್ಲಿ ಬದುಕಿನ ಬಗೆಗೆ ಭರವಸೆ ತುಂಬುತ್ತಾಳೆ.

**೩.೧.೫. ಹೆಳವನಕಟ್ಟೆ ಗಿರಿಯಮ್ಮನ ಕೃಷ್ಣಕೊರವಂಜಿ**

ಇದು ಸಹ ಮಹಾಭಾರತದ ಕಥಾವಸ್ತುವನ್ನು ಒಳಗೊಂಡಿದೆ. ಇಲ್ಲಿ ಸ್ವತಃ ಕೃಷ್ಣನೇ ಕೊರವಂಜಿ ವೇಷ ಧರಿಸಿ ಬಂದು ರುಕ್ಮಿಣಿಗೆ ಕಣಿ ಹೇಳುತ್ತಾನೆ.

ಪ್ರಾರಂಭದಲ್ಲಿ ವಿಷ್ಣು, ವಿನಾಯಕ, ಮಾರುತಿ, ಭಾರತಿದೇವಿ ಶಿವನನ್ನು ನಮಿಸಿ ಕಾವ್ಯ ಪ್ರಾರಂಭವಾಗುತ್ತದೆ. ನಂತರ ಕೊರವಂಜಿಯ ವರ್ಣನೆ ಬರುತ್ತದೆ. ಕೃಷ್ಣ–ರುಕ್ಮಿಣಿಯರು ಪರಸ್ಪರ ಮೆಚ್ಚಿಕೊಂಡು ಮದುವೆಯಾಗಲು ಬಯಸಿರುತ್ತಾರೆ. ಆದರೆ ರುಕ್ಮನು ತನ್ನ ತಂಗಿಯನ್ನು ದಮಘೋಷನ ಮಗನಾದ ಶಿಶುಪಾಲನಿಗೆ ಕೊಡಲು ನಿರ್ಧರಿಸಿರುತ್ತಾನೆ. ಅಣ್ಣನ ಈ ನಿರ್ಧಾರದಿಂದ ರುಕ್ಮಿಣಿ ಭಯಗೊಂಡಿರುತ್ತಾಳೆ. ಆಗ ಭಯಗೊಂಡ ರುಕ್ಮಿಣಿಯ ಭಯವನ್ನು ದೂರಮಾಡಲು ಕೃಷ್ಣ ಸ್ವತಃ ತಾನೇ ಕೊರವಂಜಿ ವೇಷವನ್ನು ಧರಿಸಿಬರುತ್ತಾನೆ. 'ಏಯಮ್ಮಾ, ಏಯವ್ವಾ, ಏಯಕ್ಕಾ' ಎಂದು ಕೂಗುತ್ತಾ ಬಂದ ಕೊರವಂಜಿ ತಾನು ಯಾವ ಯಾವ ದೇಶಗಳನ್ನು ತಿರುಗಿ ಬಂದೆನೆಂದು ಹೇಳುತ್ತಾಳೆ.

"ಅಂಜದಿರು ಅಂಜದಿರು ಕುಂಜಲೋಚನಿ ಮಂಜು ತಿಳಿದಂತೆ ನಿ
ನ್ನಂಜಿಕೆ ಪರಿಹಾರ ಸಂಜೀವಿನೀಮಾತು ಒಂದು ಮನಸು ಮಾಡು"[೨೦]

ಎಂದು ಕೇಳುವ ಮೂಲಕ ರುಕ್ಮಿಣಿಯ ಭಯವನ್ನು ನಿವಾರಿಸಿ ಕೃಷ್ಣನೇ ಅವಳನ್ನು ಮದುವೆಯಾಗುವ ವಿಷಯ ತಿಳಿಸುತ್ತಾಳೆ.

ತಾನು ಪ್ರೇಮಿಸಿದ ವ್ಯಕ್ತಿಯನ್ನು ಬಿಟ್ಟು, ಅಣ್ಣನ ಕಾರಣದಿಂದ ಅನ್ಯವ್ಯಕ್ತಿಯನ್ನು ಮದುವೆಯಾಗಬೇಕಾಗುತ್ತದೇನೋ ಎಂಬ ಭಯದಲ್ಲಿರುವ ರುಕ್ಮಿಣಿಯನ್ನು ಸಮಾಧಾನ ಪಡಿಸಲು ಬಂದ ಕೊರವಂಜಿ ಅವಳೊಂದಿಗೆ ಆತ್ಮೀಯತೆಯಿಂದ ಮಾತನಾಡುತ್ತಾಳೆ. ಅವಳ ಇಚ್ಛಿಸಿದ ವರನೇ ಅವಳನ್ನು ಮದುವೆಯಾಗುವುದಾಗಿ ಭವಿಷ್ಯ ನುಡಿದು ಅವಳ ನೋವನ್ನು ಪರಿಹರಿಸುತ್ತಾಳೆ. ಇಲ್ಲಿ ಕೊರವಂಜಿಯ ಮತ್ತೊಂದು ರೂಪವನ್ನು ನೋಡಬಹುದು.

### ೩.೧.೬. ಗೋವಿಂದ ವೆಂಕಟ ಕವಿಯ ಪಾರ್ವತಿ ಕೊರವಂಜಿ

ಮಳೆಯ ಕೋಟೆಯ ತಿರುಮಲ್ಲೈಯನ ಕುಮಾರ ಗೋವಿಂದ ವೆಂಕಟಕವಿ ಈ ಯಕ್ಷಗಾನ ಕೃತಿ ಬರೆದಿದ್ದಾನೆ. ಅಯೋಧ್ಯೆಯ ದಶರಥ ಮಹಾರಾಜನ ಪಟ್ಟದರಾಣಿ ಕೌಸಲ್ಯಾದೇವಿಗೆ ಶ್ರೀರಾಮನು ಜನಿಸುವ ವಿಷಯವನ್ನು ಕೊರವಂಜಿ ರೂಪದಲ್ಲಿ ಹೋಗಿ ಹೇಳಿ ಬಾ ಎಂದು ಶಿವ ಪಾರ್ವತಿಗೆ ಕಟ್ಟಳೆಯನ್ನು ವಿಧಿಸುತ್ತಾನೆ. ಪತಿಯ ಮಾತಿನಂತೆ ಪಾರ್ವತಿ ಕೊರವಂಜಿ ವೇಷಧರಿಸಿ ಬಂದು ಕೌಸಲ್ಯಾದೇವಿಗೆ ಕಣಿ ಹೇಳಿ ಹೋಗುತ್ತಾಳೆ.

ದಶರಥ ಮಹಾರಾಜ ಧರ್ಮನಿಷ್ಟೆಯಿಂದ ಕೌಸಲ್ಯೆ, ಸುಮಿತ್ರೆ, ಕೈಕೆಯರೊಡಗೂಡಿ ಧರಣಿಯನ್ನಾಳುತ್ತಿರುತ್ತಾನೆ. ಆದರೆ ತಮಗೆ ಇಷ್ಟು ದಿನವಾದರೂ ಮಕ್ಕಳಾಗದಿದ್ದುದರ ಬಗ್ಗೆ ಸತಿಯರಲ್ಲಿ ಹೇಳಿ ಚಿಂತಿಸುತ್ತಿರುತ್ತಾನೆ. 'ಯಾರನ್ನು ನೋಡಿ ಮರುಗಿದೆವೋ, ಶಿವಪೂಜೆ ಮಾಡಲಿಲ್ಲವೋ, ಪೂರ್ವಜನ್ಮದಲ್ಲಿ ಯಾವ ಕರ್ಮ ಮಾಡಿದೆವೋ, ಬ್ರಹ್ಮ ನಮ್ಮ ಹಣೆಯಲ್ಲಿ ಬರೆದಿಲ್ಲವೋ ಯಾವ ಕಾರಣದಿಂದ ಮಕ್ಕಳಿಲ್ಲವೋ' ಎಂದು ಹೇಳುತ್ತಿರುವಾಗ ಕೌಸಲ್ಯೆಯು ನಮ್ಮ ಹಣೆಯಲ್ಲಿ ಬ್ರಹ್ಮ ಮಕ್ಕಳನ್ನು ಬರೆದಿದ್ದರೆ ಇನ್ನಾದರೂ ಪಡೆಯುತ್ತೇವೆಂದು ಸಮಾಧಾನ ಮಾಡುತ್ತಾಳೆ. ಅದೇ ವೇಳೆಗೆ ನಾರದ ಅಲ್ಲಿಗೆ ಬರುತ್ತಾನೆ. ಅವನನ್ನು ಭಕ್ತಿಯಿಂದ ರಾಜ ಉಪಚರಿಸಿದಾಗ ನಾರದ ಚಿಂತೆಬೇಡ ಕಂತುವನ್ನು ಪಡೆದವನು ರಾಮಾವತಾರದಲ್ಲಿ ಜನಿಸುವ ಎಂದು ಆಶ್ವಾಸನೆ ನೀಡುತ್ತಾನೆ. ಈ ವಿಷಯವನ್ನು ಮಂತ್ರಿ, ಪುರೋಹಿತ, ಗುರುಗಳಿಗೆ ತಿಳಿಸಿದಾಗ ಅವರು ಪುತ್ರಕಾಮೇಷ್ಟಿಯಾಗವನ್ನು ಮಾಡಲು ಹೇಳುತ್ತಾರೆ. ಅಂತೆಯೇ ರಾಜ ಪುತ್ರಕಾಮೇಷ್ಟಿಯಾಗವನ್ನು ಮಾಡಿದಾಗ ರಾಣಿಯರು ಗರ್ಭವತಿಯರಾಗುತ್ತಾರೆ.

ಇತ್ತ ಕೈಲಾಸದಲ್ಲಿ ಶಿವ ಪಾರ್ವತಿಗೆ 'ನೀನು ಧರೆಗೆ ಕೊರವಂಜಿ ವೇಷದಲ್ಲಿ ಹೋಗಿ ಕಣಿ ಹೇಳು' ಎಂದು ಕಟ್ಟಳೆ ವಿಧಿಸುತ್ತಾನೆ. ಆಗ ಅವಳು ಅವನ ಅಪ್ಪಣೆಯಂತೆ ವಿನಾಯಕನನ್ನು ಮಗು ಮಾಡಿಕೊಂಡು, ಅವನಿಗೆ ವಂದಿಸಿ ಭೂಲೋಕಕ್ಕೆ ಬರುತ್ತಾಳೆ. ಕೊರವಂಜಿಯಂತೆ ವೇಷಭೂಷಣ ಮಾಡಿಕೊಂಡು ಕೇರಿಯೊಳಗೆ ಸುತ್ತುತ್ತಾ ಬರುವಾಗ, ಕೌಸಲ್ಯೆ ಕಂಡು ತನ್ನ ಕಡೆಯವರಿಂದ ವಿಚಾರಿಸಿದಾಗ ದಶರಥನಿಗೆ ಪುತ್ರನಾಗುವ ಸುವಾರ್ತೆ ಹೇಳಲು ಬಂದಿರುವೆ ಎನ್ನುತ್ತಾಳೆ. ರಾಣಿ ಅವಳನ್ನು ಕರೆಯಿಸಿ ಸಖಿಯರಿಂದ ಉಪಚರಿಸಿ, ತಾನು ಶೃಂಗಾರಗೊಂಡು, ಕಣಿ ಕೇಳಲು ಸಿದ್ಧಳಾಗುತ್ತಾಳೆ. ಅವಳ ರೂಪಕ್ಕೆ ಮರುಳಾದ ಕೌಸಲ್ಯೆ 'ನೀನು ಸುಂದರಳಾಗಿರುವೆ ನಿನ್ನ ಗಂಡನು ಹೀಗೆಯೇ?' ಎಂದಾಗ 'ಆತ ಭೂತದೊಡನೆ ಚಲಿಸುವ, ಚರ್ಮ ಧರಿಸಿದವ, ಬೂದಿಬಳಿದವ' ಎಂದು ತನ್ನ ಗಂಡನ ರೂಪವನ್ನು ಯಥಾವತ್ತಾಗಿ ವರ್ಣಿಸುತ್ತಾಳೆ. ನಂತರ ಕೊಲ್ಲಾಪುರದಮ್ಮ, ಗೋವಿಂದರಾಜ, ಸೋಮೇಶಲಿಂಗ, ವಿರೂಪಾಕ್ಷ ಹೀಗೆ ಸುತ್ತಲ ದೇವರನ್ನು ನೆನಸಿ 'ಮಂದರಧರ ನಿನಗೆ ವಿಷ್ಣುರೂಪಿನಲ್ಲಿ ಕಂದನಾಗಿ ಬರುವ, ಚಂಡ ದೈತ್ಯರನು ಕೊಲ್ಲುವ' ಎಂದು ಭವಿಷ್ಯ ನುಡಿಯುತ್ತಾಳೆ. ಕೌಸಲ್ಯೆ 'ಬ್ರಹ್ಮನಯ್ಯನು ಎನ್ನ ಗರ್ಭದಲ್ಲಿ ಬರುವನೇ' ಎಂದು ಸಂಶಯ

ವ್ಯಕ್ತಪಡಿಸಿದಾಗ 'ದೈತ್ಯರಿಂದ ಭೀತರಾದ ದೇವತೆಗಳಿಗೆ ವಿಷ್ಣುವೇ ವರನೀಡಿದ್ದಾನೆ ಇದು ಸತ್ಯ' ಎನ್ನುತ್ತಾಳೆ. 'ಚಿಕ್ಕವಯಸ್ಸು ದಾಟಿದ ನನಗೆ ನಿನ್ನ ಮಾತಿನಂತೆ ಮಕ್ಕಳಾದರೆ ನಿನಗೆ ಚಿನ್ನದುಡುಗೆಯನು ತೊಡಿಸುವೆನು' ಎಂದು ಕೌಸಲ್ಯೆ ಹೇಳುತ್ತಾಳೆ.

ಅದೇ ಹೊತ್ತಿಗೆ ಸಿಂಗಸಾನಿಯನ್ನು ಅರಸುತ್ತ ಸಿಂಗನಾಗಿ ಮುಪ್ಪಿನ ವೇಷದಲ್ಲಿ ಶಿವ ಬರುತ್ತಾನೆ. ಹಾವು, ಕಪ್ಪೆ ಬುಟ್ಟಿಯಲ್ಲಿ ಹಾಕಿಕೊಂಡು, ತಾಂಬೂಲ ತಿಂದು, ಜೊಲ್ಲು ಸುರಿಸುತ್ತಾ ಬಂದು ಕೊರವಂಜಿಯನ್ನು ಕರೆದುಕೊಂಡು ಹೋಗುತ್ತಾನೆ. ಚಿಕ್ಕವಯಸ್ಸಿನ ಕೊರವಂಜಿಗೆ ಮುಪ್ಪಿನ ಮುದುಕ ಗಂಡ ಸಿಕ್ಕ ಎಂದು ಜನ ಆಶ್ಚರ್ಯ ಪಡುತ್ತಿರುವಂತೆಯೇ ಅವರು ಕೈಲಾಸವನ್ನು ತಲಪುತ್ತಾರೆ.

ಇಲ್ಲಿ ಪರಮೇಶ್ವರ ಅಣತಿಯಂತೆ ಪಾರ್ವತಿ ಕೊರವಂಜಿ ವೇಷವನ್ನು ಧರಿಸಿ ಬಂದು "ಒಂದು ಲೇಸಾ ನೆನೆದೇಯಮ್ಮಾ ವನಿತೆ ನಿನ್ನ ಗರ್ಭದಲ್ಲಿ ಮಂದರಾಧರನು ಜನಿಸ್ಯಾನೆ ಕೌಸಲ್ಯಾದೇವಿ ಕಂದನಾಗಿ ವಿಷ್ಣುರೂಪಿನಲಿ"[೨೧] ಎಂದು ಚಿಕ್ಕವಯಸ್ಸು ತೀರಿದ ಕೌಸಲ್ಯೆಗೆ ರಾಮನು ಜನಿಸುವ ವಿಷಯವನ್ನು ತಿಳಿಸುತ್ತಾಳೆ. ನಿನ್ನ ಗರ್ಭದಲ್ಲಿ ಒಂಬತ್ತು ತಿಂಗಳಿಗೆ ರಾಮ ಜನಿಸುತ್ತಾನೆ ಎಂದು ಭವಿಷ್ಯ ನುಡಿಯುತ್ತಾಳೆ. ಕೌಸಲ್ಯೆ ತನ್ನ ಗರ್ಭದಲ್ಲಿ ಅಂಥ ಮಗು ಸಾಧ್ಯವೇ ಎಂದು ಚೋದ್ಯ ಪಟ್ಟಾಗ ಇದು ಮಹಾವಿಷ್ಣುವೇ ಪ್ರಧಾನ ಮಾಡಿದ ವರ ಎಂದು ಅವಳಲ್ಲಿ ಭರವಸೆ ತುಂಬುತ್ತಾಳೆ.

"ಚಿಕ್ಕ ವಯಸ್ಸು ಹೋದ ಮೇಲೆ ಯೆಲ್ಲಿಯ ಮಕ್ಕಳು ಮಂದಯಾನೆ"[೨೨] ಎಂದು ಕೌಸಲ್ಯೆ ಸಂಶಯಪಟ್ಟಾಗ ಕೊರವಿ 'ಕಂದ ತಂದ ಕೊಂದ' ಎಂದು ಮೂರು ಮಾತಿನಲ್ಲಿ ರಾಮಾಯಣದ ಕಥೆ ಹೇಳಿ ಅವಳಲ್ಲಿ ನಂಬಿಕೆ ಹುಟ್ಟಿಸುತ್ತಾಳೆ. ಈ ಮೂಲಕ ಮಕ್ಕಳಿಲ್ಲದೆ ಕೊರಗುತ್ತಿದ್ದ ಕೌಸಲ್ಯೆಯಲ್ಲಿ ತಾಯ್ತನದ ಹಂಬಲವನ್ನು ತುಂಬಿ ಬರುತ್ತಾಳೆ.

ಜೊತೆಗೆ ಇಲ್ಲಿ ಕೊರವಂಜಿ ತನ್ನ ಗಂಡನ ಬಗ್ಗೆ ಕೇಳಿದಾಗ ತನ್ನ ತವರು, ಗಂಡ, ಸವತಿ, ಮಕ್ಕಳ ಬಗ್ಗೆ

"ಭೂತ ಹಿಂಡುಗಳೊಳಗೆ ಪುಲಿಯ ಚರ್ಮವ ಪೊದ್ದು
ಭೂತಳವ ಚಲಿಸುವನು ಬೂದಿಯನು ಪೂಸಿ
ಕಣ್ಣ ಕೆಂಪಗೆ ಮಾಡಿ ಕರದಿ ಬುರುಡೆಯ ಪಿಡಿದು
ತನ್ನ ತಾನರಿಯದೇ ತಾಂಡವಾಡುವನು
ವಿಷವ ಕೊರಳೊಳಗಿಟ್ಟು ವೀರನಂದದಿ ಬಹನು
ಮಸೆವಲಗು ಮಾರದಿಂದ ಮಾತನಾಡಿಸುವನು
ಮರಿ ಹಾವುಗಳ ಸುತ್ತಿ ಆಲದೆಲೆಯ ಹೆಗಲಲ್ಲಿ
ಶಿರದ ಮೇಲೊಂದು ನೀರ ಕೊಡನ ಹೊತ್ತಿಹನು

ಸೊಲ್ಲಿಸಲು ಸುಮ್ಮನೆಯ ಕಲ್ಲಿನಂದದಿಯಿರುವ

ಬಿಲ್ಲವರ ಬಾಗಿಲನು ಕಾಯ್ದುಕೊಂಡಿಹನು"[೨೩]

ಎಂದು ವ್ಯಂಗವಾಗಿ ವರ್ಣಿಸುತ್ತಾಳೆ. ಅವಳು ವ್ಯಂಗ್ಯವಾಗಿ ಮಾತನಾಡಿದರೂ ಅವಳ ಮಾತು ಇಡೀ ಕೈಲಾಸ, ಕೈಲಾಸಪತಿಯ ವರ್ಣನೆ ನೀಡುತ್ತದೆ. ಶಿವ ಪಾರ್ವತಿಯನ್ನು ಕರೆದುಕೊಂಡು ಹೋಗಲು ಮುಪ್ಪಿನ ಅಸಹ್ಯಕರ ಕೊರವನಾಗಿ ಬಂದು ಸುಂದರವಾಗಿರುವ ಕೊರವಂಜಿಗೆ ಇಂತಹ ಗಂಡನೇ ಎಂದು ಜನ ಆಶ್ಚರ್ಯಪಡುವಂತೆ ಮಾಡಿ ಅವಳನ್ನು ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಾನೆ.

ಶಿಷ್ಟ ಕಾವ್ಯಗಳಲ್ಲಿ ಬಹುತೇಕ ಕಡೆಗಳಲ್ಲಿ ಕೊರವಂಜಿ ವೇಷಧರಿಸಿ ಬರುವವರು ಪುರುಷ ದೇವತೆಗಳೇ. ಇಲ್ಲಿ ಸ್ತ್ರೀ ದೇವತೆ ಕೊರವಂಜಿ ವೇಷ ಧರಿಸಿ ಬರುವ ಪ್ರಸಂಗವಿದೆ. ಹಾಗೇ ವೇಷ ಧರಿಸುವವಳು ಪಾರ್ವತಿ. ದೇವತೆಗಳು ಕಣಿ ಹೇಳುವಾಗ ಅಪಾರ ಜ್ಞಾನ ಪ್ರದರ್ಶಿಸಬೇಕಾಗುತ್ತದೆ. ಇಡೀ ಬ್ರಹ್ಮಾಂಡದ ಬಗ್ಗೆ ತಿಳಿಸಬೇಕಾಗುತ್ತದೆ. ಈ ಜ್ಞಾನ ಸ್ತ್ರೀಯರಿಗಿಲ್ಲವೆಂಬ ಭಾವದಿಂದ ಬಹುತೇಕವಾಗಿ ಸ್ತ್ರೀ ದೇವತೆಗಳಿಗೆ ಕೊರವಂಜಿ ವೇಷ ಹಾಕದೆ ಇದ್ದಿರಬಹುದು. ಶೈವ ಮತದ ಪ್ರಕಾರ ಶಿವಪಾರ್ವತಿ ಇಬ್ಬರೂ ಸರಿಸಮಾನರು. ಶಿವ ಅರ್ಧನಾರೀಶ್ವರ. ಅವನಿಗಿದ್ದ ಜ್ಞಾನ ಇವಳಿಗೂ ಇರುತ್ತದೆಂದು ಪಾವರ್ತಿಗೆ ಕೊರವಂಜಿ ವೇಷದ ಸ್ಥಾನ ಕಲ್ಪಿಸಿರಬಹುದು.

### ೩.೧.೭. ಶ್ರೀಕೃಷ್ಣ ವಿಠ್ಠಲದಾಸರ ಪದ್ಮಾವತಿ ಕಲ್ಯಾಣ

ಇಲ್ಲಿ ಪದ್ಮಾವತಿಯನ್ನು ವರಿಸಲು ವೆಂಕಟೇಶನು ಕೊರವಂಜಿ ವೇಷ ಧರಿಸಿ ಧರಿಣಿ ದೇವಿಗೆ ಭವಿಷ್ಯ ನುಡಿಯುತ್ತಾನೆ. ಭೃಗು ಮಹರ್ಷಿಯು ಹರಿಯ ಎದೆಗೆ ಪಾದದಿಂದ ಒದೆದಾಗ ತನ್ನ ವಾಸಸ್ಥಾನಕ್ಕೆ ಒದ್ದರೂ, ಋಷಿಯ ಮೇಲೆ ಕೋಪಗೊಳ್ಳದ ಹರಿಯನ್ನು ತೊರೆದು ಲಕ್ಷ್ಮಿ ಭೂಲೋಕಕ್ಕೆ ಬರುತ್ತಾಳೆ. ಅವಳನ್ನು ಅರಸುತ್ತಾ ಹರಿಯು ಭೂಲೋಕಕ್ಕೆ ಬಂದು ಚೋಳರಾಜನ ರಾಜ್ಯದಲ್ಲಿರುವಾಗ ಕಾಮಧೇನು ದಿನವು ಬಂದು ಅವನಿರುವ ಹುತ್ತಕ್ಕೆ ಹಾಲೆರೆಯುತ್ತಿರುತ್ತದೆ. ಗೋಪಾಲಕ ಅದನ್ನು ಕೊಲ್ಲಲು ಹೋದಾಗ ಕೊಡಲಿ ಹರಿಗೆ ತಾಗಿ ಚೋಳರಾಜನಿಗೆ ಶಾಪ ಕೊಡುತ್ತಾನೆ. ವರ ಕೇಳಿದಾಗ ಮುಂದೊಮ್ಮೆ ನೀನೆ ನನಗೆ ಕಿರೀಟ ಧರಿಸುವಂತಾಗಲಿ ಎಂದು ಹೇಳುತ್ತಾನೆ. ಇತ್ತ ನೋವಿನಿಂದ ನರಳುತ್ತ ಬಂದ ಹರಿ ಬಕುಳೆಯ ಆಶ್ರಮವನ್ನು ಪ್ರವೇಶಿಸಿ ಆರೈಕೆಗೊಳಪಡುತ್ತಾನೆ.

ಇತ್ತ ಮಕ್ಕಳಿಲ್ಲದ ಆಕಾಶರಾಜನಿಗೆ ಪದ್ಮದಲ್ಲಿ ಹೆಣ್ಣುಮಗು ಸಿಕ್ಕು ಅವಳಿಗೆ ಪದ್ಮಾವತಿ ಎಂದು ನಾಮಕರಣ ಮಾಡುತ್ತಾರೆ. ಅವಳು ಬೆಳೆದು, ಅವಳಿಗಾಗಿ ಸೂಕ್ತ ವರನನ್ನು ಹುಡುಕುವ ಸಂದರ್ಭದಲ್ಲಿ, ಅವಳು ಸಖಿಯರೊಂದಿಗೆ ಉದ್ಯಾನವನಕ್ಕೆ ಹೋದಾಗ ಅಲ್ಲಿ ಬಂದ ಹರಿಯನ್ನು ನೋಡುತ್ತಾಳೆ. ಅಲ್ಲಿ ನಡೆದ ಮಾತುಕತೆಯಲ್ಲಿ ಕೋಪಗೊಂಡ ಅವಳ ಸಖಿಯರು ಆತನ ಕುದುರೆಗೆ ಕಲ್ಲೊಗೆದು, ಅದು ಮರಣಿಸಿದಾಗ ಇವಳು ಮೂರ್ಛೆಹೋಗುತ್ತಾಳೆ. ಅರಮನೆಗೆ ಕರೆತಂದರೂ

ಅವಳು ಹರಿಯ ನೆನಪಿನಲ್ಲಿಯೇ ವ್ಯಾದಿಗೀಡಾಗುತ್ತಾಳೆ. ಇತ್ತ ಅವಳ ಮೇಲೆ ಮೋಹಗೊಂಡ ಹರಿಯು ಸಹ ಚಿಂತಾಕ್ರಾಂತನಾಗಿ ಕುಂತಿರುತ್ತಾನೆ. ತಾಯಿ ಬಕುಳೆ ಬಂದು ಕೇಳಿದಾಗ ನಡೆದ ವಿಷಯ ತಿಳಿಸುತ್ತಾನೆ. ಆಗ ಬಕುಳೆ ಆಕಾಶರಾಜನ ಹತ್ತಿರ ಹೆಣ್ಣು ಕೇಳುವುದಾಗಿ ಹೇಳಿ ಹೊರಡುತ್ತಾಳೆ.

ಒಬ್ಬರಿಗಿಂತ ಇಬ್ಬರು ಹೋಗುವುದು ಲೇಸೆಂದು ತಿಳಿದ ವೆಂಕಟೇಶ ತಾನು ಕೊರವಂಜಿಯ ವೇಷ ಧರಿಸಿ ಅರಮನೆಯ ಹತ್ತಿರ ತೆರಳುತ್ತಾನೆ. ಸಖಿಯರು ನಮ್ಮ ರಾಜಕುಮಾರಿಯ ಮೈ ಜ್ವರ ನಿವಾರಿಸೆಂದಾಗ ರಾಣಿ ಬಂದು ಕರೆದರೆ ಬರುತ್ತೇನೆನ್ನುತ್ತಾಳೆ. ರಾಣಿ ಕರೆದಾಗ ಹೋಗಿ ಇದು ಕ್ರೂರ ಜ್ವರ, ಇದನ್ನು ಪರಿಹರಿಸಲು ವೆಂಕಟನಾಥನಿಗೆ ಸಾಧ್ಯ ಎಂದು ಹೇಳಿ ಉದ್ಯಾನವನದಲ್ಲಿ ನಡೆದ ಘಟನೆ ಹೇಳಿ ತೆರಳುತ್ತಾಳೆ. ಅದೇ ಹೊತ್ತಿಗೆ ಬಕುಳೆ ಅಲ್ಲಿಗೆ ಬಂದಾಗ ಸಖಿಯರು ಕೊರವಂಜಿ ಹೇಳಿದ ವಿಷಯ ಮಾತನಾಡುತ್ತಿರುತ್ತಾರೆ. ಇವಳು ನಿಮಗೆ ಅಳಿಯನನ್ನು ತೋರಿಸಲು ಬಂದಿರುವೆ ಎಂದಾಗ, ಕೊರವಂಜಿ ಹೇಳಿದ ಮಾತು ಸತ್ಯ ಇವಳ ಮಗನಿಗೆ ಪದ್ಮಾವತಿಯನ್ನು ಕೊಡೋಣವೆಂದು ನಿರ್ಧರಿಸುತ್ತಾರೆ. ಕೊಲ್ಲಾಪುರದಿಂದ ಸಾಕ್ಷಾತ್ ಲಕ್ಷ್ಮೀಯೇ ಬಂದು ಮುಂದೆ ನಿಂತು ತನ್ನ ಗಂಡನ ಮದುವೆ ಮಾಡಿಸುತ್ತಾಳೆ. ಕೃಷ್ಣ–ರುಕ್ಮಿಣಿಯರ ಮದುವೆ ನೋಡದ ಯಶೋಧೆಯ ಆಸೆಯನ್ನು ಮುಂದೆ ತೀರಿಸುವೆನೆಂದು ಮಾತುಕೊಟ್ಟಿದ್ದ ಕೃಷ್ಣ, ಭಕ್ತೆ ಬಕುಳೆಯ ರೂಪದಲ್ಲಿದ್ದ ಯಶೋಧೆಯ ಆಸೆಯನ್ನು ತೀರಿಸುತ್ತಾನೆ.

ಇಲ್ಲಿ ವೆಂಕಟೇಶ ತಾನು ಆಸೆಪಡುವ ಕನ್ಯೆಯನ್ನು ತನಗೆ ಧಾರೆ ಎರೆದು ಕೊಡುವಂತೆ ಮಾಡಲು ಬಕುಳೆಯನ್ನು ಕಳಿಸಿದ್ದರೂ ಸಹ ತೃಪ್ತನಾಗದೆ ಕೊರವಂಜಿ ವೇಷ ಧರಿಸಿ ತಾನೇ ತೆರಳುತ್ತಾನೆ. ಕಾಯಿಲೆ ಬಿದ್ದ ಮಗಳ ಬಗ್ಗೆ ಚಿಂತಿತಳಾದ ಧರಣಿದೇವಿ ಕಾಯಿಲೆ ಕುರಿತು ಕೊರವಂಜಿಯನ್ನು ಕೇಳಿದಾಗ,

"ಧರಣಿ ದೇವಿಯೆ ಗಮನಿಸಿ ಕೇಳೆ
ಜ್ವರವಿದು ಕ್ರೂರವು ಬಡಿದಿಹುದಮ್ಮ
ಧರಣಿಯ ವೈದ್ಯರು ಹರಿಸಲಸಾಧ್ಯ
ನರಹರಿ ವೆಂಕಟ ಒಬ್ಬನೇ ವೈದ್ಯ
ಇರುವನು ಹತ್ತಿರ ಗಿರಿಯಲಿ ಆತ"[೨೪]

ಆ ಕ್ರೂರ ಜ್ವರವನ್ನು ನರಹರಿ ಮಾತ್ರ ನಿವಾರಿಸಲು ಸಾಧ್ಯವೆಂದು ಹೇಳಿ, ಅವನು ಇರುವ ಸ್ಥಳವನ್ನು ತಿಳಿಸುತ್ತಾಳೆ. ಅವಳ ರೋಗಕ್ಕೆ ವೆಂಕಟೇಶನ ಕುದುರೆ ಮಡಿಯುವಂತೆ ಮಾಡಿದ್ದೆ ಕಾರಣ ಎಂದು ತಿಳಿಸುತ್ತಾಳೆ. ಜೊತೆಗೆ ಕೊರವಿ

"ನಡೆದುದಕಿಲ್ಲವು ಪ್ರಾಯಃಶ್ಚಿತ್ತ
ದಾನವು ಮಾಡಲು ಹುಡುಗಿಯನವಗೆ

ಪ್ರಾಣವು ನಿಲ್ಲುವದೀಕೆಗೆ ಸತ್ಯ
ಹಾನಿಯು ಸಿದ್ಧವು ಚಿಂತಿಸೆ ಬೇರೆ
ಕಾಣೆವೆ ಮಾಡುವೆದೆಂತನ ಬೇಡಿ
ಜ್ಞಾನವೃದ್ಧಳು ಬರುವಳು ಸತ್ಯ
ಸಾನಯ ಕನ್ಯೆಯ ಯಾಚಿಪಳಾಕೆ
ಏನನು ನೋಡದೆ ನೀಡಿರಿ ಇವಳ"೨೫

ಎಂದು ಕಾಯಿಲೆ ವಾಸಿಗೆ ಪರಿಹಾರವನ್ನು ತಿಳಿಸುತ್ತಾಳೆ ಕೊರವಂಜಿ. ಈ ಮೂಲಕ ವೆಂಕಟೇಶ ತನ್ನ ಆಸೆಯನ್ನು ಈಡೇರಿಸಿಕೊಂಡು ಪದ್ಮಾವತಿಯ ಕೈ ಹಿಡಿಯುತ್ತಾನೆ. ಇಲ್ಲಿ ವೆಂಕಟೇಶನೇ ಕೊರವಂಜಿ ರೂಪ ಧಾರಣ ಮಾಡುವುದು ಗಮನಾರ್ಹ.

### ೩.೧.೮. ಪ್ರಸನ್ನವೆಂಕಟದಾಸರ ನಾರದ ಕೊರವಂಜಿ

ದುರುಳ ದೈತ್ಯರ ಕಾಟದಿಂದ ಧರಣಿದೇವಿ ದೇವರಲ್ಲಿ ಮೊರೆ ಹೋದಾಗ, ಅವರನ್ನು ಸಂಹರಿಸಲು ವಿಷ್ಣು ಕೃಷ್ಣನಾಗಿ ಜನಿಸುತ್ತಾನೆ. ಆ ಕೃಷ್ಣನ ಸೇವೆಗಾಗಿ ನಾರದ ಕೊರವಂಜಿಯ ವೇಷಧರಿಸಿ ಬಂದು ರುಕ್ಮಿಣಿಗೆ ಕಣಿ ಹೇಳುತ್ತಾನೆ.

ಭೀಷ್ಮಕನ ಮಗಳಾಗಿ ಜನಿಸಿದ ರುಕ್ಮಿಣಿಯನ್ನು ತಂದೆ-ತಾಯಿ ಹರಿಗೆ ಕೊಡಬೇಕೆಂದು ನಿರ್ಧರಿಸಿದಾಗ, ಅಣ್ಣ ರುಕ್ಮನು ದಮಘೋಷನ ಮಗ ಶಿಶುಪಾಲನಿಗೆ ಕೊಡಲು ತೀರ್ಮಾನಿಸುತ್ತಾನೆ. ಆಗ ರುಕ್ಮಿಣಿ ಚಿಂತ್ರಾಕ್ರಾಂತಳಾಗಿರುತ್ತಾಳೆ. ಆಗ ನಾರದನು ಭೀಷ್ಮಕನ ಉದ್ಯಾನವನಕ್ಕೆ ಬಂದು ಕೊರವಂಜಿ ವೇಷ ಧರಿಸಿ ಕಣಿ ಹೇಳುತ್ತಾ ಬರುತ್ತಿರುತ್ತಾನೆ. ಆಗ ಅಂತಃಪುರದ ಸಖಿಯರು ಅವಳನ್ನು ಕೃಷ್ಣನ ಆಗಮನದ ಬಗ್ಗೆ ಕೇಳು ಎಂದು ರುಕ್ಮಿಣಿಗೆ ಹೇಳುತ್ತಾರೆ. ಆಗ ರುಕ್ಮಿಣಿ ಅವಳನ್ನು ಏಕಾಂತದಲ್ಲಿ ಕರೆದು ಮೃಷ್ಟಾನ್ನಭೋಜನ ನೀಡಿ, ಅವಳ ಹತ್ತಿರ ಕುಳಿತು ಕೃಷ್ಣನ ನೆನೆದು ಮನೋಕಥೆ ಮನದಲ್ಲಿ ಹೇಳುತ್ತಾಳೆ. ಆಗ ಕೊರವಂಜಿ 'ಹರಿನಾಮಸ್ಮರಣೆ ಮಾಡಿ ನಾನು ಕಂತುವಿನ ಅಣ್ಣನ ಮಗಳು ಹದಿನಾಲ್ಕು ಲೋಕ, ಛಪ್ಪನ್ನಾರು ದೇಶ ಸುತ್ತಿ ನಿನ್ನ ಅರಸಿ ಬಂದೆ ನಿನ್ನ ನೋಡಿ ಹಸಿವು ನೀರಡಿಕೆ ಹೋಯ್ತು. ನೀನು ಸಂಧಾನಕಾರರನ್ನು ಕಳಿಸಿ ಬರೆದ ಓಲೆ ಕೃಷ್ಣನಿಗೆ ಮುಟ್ಟಿದೆ ಆತ ರಥವೇರಿ ಬಲರಾಮನೊಂದಿಗೆ ಬರುತ್ತಾನೆ' ಎನ್ನುತ್ತಾಳೆ. ಅವಳ ಕೈ ನೋಡಿ 'ನಿನ್ನಂಥ ಕೈಯಿಲ್ಲ ನಿನಗೆ ಸವತೇರು ಬಹಳ ನಿನಗೆ ಕ್ಷಣವೇ ಯುಗವಾಗಿದೆ ಚಿಂತೆ ಬೇಡ, ಖಳರ ಮನೋರಥ ಎಂದು ಘಟಿಸದು' ಎಂದು ಭವಿಷ್ಯ ನುಡಿಯುತ್ತಾಳೆ. 'ಪಾಪಿ ನಿನ್ನಣ್ಣ ಯೋಚಿಸಿದ ಕಾರ್ಯವಾಗದು, ನೀನು ವನಗೌರಿ ಪೂಜೆಯಲ್ಲಿ ನಿರತಳಾದಾಗ ಹರಿ ಬಂದು ನಿನ್ನ ಒಯ್ಯುವ, ಕಲ್ಯಾಣ ನೆರವೇರುತ್ತದೆ. ನನ್ನ ಮಾತು ಸುಳ್ಳಾಗದು' ಎಂದು ಹೇಳುತ್ತಾಳೆ. ನಂತರ ಕೃಷ್ಣನು ಮಥುರಾ ಸಂಹಾರ ಮಾಡಿದ ಘಟನೆಯನ್ನು ಹೇಳಿ ತನ್ನ ಮನೆಯ ಪರಿಸ್ಥಿತಿ, ಗಂಡ, ಅತ್ತೆ, ಸವತಿಯರ ಕಾಟದ ಬಗ್ಗೆ ಹೇಳಿ ಅನ್ನ ನೀಡಿಸಿಕೊಂಡು ಹೋಗಲು ತಯಾರಾಗುತ್ತಾಳೆ. ಆಗ ನೀನು

ಬಿಟ್ಟು ಹೋಗ ಬೇಡ ಒಳಿತೆ? ಗೆಳತಿ ಎಂದಾಗ ನಿನ್ನ ಪ್ರಿಯಕರ ಬರುವ ಚಿಂತೆ ಬೇಡೆಂದು ಹೇಳಿ ಅಲ್ಲಿಂದ ತೆರಳುತ್ತಾಳೆ.

ಅಣ್ಣನ ನಿರ್ಧಾರದಿಂದ ನೊಂದ ರುಕ್ಮಿಣಿಯ ನೋವನ್ನು ಪರಿಹರಿಸಲು ನಾರದ ಕೊರವಂಜಿಯಾಗಿ ಬಂದು ಅವಳ ದುಗುಡವನ್ನು ದೂರ ಮಾಡುತ್ತಾನೆ. ಗೊಂದಲದಲ್ಲಿರುವ ಅವಳು ಕರೆಸಿ ಕಣಿ ಕೇಳಿದಾಗ 'ನಿನ್ನ ಪ್ರಿಯಕರ ಬಂದೆ ಬರುವನು ನಿನ್ನಣ್ಣನ ತಂತ್ರ ಫಲಿಸದು ಭಯಬೇಡ' ಎಂದು ಅವಳ ಭಯವನ್ನು ದೂರಮಾಡುತ್ತಾಳೆ. ಅವಳು ಅನುಮಾನ ಪಟ್ಟಾಗ "ಇಂದ ವಾರ್ತೆ ತಪ್ಪಿನಾಲ್ ನಾಂ ಕೂರ್ತಿಯೇ ಅಲ್ಲ"[೨೬] ಎಂದು ಹೇಳಿ ಅವಳ ಸಂಶಯವನ್ನು ದೂರಮಾಡುತ್ತಾಳೆ. "ನಂಬಲೇನೆ ನಿನ್ನ ಮಾತು ಕೆಳದಿ ಕೊರವಮ್ಮ"[೨೭] ಎಂದು ಸಂಶಯಿಸಿದಾಗ "ಉಡಿಯ ಕಂದನಾಣೆ ಇಡುವೆ ನಂಬೆ ರುಕ್ಮಿಣಿ ನಾ ನುಡಿವ ನಾಮದಾಣೆ ಇಡುವೆ ನಂಬು ರುಕ್ಮಿಣಿ"[೨೮]

ಎಂದು ಕಂದನಾಣೆ, ದೇವನಾಣೆ ಇಡುವ ಮೂಲಕ ತನ್ನ ಬಗ್ಗೆ ನಂಬಿಕೆ ಹುಟ್ಟಿಸಿ ಅವಳ ಚಿಂತೆಯನ್ನು ದೂರಮಾಡುತ್ತಾಳೆ. ದುರಳರಾಸೆ ಎಂದು ನೆರವೇರದು ಎಂದು ತಿಳಿಸಿ ಅಣ್ಣನ ಬಗೆಗಿನ ಭಯವನ್ನು ಕಳೆದುಹಾಕುತ್ತಾಳೆ.

ಜೊತೆಗೆ ಇಲ್ಲಿ ಕೊರವಂಜಿ ತಾನು ಸುತ್ತಿ ಬಂದ ಐವತ್ತಾರು ದೇಶಗಳ ಹೆಸರು ಹೇಳಿ ತನ್ನ ಜಾಣ್ಮೆ ಪ್ರದರ್ಶಿಸುತ್ತಾಳೆ. ಹಾಗೆಯೇ ತನ್ನ ಸಂಸಾರದ ಜಂಜಾಟವನ್ನು ರುಕ್ಮಿಣಿಯ ಮುಂದೆ ಬಿಚ್ಚಿಡುತ್ತಾಳೆ. ಇವಳ ಈ ಆತ್ಮೀಯ ಭರವಸೆಯ ಮಾತಿನಿಂದ ಇವಳ ಮೇಲೆ ನಂಬಿಕೆ ಪ್ರೀತಿ ಬೆಳೆಸಿಕೊಂಡ ರುಕ್ಮಿಣಿ "ಪ್ರಾಣದಕ್ಕರ ಬಿಡಲಾರೆ ನಿನ್ನ ಗೆಳತಿ ಪ್ರೇಮ ಉಕ್ಕುತಿದೆ ನೀ ಹೋಗುವುದೊಳಿತೆ"[೨೯] ಎಂದು ರುಕ್ಮಿಣಿ ಅವಳನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಾಳೆ. ಕೆಲವೇ ಕ್ಷಣಗಳಲ್ಲಿ ಕೊರವಂಜಿ ತನ್ನ ಆತ್ಮೀಯ ಮಾತು ಸಾಂತ್ವನದ ನುಡಿಗಳ ಮೂಲಕ ರುಕ್ಮಿಣಿಯ ಕೆಳದಿಯಾಗಿ ಮಾರ್ಪಾಡಾಗುತ್ತಾಳೆ. ಅಂತಹ ವಿಶ್ವಾಸಗಳಿಸುವ ಪ್ರೀತಿ ನೀಡುವ ಶಕ್ತಿ ಕೊರವಂಜಿಯದು. ಇಲ್ಲಿ ನಾರದನೇ ಕೊರವಂಜಿಯಾಗುವುದು ವಿಶೇಷ.

### ೩.೧.೯. ವಾದಿರಾಜರ ನಾರದ ಕೊರವಂಜಿ

ಕೃಷ್ಣನನ್ನು ಮದುವೆಯಾಗಬೇಕೆಂದು ರುಕ್ಮಿಣಿ ಪರದೇವರನ್ನೆಲ್ಲ ಪ್ರಾರ್ಥಿಸುವ ಸಂದರ್ಭದಲ್ಲಿ ನಾರದರು ಕೊರವಂಜಿ ವೇಷಧರಿಸಿ ಬಂದು ರುಕ್ಮಿಣಿಗೆ ಕಣಿ ಹೇಳುತ್ತಾನೆ. ನಾರದ ಅನೇಕ ರೀತಿಯಲ್ಲಿ ಶೃಂಗಾರಗೊಂಡು ಕೊರವಂಜಿಯಾಗಿ ಹಾಡುತ್ತಾ ಕುಣಿಯುತ್ತಾ ಬರುತ್ತಾನೆ. ಆಗ ರುಕ್ಮಿಣಿ ಅವಳನ್ನು ಕೃಷ್ಣ ಬರುವುದರ ಬಗ್ಗೆ ಕಣಿ ಕೇಳಲು ಬರುತ್ತಾಳೆ. ಆಗ ಬಂದ ಕೊರವಂಜಿ ರುಕ್ಮಿಣಿಯ ರೂಪಲಾವಣ್ಯಗಳನ್ನು ಹೇಳುತ್ತಾ, ತಾನು ಸುತ್ತಿ ಬಂದ ಐವತ್ತಾರು ದೇಶದ ಹೆಸರು ಹೇಳಿ, ಕೊನೆಗೆ ನಿನ್ನ ಅರಸಿ ಇಲ್ಲಿಗೆ ಬಂದೆ ಎನ್ನುತ್ತಾಳೆ. ಅವಳನ್ನು ಕುರಿತು 'ನನ್ನ ಮನದ ಆಸೆಯು ನೆರವೇರುವುದೆ' ಎಂದು ಕೇಳಿದಾಗ 'ನಿನ್ನ ಅಭಿಲಾಷೆಯನ್ನು ಮನಸ್ಸಲ್ಲಿ ನೆನಸಿಕೋ'

ಎನ್ನುತ್ತಾಳೆ. ಅವಳು ತನ್ನ ಆಸೆ ಮನಸ್ಸಲ್ಲಿ ನೆನೆಯುತ್ತಿರುವಂತೆಯೇ ಶಂಖಪಾಣಿ, ಚಕ್ರಧರ ಬರುವ ನಿನ್ನ ಕೈ ಹಿಡಿವ ಎಂದು ಭವಿಷ್ಯ ನುಡಿಯುತ್ತಾಳೆ. ಆತ ಆದಷ್ಟು ಬೇಗ ಬಂದು ನಿನ್ನ ವರಸುವ ಎನ್ನುತ್ತಾಳೆ. ರುಕ್ಮಿಣಿ "ನೀನೆನಗೆ ಸರಿಬರಹೇಳಿದಾದಡೆ ನೀನೆ ರಾಜ್ಯದಿ ಪೂಜ್ಯಳು"[೩೦] ಎನ್ನುತ್ತಾಳೆ. ಆಗ ಕೊರವಂಜಿ ನಾಲ್ಕುದಿನ ನಾಲ್ಕು ಘಂಟೆಗಳಲ್ಲಿ ಕೃಷ್ಣ ಬರುವನೆಂದು ತಿಳಿಸುತ್ತಾಳೆ. ರುಕ್ಮಿಣಿ ವನಗೌರಿ ಪೂಜೆ ಮಾಡಿ ಬರುತ್ತಿರುವಾಗ ಕೃಷ್ಣ ಬಂದು ಅವಳನ್ನು ವರಿಸುತ್ತಾನೆ. ಆಕೆ ಆಗ ಉಣ್ಣಲಿಕ್ಕೆ ಅನ್ನ, ಉಡಲಿಕ್ಕೆ ಸೀರೆ, ಬೆಣ್ಣೆ, ಎಣ್ಣೆಯನ್ನು ಕೇಳಿದಾಗ ರುಕ್ಮಿಣಿ ಅವಳಿಗೆ ಸರ್ವಾಭರಣವನ್ನಿತ್ತು ಆದರದಿಂದ ಬೀಳ್ಕೊಡುತ್ತಾಳೆ.

ಇಲ್ಲಿ ಕೊರವಂಜಿ ಕೃಷ್ಣನಿಗಾಗಿ ಕಾಯುತ್ತಿರುವ ರುಕ್ಮಿಣಿಗೆ ಕೃಷ್ಣ ಬರುವ ಭವಿಷ್ಯ ನುಡಿಯುತ್ತಾಳೆ. ಅವಳ ಆ ಭವಿಷ್ಯ ನಿಜವಾದಾಗ ಅವಳಿಂದ ಕಾಣಿಕೆಯನ್ನು ಸಹ ಪಡೆದು ತೆರಳುತ್ತಾಳೆ. ಇಲ್ಲಿಯೂ ಅವಳು ಛಪ್ಪನ್ನಾರು ದೇಶ ಬಲ್ಲ ಜ್ಞಾನಿ. ಹಾಗೆಯೇ ರುಕ್ಮಿಣಿಯನ್ನು ಹೊಗಳಿ ಅವಳಿಗೆ ಆಸೆ ಈಡೇರುವ ಭರವಸೆ ತುಂಬುವ ಕಾರ್ಯವನ್ನು ಮಾಡುತ್ತಾಳೆ. ಈ ಕಾವ್ಯದಲ್ಲಿ ತೆಲಗು ಪದಗಳ ಬಳಕೆ ಯಥೇಚ್ಚವಾಗಿದೆ.

"ಯೇಮೆದುಂಡಿ ನಿನ್ನ ಗಂಡ ಚೆಲುವರಗಂಡ ಉದ್ದಂಡ ದೋರ್ದಂಡ ಪ್ರಚಂಡ ಕಳವಂಟಿ ಜಗಳವಂಟಿ ಅಘತಿಮಿರಮಾರ್ತಾಂಡ ಬ್ರಹ್ಮಾಂಡಗಂಡ ನವನೀತ ಚೋರ ನಾರೀಮಣೀ ಮನೋಹರ ನೀರದಾಕಾರ ನೀ ಕಳುಹಿದ ಬ್ರಾಹ್ಮಣನಿಂದ ಚೆನ್ನಾಗಿ ನಿನ್ನ ಮಾತೆಲ್ಲ ಕೇಳಿ ಆನಂದಬಾಷ್ಪ ರೋಮಾಂಚನಗಳಿಂದ ಚಿನ್ನದ ಮೊರಗಳಲ್ಲಿ ರನ್ನಗಳ ಸನ್ನಾಹದಿಂ ಕೊಟ್ಟು ಕಳುಹಿದನಮ್ಮಾ"[೩೧] ಎಂದು ಅವಳ ಓಲೆ ಅವನಿಗೆ ದೊರೆತ ವಿಷಯ ತಾನು ಅಲ್ಲಿಂದಲೇ ಬಂದಿದ್ದೆಂದು ತಿಳಿಸಿ, ಕೃಷ್ಣನ ಆಗಮನದ ವಿಷಯ ತಿಳಿಸಿ ತೆರಳುತ್ತಾಳೆ. ಇಲ್ಲಿಯೂ ನಾರದನೇ ಕೊರವಂಜಿಯಾಗುವ ಪ್ರಸಂಗ ಬರುವುದು ಗಮನಾರ್ಹ.

### ೩.೧.೧೦. ಅನಂತಾದ್ರೀಶರ ವೆಂಕಟೇಶ ಪಾರಿಜಾತ

ಭೃಗುಮುನಿಯ ವರ್ತನೆಯಿಂದ ಕೋಪಗೊಂಡ ಲಕ್ಷ್ಮೀ ವೈಕುಂಠ ತೊರೆದಾಗ ಅವಳನ್ನರಸುತ್ತಾ ಭೂಮಿಗೆ ಬಂದ ವೆಂಕಟೇಶ ಚೋಳರಾಜನ ರಾಜ್ಯದಲ್ಲಿ ಘಾಸಿಗೊಂಡು, ಬಕುಳೆಯ ಆಶ್ರಮದಲ್ಲಿ ಆಶ್ರಯ ಪಡೆಯುತ್ತಾನೆ. ಉದ್ಯಾನವನದಲ್ಲಿ ಪದ್ಮಾವತಿಯನ್ನು ನೋಡಿ ಮೋಹಗೊಂಡ ವೆಂಕಟೇಶ, ಬಕುಳೆ ಕೇಳಿದಾಗ ತನ್ನ ಮನದಿಂಗಿತವನು ಅವಳ ಮುಂದೆ ಹೇಳಿಕೊಳ್ಳುತ್ತಾನೆ. ಆಕಾಶರಾಜನ ಹತ್ತಿರ ಹೆಣ್ಣು ಕೇಳಲು ಬಕುಳೆ ತೆರಳಿದಾಗ ತಾನು ಸಹ ಪ್ರಯತ್ನಿಸಿದರಾಯ್ತೆಂದು ಕೊರವಂಜಿ ವೇಷಧರಿಸುತ್ತಾನೆ. 'ಭೂತ ಬಿಡಿಸಬಲ್ಲೆ ಬೇತಾಳವ ಬಲ್ಲೆ' ಎನ್ನುತ್ತಾ ಆಕಾಶರಾಜನ ಅರಮನೆಗೆ ಬರುತ್ತಾನೆ. ಉದ್ಯಾನವನದಲ್ಲಿ ಮೂರ್ಛೆ ಹೋಗಿದ್ದ ರಾಜಕುಮಾರಿ ಹಾಸಿಗೆ ಹಿಡಿದಿರುತ್ತಾಳೆ. ಅವಳನ್ನು ಗುಣಪಡಿಸಲು ಕೊರವಿಯನ್ನು ಸಖಿಯರು ಕರೆದಾಗ 'ರಾಣಿ ಶ್ರೀಮಂತೆ ನಾನು ಬಡವಿ, ಮುಪ್ಪಿನವಳನ್ನು ಅಪಹಾಸ್ಯ ಮಾಡುವಿರೆ' ಎಂದು ಕೇಳುತ್ತಾಳೆ. ಇವಳ ಮಾತು ಕೇಳಿ ಸ್ವತಃ ರಾಣಿಯೇ ಬಂದು ಇವಳನ್ನು ಕರೆದೊಯ್ಯುತ್ತಾಳೆ. ಆಗ ತನ್ನ ಮಗಳ ಕಾಯಿಲೆಗೆ ಕಾರಣ

ಕೇಳಿದಾಗ, ಕೊರವಂಜಿ ನಿನ್ನ ಮಗಳು ಬೆಟ್ಟದ ವೆಂಕಟೇಶನಿಗೆ ಮೋಹಗೊಂಡಿದ್ದಾಳೆ. ಅವನೊಂದಿಗೆ ಮದುವೆ ಮಾಡಿದರೆ ಒಳಿತೆಂದು ಹೇಳುತ್ತಿರುವಾಗಲೇ, ಇವಳ ಧ್ವನಿ ಕೇಳಿ ರಾಜಕುಮಾರಿ ಎದ್ದೋಡಿ ಬರುತ್ತಾಳೆ. ನಿನ್ನ ಕಾಲ್ಗುಣದಿಂದ ನನ್ನ ಮಗಳು ಎಚ್ಚರವಾದಳೆಂದು ಹೇಳಿದಾಗ ನಾರದಮುನಿ 'ಹೇಳಿದಂತೆ ಅವಳನ್ನು ಬೆಟ್ಟದ ವೆಂಕಟೇಶನಿಗೆ ಕೊಟ್ಟು ಮದುವೆ ಮಾಡಿರಿ. ಒಬ್ಬ ಹೆಣ್ಣುಮಗಳು ಹೆಣ್ಣು ಕೇಳಲು ಬರುತ್ತಾಳೆ. ಅವಳ ಮಾತಿಗೆ ಒಪ್ಪಿ, ನಿನ್ನ ಪತಿ, ಮಗಳನ್ನು ಒಪ್ಪಿಸು' ಎನ್ನುತ್ತಾಳೆ.

ಇವಳ ಮಾತಿನಿಂದ ಸಂತೋಷಗೊಂಡ ಧರಣಿದೇವಿ 'ಬ್ರಹ್ಮಾಂಡವನೆಲ್ಲ ಹೇಗೆ ತಿರುಗಿ ಬರುವೆ? ಬ್ರಹ್ಮಾಂಡ ಹೇಗಿದೆ? ಪರಮ ಪುರುಷ ಅದನ್ನು ಹೇಗೆ ಧರಿಸಿದ್ದಾನೆ? ಅದರ ವಿಸ್ತಾರವೇನು?' ಎಂದು ಕೇಳುತ್ತಾಳೆ. ಆಗ ಕೊರವಂಜಿ ಮೇಲಿನ ಏಳುಲೋಕ ಕೆಳಗಿನ ಏಳುಲೋಕ ಹೀಗೆ ಹದಿನಾಲ್ಕು ಲೋಕಗಳು, ಸಪ್ತಸಮುದ್ರ, ಸಪ್ತದ್ವೀಪಗಳು, ಸಪ್ತಪರ್ವತಗಳು, ಸಪ್ತನದಿಗಳು, ಸಪ್ತಭೂಮಿಕೆ, ಹೀಗೆ ಎಲ್ಲದರ ಬಗ್ಗೆ ಅವು ಹೇಗೆ ಅನುಕ್ರಮವಾಗಿವೆ, ಅವುಗಳ ವಿಸ್ತಾರತೆ, ಅವುಗಳ ವ್ಯತ್ಯಾಸ, ಅವುಗಳನ್ನು ಪರಮಪುರುಷ ಹೇಗೆ ಹೊತ್ತು ನಿಂತಿದ್ದಾನೆ ಎಂಬುದರ ಬಗ್ಗೆ ವಿವರಣೆ ನೀಡುತ್ತಾಳೆ.

ಇಲ್ಲಿ ಕೊರವಂಜಿ ಪದ್ಮಾವತಿಯನ್ನು ವರಿಸುವ ತನ್ನ ಆಸೆಯನ್ನು ಈಡೇರಿಸಿಕೊಳ್ಳುವ ಜೊತೆಗೆ ಅವಳ ಮನದಿಂಗಿತವನ್ನು ನೆರವೇರಿಸುತ್ತಾನೆ. ಈ ಕೃತಿಯಲ್ಲಿ ಬರುವ ಕೊರವಂಜಿ ಉಳಿದೆಲ್ಲ ಕೊರವಂಜಿಯರಿಗಿಂತ ಭಿನ್ನವಾಗಿದ್ದಾಳೆ. ಉಳಿದೆಲ್ಲ ಕಡೆ ಕೊರವಂಜಿಯರು, ಸುಂದರವಾಗಿ ಶೃಂಗಾರಗೊಳ್ಳುತ್ತಾರೆ. ಆದರೆ ಇಲ್ಲಿ ಕೊರವಂಜಿ

"ಗಂಭೀರಕೊರವಿ ಮುಖ
ವೆಂಬುವದು ಬಾಡಿಹುದು ಗುಂಭ
ಬಾಯ್ವಳಗ್ಹಲ್ಲು ಎಂಬುವದು
ಒಂದಿಲ್ಲ ಲಂಭಕರ್ಣಗಳಿಹವು ಲಂಭಕುಂಚಗಳು ಮತ್ತ ಲಂಬೋದರಿ
ಯೆನಿಸಿಕೊಂಬುವಳು ತಾನು"[೩೨]

ಹೀಗೆ ಅವಳು ಐವತ್ತರ ವಯಸ್ಸಿನ ಮುದುಕಿಯಾಗುತ್ತಾಳೆ. "ಚೀರವಸ್ತ್ರವನುಟ್ಟು ಛಿದ್ರಕುಪ್ಪಸತೊಟ್ಟು ಘೋರ ಜಡೆಗಳ ಧರಿಸಿ"[೩೩] ಜೋಲುಕಿವಿಯಲ್ಲಿ ವಾಲೆ ಇಟ್ಟು ಗೀರುಬಳೆ ಧರಿಸಿ ಹೋಗುತ್ತಾಳೆ. ಹೀಗೆ ವಿಭಿನ್ನ ರೂಪದ ಕೊರವಂಜಿ ದರ್ಶನ ಇಲ್ಲಾಗುತ್ತದೆ.

ಇಲ್ಲಿಯ ಕೊರವಂಜಿ ಉಳಿದೆಲ್ಲ ಕೊರವಂಜಿಯರಿಗಿಂತ ಮಿಗಿಲಾದ ಜ್ಞಾನ ಉಳ್ಳವಳು. ಅವರು ಕೇವಲ ಹದಿನಾಲ್ಕು ಲೋಕ, ಛಪ್ಪನ್ನಾರು ದೇಶದ ವಿವರಣೆ ಕೊಟ್ಟರೆ, ಇವಳು ಸಪ್ತಸಮುದ್ರ ಈರೇಳುಲೋಕ ಸಪ್ತದ್ವೀಪ, ಸಪ್ತನದಿ ಅವುಗಳ ವಿಸ್ತಾರ ಹೀಗೆ ಇಡೀ ಬ್ರಹ್ಮಾಂಡದ ಬಗ್ಗೆ ವಿವರಿಸುತ್ತಾಳೆ. ಈ ಮೂಲಕ ಇಲ್ಲಿ ಕೊರವಂಜಿ ಮತ್ತಷ್ಟು ವಿಶಿಷ್ಟವಾಗಿ ನಿಲ್ಲುತ್ತಾಳೆ.

ಬ್ರಹ್ಮಾಂಡ ಹೇಗಿದೆ ಎಂದು ಧರಣಿದೇವಿ ಪ್ರಶ್ನಿಸಿದಾಗ

"ಏಳು ಲೋಕಕೆ ಎಲ್ಲ
ಆಲಯವಾಗಿರುವ ಸುವಿಶಾಲ ಬ್ರಹ್ಮಾಂಡದ್ದೊರಗಾ-
ಲಯವು ಒಂದಿಲ್ಲ
ಲೇಸಾಗಿರುವದು ಮೂಲ ಅವ್ಯಾಕೃತಾಕಾಶ ತಾನೆ
ಅತ್ತಿತ್ತ ನಾಲ್ಕು ಕಡೆ ಮತ್ತೆ ಮೇಲಕೆ
ಕೆಳಗೆ ಎತ್ತ ನೋಡಿದರೇನು
ಸುತ್ತಲೆ ಬೈಲುಂಟು ಮತ್ತಲ್ಲೆ ಪರಮ
ಪುರುಷನೆಂಬ ಹರಿ ತಾನು
ಅಂತರಲೆ ಕುಳಿತಿರುವ ಅಂತ ತಿಳಿಗೊಡದೆ
ಶಕ್ತಿನಾಮಕಳಾದ
ಚಿತ್ತದೊಲ್ಲಭೆಯನು ಸುತ್ತಿ ಶಿಂಬಿಯ
ಮಾಡಿ ನೆತ್ತಿಯ ಮೇಲಿಟ್ಟು
ಪೊತ್ತಿಹನು ಬ್ರಹ್ಮಾಂಡ ಸುತ್ತಲಿರುವುದು ಅದಕೆ
ಸಪ್ತದರ್ಶ ಆವರಣ ಕ್ಲಪ್ತನಾಗಿ"[೩೪]

ಎಂದು ವಿವರಿಸುತ್ತಾಳೆ. ವೆಂಕಟೇಶನೆ ಇಲ್ಲಿ ಕೊರವಿ ರೂಪ ತಾಳುವುದು ಗಮನಾರ್ಹ.

### ೩.೧.೧೧. ಚಂದ್ರಸಾಗರವರ್ಣಿಯ ಕಾಮನ ಪದ್ಯ

ಚಂದ್ರಸಾಗರವರ್ಣಿಯ ಈ ಕೃತಿಗೆ 'ಸ್ಮರ ಕೊರವಂಜಿ' 'ಮನ್ಮಥ ಕೊರವಂಜಿ' 'ಕಂದರ್ಪ ಕೊರವಂಜಿ' ಮುತಾದ ಹೆಸರುಗಳಿವೆ. ಇಲ್ಲಿ ಮನ್ಮಥನು ವಿದರ್ಭೆಯನ್ನು ವರಿಸುವುದಕ್ಕಾಗಿ ಕೊರವಂಜಿ ವೇಷವನ್ನು ಧರಿಸುತ್ತಾನೆ.



ಸತ್ಯಭಾಮೆಯು ರುಕ್ಮಿಣಿ ಕೃಷ್ಣನ ಬಲಭಾಗದಲ್ಲಿ ಕುಳಿತದ್ದನ್ನು ನೋಡಿ ಹೊಟ್ಟೆ ಉರಿದುಕೊಂಡಾಗ ಕೃಷ್ಣ ಮೊದಲು ಮಗುವನ್ನು ಹೆತ್ತವಳೆ ಪಟ್ಟದರಸಿ ಎನ್ನುತ್ತಾನೆ. ಸತ್ಯಭಾಮ ಅಷ್ಟೇ ಸಾಲದು ಎಂದಾಗ, ಮೊದಲ ಮಗನ ಮದುವೆಯಲ್ಲಿ ನಂತರ ತಾಯಾದವಳು ಕುರುಳನ್ನು ಕೊಡಬೇಕು ಎಂಬ ನಿರ್ಧಾರವಾಗುತ್ತದೆ. ರುಕ್ಮಿಣಿ ಮೊದಲು ಮಗು ಹೆತ್ತರು ಪೂರ್ವಜನ್ಮದ ಕರ್ಮದಿಂದ ಆ ಮಗು ಅಡವಿಪಾಲಾಗಿ, ಕಾಳಶಂಭರನ ಹತ್ತಿರ ಬೆಳೆದು, ನಂತರ ಸಾಕು ತಾಯಿ ತನ್ನನ್ನು ಮೋಹಿಸಿದ್ದರಿಂದ ಅಲ್ಲಿಂದಲೂ ದೂರವಾಗಿ ಬರುವಾಗ ನಾರದ ಅವನ ಜನನದ ವಿಷಯ ಹೇಳುತ್ತಾನೆ. ಆಗ ಜನ್ಮವೃತ್ತಾಂತ ತಿಳಿದ ಪ್ರದ್ಯುಮ್ನನು ಸರಿಯಾದ ವೇಳೆಗೆ ಅರಮನೆಗೆ ಬಂದು ಮದುವೆಯಾಗಿ ತನ್ನ ತಾಯಿ ಕೂದಲು ಬಲಿಯಾಗುವುದನ್ನು ತಪ್ಪಿಸುತ್ತಾನೆ.

ನಂತರ ರುಕ್ಮಿಣಿ ಇವನಿಗೆ ಗಂಡನಿಂದ ದೂರಾದ ತನ್ನ ತವರಿಂದ ರುಕ್ಮನ ಮಗಳು ವಿದರ್ಭೆಯನ್ನು ತಂದುಕೊಳ್ಳಲು ಬಯಸಿ ಮಂತ್ರಿ ಜನರನ್ನು ಅಣ್ಣನ ಮನೆಗೆ ಕಳಿಸುತ್ತಾಳೆ. ತಂದೆ

ಸಾವಿಗೆ ಕಾರಣನಾದವನ ಮದುವೆಯಾದಳ ಮಗನಿಗೆ ನನ್ನ ಮಗಳನ್ನು ಕೊಡುವುದಿಲ್ಲ ಬೇಕಾದರೆ ಮಾದಿಗನಿಗೆ ಕೊಡುವೆನೆಂದು ಅಣ್ಣ ಹೇಳಿದ ಮಾತನ್ನು ಕೇಳಿ ಖಿನ್ನಳಾದ ತಾಯಿ ನೋವನ್ನು ನಿವಾರಿಸಲು ಪ್ರದ್ಯುಮ್ನನು ಕೌಂಡಿನ್ಯಪುರಕ್ಕೆ ಮಾದಿಗರ ವೇಷದಿಂದ ತೆರಳುತ್ತಾನೆ. ಬಹುರೂಪಿಣಿ ವಿದ್ಯೆ ಮಾತಂಗಿ ವೇಷಧರಿಸಿ ಕನ್ಯೆ ಕೇಳಿದಾಗ ನಾನು ಮಾತಿಗೆ ಹೇಳಿದೆ, ಮಾದಿಗರಿಗೆ ಕೊಡುವುದಿಲ್ಲವೆಂದಾಗ ಕ್ಷತ್ರಿಯರು ಕೊಟ್ಟ ಮಾತಿಗೆ ತಪ್ಪುವುದಿಲ್ಲ ಎನ್ನುತ್ತಾಳೆ. ಮಕ್ಕಳನ್ನು ಕರೆಸು ಎಂದು ರುಕ್ಮ ಹೇಳುತ್ತಾನೆ. ಅವರ ರೂಪ ಕಂಡು ಬೆರಗಾಗಿ ಇವರು ಮಾದಿಗರಲ್ಲ ಎಂದಾಗ ದ್ವಾರಕಾವತಿಯಲ್ಲಿ ಸುಖದಿಂದ ಸುಂದರರಾಗಿದ್ದಾರೆ ಎನ್ನುತ್ತಾಳೆ. ರುಕ್ಮ ಕೃಷ್ಣನ ಊರ ಜನಕ್ಕೆ ಹೆಣ್ಣು ಕೊಡುವುದಿಲ್ಲ ಎನ್ನುತ್ತಾನೆ. ಮಾತಂಗಿ ಅಲ್ಲಿಂದ ತೆರಳುತ್ತಾಳೆ. ಆಗ ಮಾತಂಗಿ ಉದ್ಯಾನವನದಲ್ಲಿದ್ದಾಗ, ವಿದರ್ಭೆ ಮಾದಿಗನ ರೂಪದಲ್ಲಿದ್ದ ಕಾಮನನ್ನು ನೋಡಿ ಮೋಹಗೊಂಡು ಮೂರ್ಛೆ ಹೋಗುತ್ತಾಳೆ. ಆಗ ಪ್ರದ್ಯುಮ್ನ ಕೊರವಂಜಿ ವೇಷ ಧರಿಸಿ ಕಣಿ ಹೇಳುತ್ತಾ ಹೋದಾಗ ವಿದರ್ಭೆ ಕಣಿ ಕೇಳುತ್ತಾಳೆ. ಆಗ ನೀನು 'ಮಾದಿಗರ ಮಗನಿಗೆ ಮನಸೋತಿದ್ದಿಯಾ' ಎನ್ನುತ್ತಾನೆ. ಅವಳು ಸುಳ್ಳು ಎಂದಾಗ. 'ಮನದಿಂಗಿತ ಹೇಳು ದಾರಿತೋರುತ್ತೇನೆ ಎನ್ನುತ್ತಾಳೆ' ಅವಳು ಮನಸೋತ ವಿಷಯ ನಿಜವೆಂದರಿತು 'ನೀನು ಕ್ಷತ್ರಿಯ ಕನ್ಯೆಯರಿಗೆ ಯೋಗ್ಯವಾದ ಗಂಧರ್ವ ವಿವಾಹದ ಮೂಲಕ ಅವನನ್ನು ವರಿಸು ಎಂದು ಹೇಳಿ ಅಲ್ಲಿಂದ ತೆರಳುತ್ತಾಳೆ. ನಂತರ ಅವಳನ್ನು ವರಿಸಿ' ದ್ವಾರಕೆಗೆ ಒಯ್ಯುತ್ತಾನೆ.

ಇಲ್ಲಿ ಮನ್ಮಥ ವಿದರ್ಭೆಯ ಮನದಿಂಗಿತವನ್ನು ಅರಿಯಲು ಕೊರವಂಜಿ ವೇಷ ಧರಿಸುತ್ತಾನೆ. ಜೊತೆಗೆ ಮಾದಿಗನನ್ನು ಹೇಗೆ ವರಿಸುವುದು ಎಂಬ ಗೊಂದಲದಲ್ಲಿದ್ದ ಅವಳಿಗೆ ಗಂಧರ್ವ ವಿವಾಹದ ಮಾರ್ಗ ಸೂಚಿಸುತ್ತಾನೆ. ಈ ಮೂಲಕ ತಾಯಿ ಆಸೆಯಂತೆ ವಿದರ್ಭೆಯನ್ನು ವರಿಸುತ್ತಾನೆ.

ಇಲ್ಲಿಯೂ ಸಹ ಜಾತಿಯ ಸಂಘರ್ಷ ಬರುತ್ತದೆ. ರುಕ್ಮ ಮಹಾರಾಜ ತನ್ನ ಮಗಳನ್ನು ಕೃಷ್ಣನ ಮಗನಿಗೆ ಕೊಡದೆ ಅಂತ್ಯಜಾತಿಗೆ ಕೊಡಬೇಕು ಎನ್ನುತ್ತಾನೆ. ತಂದೆ ಸಾವಿಗೆ ಕಾರಣರಾದವರಿಗಿಂತ ಕೀಳುಕುಲದವರಿಗೆ ಕೊಡುವುದೇ ಶ್ರೇಷ್ಟ ಎಂದು ಸಿಟ್ಟಿನಿಂದ ಹೇಳುತ್ತಾನೆ. ಆದರೆ ಮಾತಂಗಿ ಕನ್ಯೆ ಕೇಳಲು ಬಂದಾಗ "ಕೋಪದಿಂದಲೆಂದ ಮಾತಿಗೀಗ ಬಂದು ಕೇಳಬಹುದೆ"[೩೫] ಎನ್ನುತ್ತಾನೆ. ಆತ ಮಗಳನ್ನು ಅಂತ್ಯಜಾತಿಯವರಿಗೆ ಕೊಡುತ್ತೇನೆಂದದ್ದು ಕೋಪದಿಂದ ಹೊರತು ಅವರ ಬಗೆಗಿನ ಒಳ್ಳೆಯ ಭಾವನೆಯಿಂದಲ್ಲ. ಆದರೆ ಮಾತಂಗಿ

"ಕ್ಷತ್ರಿಯರ ಮಾತಿಗೆರಡು
ಉತ್ರ ಉಂಟೆ ನಿಮ್ಮ ಜಾತಿ
ಯತ್ರಕಾರು ಪೇಳ್ವರಿಲ್ಲವೆಂದು"[೩೬]

ಎಂದು ಆತನ ಕ್ಷತ್ರಿಯ ಜಾತಿ ನುಡಿದಂತೆ ನಡೆಯದು ಎಂದಾಗ ಮಾತ್ರ ಮಗಳನ್ನು ಅಂತ್ಯಜನಿಗೆ ಕೊಡಲು ಸಿದ್ಧನಾಗುತ್ತಾನೆ. ಕೆಳಜಾತಿ ಬಗ್ಗೆ ತಿರಸ್ಕಾರ, ತನ್ನ ಜಾತಿ ಬಗ್ಗೆ ಅಪಾರಗೌರವ ರುಕ್ಮನದು.

### ೩.೧.೧೨. ಅಪರಾಳ ತಮ್ಮಣ್ಣನ ಶ್ರೀಕೃಷ್ಣ ಪಾರಿಜಾತ

ಶ್ರೀಕೃಷ್ಣಪಾರಿಜಾತ ಅಪರಾಳ ತಮ್ಮಣ್ಣನಿಂದ ಅರ್ಧಭಾಗವು, ಉಳಿದರ್ಧಭಾಗವು ಸಿರಗುಪ್ಪಿ ಸದಾಶಿವರಾಯರಿಂದ ರಚನೆಗೊಂಡಿದೆ. ಇದನ್ನು ನಾಟಕ ರೂಪಕ್ಕೆ ಪರಿವರ್ತಿಸಿದವನು ಕುಲಗೋಡು ತಮ್ಮಣ್ಣ. ಇಲ್ಲಿ ಕೋಪಗೊಂಡ ಸತ್ಯಭಾಮೆಯನ್ನು ಸಮಾಧಾನಪಡಿಸಲು ಕೃಷ್ಣ ಕೊರವಂಜಿ ವೇಷ ಧರಿಸಿ ಬರುತ್ತಾನೆ.

ನಾರದನು ದೇವಲೋಕದಿಂದ ಪಾರಿಜಾತ ಪುಷ್ಪವನ್ನು ತಂದು ಕೃಷ್ಣನಿಗೆ ಕೊಡುತ್ತಾನೆ. ಅದು ಅಪರೂಪದ್ದು ನಿನಗೆ ಪ್ರಿಯವಾದವರಿಗೆ ಕೊಡು ಎನ್ನುತ್ತಾನೆ. ಅದರ ಸುವಾಸನೆಗೆ ಅನೇಕ ಜನ ಬಂದಾಗ ಕೃಷ್ಣ ಅದನ್ನು ರುಕ್ಮಿಣಿಗೆ ನೀಡುತ್ತಾನೆ. ಕೃಷ್ಣ ಭಾಮೆಯರ ನಡುವೆ ಜಗಳ ಹಚ್ಚಲು ಬಯಸಿದ ನಾರದ ಈ ವಿಷಯವನ್ನು ಸತ್ಯಭಾಮೆಗೆ ತಿಳಿಸುತ್ತಾನೆ. ಆಗ ಅವಳು ಪಾರಿಜಾತವನ್ನು ತನಗೆ ಕೊಡಬೇಕೆಂದು ಗಿಳಿಯ ಮೂಲಕ ಪತ್ರ ಕಳಿಸುತ್ತಾಳೆ. ಅದನ್ನು ಆಗಲೇ ರುಕ್ಮಿಣಿಗೆ ಕೊಟ್ಟೆನೆಂದು ಕೃಷ್ಣ ತಿಳಿಸುತ್ತಾನೆ. ಕೊಪಗೊಂಡ ಭಾಮೆ ದೂತೆಯರ ಮೂಲಕ ಕೃಷ್ಣನನ್ನು ಕರೆ ಕಳಿಸುತ್ತಾಳೆ. ಆಗ ಕೃಷ್ಣ ಬರದೆ ಹೋದಾಗ ತಾನೇ ಅಲ್ಲಿಗೆ ತೆರಳುತ್ತಾಳೆ. ರುಕ್ಮಿಣಿಯೊಂದಿಗೆ ಪಗಡೆಯಾಡುತ್ತಿದ್ದ ಕೃಷ್ಣ ಭಾಮೆಯನ್ನು ನಿರ್ಲಕ್ಷಿಸುತ್ತಾನೆ. ಅಪಮಾನದಿಂದ ಮೂರ್ಛೆ ಹೋದ ಸತ್ಯಭಾಮೆ ಮೂರ್ಛೆತಿಳಿದೆದ್ದು, ರುಕ್ಮಿಣಿಗೆ ಬೈದು ನಾನು ತಪಸ್ಸು ಮಾಡಿ ನಿನ್ನ ಒಲಿಸಿಕೊಳ್ಳುವೆ ಎಂದು ಶಪಥ ಮಾಡಿ ಅದನ್ನು ಈಡೇರಿಸಿಕೊಳ್ಳಲು ಶಕ್ತಿದೇವತೆಯ ಆರಾಧನೆ ಮಾಡುತ್ತಾಳೆ. ಶಕ್ತಿದೇವತೆ ಅವಳಿಗೆ ವರನೀಡುತ್ತಾಳೆ. ಆ ವರದಿಂದ ಕೃಷ್ಣನ ಮನಸ್ಸು ಭಾಮೆಯತ್ತ ತಿರುಗುತ್ತದೆ. ಆದರೆ ಶಕ್ತಿದೇವತೆಯ ಪೂಜೆ ನಡೆಯುವಲ್ಲಿ ಕೃಷ್ಣನಿಗೆ ಪ್ರವೇಶವಿಲ್ಲ. ಆಗ ಕೃಷ್ಣ ಹಿಂದೆ ತನಗೆ ಹೆಣ್ಣಿನ ರೂಪವನ್ನು ಧರಿಸಬೇಕೆಂದು ಇರುವ ಶಾಪವನ್ನು ನಿವಾರಿಸಿಕೊಳ್ಳಲು ಇದು ತಕ್ಕ ಸಮಯವೆಂದು ತಿಳಿದು ಕೊರವಂಜಿ ರೂಪ ಧರಿಸುತ್ತಾನೆ. ಆಗ ಊರಲ್ಲಿ ಕಣಿ ಹೇಳುತ್ತ ಬಂದ ಕೊರವಂಜಿಯ ಸುದ್ದಿಯನ್ನು ದೂತೆ ಸತ್ಯಭಾಮೆಗೆ ಹೇಳಿ ಕೃಷ್ಣ ಬರುವ ಬಗ್ಗೆ ಕಣಿ ಕೇಳೋಣವೆಂದು ಹೇಳಿ ಮನೆಗೆ ಕರೆತರುತ್ತಾಳೆ. ಆಕೆ ಕೊರವಂಜಿಯಾದರೂ ದೇಹ ಕೃಷ್ಣನದಿರುವುದರಿಂದ ಭಾಮೆಗೆ ಕೊರವಂಜಿ ಮೇಲೆ ಮೋಹವಾಗುತ್ತದೆ. ಮೋಹಗೊಂಡ ಭಾಮೆ ಕೊರವಂಜಿ ಹೇಳಿದಂತೆ ನಡೆದುಕೊಂಡು ಕೃಷ್ಣಬರುವುದರ ಬಗ್ಗೆ ಕಣಿ ಕೇಳುತ್ತಾಳೆ. ಆಗ ಕೊರವಂಜಿ ಇಂದು ರಾತ್ರಿಯೇ ಕೃಷ್ಣಬರುವನೆಂದು ಹೇಳಿ ಅಲ್ಲಿಂದ ತೆರಳುತ್ತಾಳೆ. ಅವಳು ಹೇಳಿದ ಮಾತಿನಂತೆ ಕೃಷ್ಣ ರಾತ್ರಿ ಭಾಮೆಯ ಹತ್ತಿರ ಬರುತ್ತಾನೆ. ಮುಂದೆ ಕೃಷ್ಣ ಪಾರಿಜಾತದ ಮರ ತಂದು ಭಾಮೆಯ ಅಂಗಳದಲ್ಲಿ ನೆಟ್ಟಾಗ ಅದರ ಹೂಗಳು ರುಕ್ಮಿಣಿಯ ಅಂಗಳದಲ್ಲಿ ಬೀಳುತ್ತವೆ. ಕೃಷ್ಣ ಆಗ ಭಕ್ತಿಯೇ ಮುಖ್ಯವೆಂದು ತಿಳಿಸುತ್ತಾನೆ.

ಇಲ್ಲಿ ಕೃಷ್ಣ ತನಗಾಗಿ ಶಕ್ತಿಪೂಜೆಯನ್ನು ಮಾಡಿ ಕಾಯುತ್ತಿರುವ ಭಾಮೆಯ ತವಕವನ್ನು ನಿವಾರಿಸಲು ಕೊರವಂಜಿ ವೇಷಧರಿಸಿ ಅವಳಲ್ಲಿಗೆ ತೆರಳುತ್ತಾನೆ. ಅಲ್ಲಿಗೆ ತೆರಳಿದ ಕೊರವಂಜಿ ಇಡೀ ಭೂಮಂಡಲದ ಪರಿಚಯ ಮಾಡಿಕೊಡುತ್ತಾಳೆ. ಈರೇಳುಲೋಕ, ಸಪ್ತಸಮುದ್ರ, ಸಪ್ತದ್ವೀಪ,

ದಶಾರಣ್ಯ, ಛಪ್ಪನ್ನಾರು ದೇಶಗಳ ಬಗ್ಗೆ ಹೇಳಿ ತನ್ನ ಪರಿಚಯ ಮಾಡಿ ಕೊಡುತ್ತಾಳೆ. ತಳಮಳದಲ್ಲಿರುವ ಭಾಮೆಗೆ

"ಬಂದಾನೆಂದು ತಿಳಿಯೆ, ಸ್ಮರನ ಮಾತಿನ ಗಿಳಿಯೆ
ಸಂದೇಹವ್ಯಾತಕೆ ಸಿಂಧುರಗಮನೆ
ಇಂದು ನಡುವೆ ದೂತಿಯರ್‍ಯಾಕೆ, ಚಂದಿರನಾಣೆ
ಇಂದು ಯೋಗವು ಬಂದು
ನಿಂದಿದೆ ಇಂದಿರಾಪತಿ, ಬಂದಾನೆಂದು"[೨೭]

ಹೇಳಿ ಅವಳ ದುಗುಡವನ್ನು ನಿವಾರಿಸಿ ಗಂಡನ ಆಗಮನದ ಸೂಚನೆಯನ್ನು ಕೊಡುತ್ತಾಳೆ. ಜ್ಞಾನನಿಧಿಯಾದ ಕೊರವಂಜಿ ಇಡೀ ಬ್ರಹ್ಮಾಂಡದ ಪರಿಚಯ ಮಾಡುತ್ತಾಳೆ. ಜೊತೆಗೆ ತಾನು ಬಲ್ಲ ವಿದ್ಯೆಗಳ ಪಟ್ಟಿಯನ್ನು ನೀಡುತ್ತಾಳೆ.

"ಸಾಮುದ್ರಿಕೆ ಬಲ್ಲೆ, ಶಕುನ ಹೇಳಲು ಬಲ್ಲೆ
ಪ್ರೇಮದಿಂ ಬಿಟ್ಟ ಗಂಡನ್ನ ಒಲಿಸಿ ಕೊಡಬಲ್ಲೆ
ವೃದ್ಧ-ಯೌವ್ವನವ ಅಭಿವೃದ್ಧಿ ಮಾಡಲು ಬಲ್ಲೆ
ಪೊದ್ದು ತೀರಿಸುವ ಒಲಿಸುವ ಮದ್ದುಗಳ ಬಲ್ಲೆ
ಕೆಟ್ಟ ಸವತಿಯ ಬಾಯ ಕಟ್ಟು ಮಾಡಲು ಬಲ್ಲೆ
ಹುಟ್ಟು ಬಂಜೆಗೆ ದಿಟ್ಟ ಮಕ್ಕಳನು ಕೊಡಬಲ್ಲೆ
ಲಗ್ನ ಹಿಡಿಯಲು ಬಲ್ಲೆ, ನವಗ್ರಹ ಯಂತ್ರಗಳ ಬಲ್ಲೆ
ಶೀಘ್ರ ಫಲವೀವ ಭಾಡ ಮುಹೂರ್ತಗಳ ಬಲ್ಲೆ
ಆನಂದ ಯೋಗಗಳ ಆಯ್ದುಕೊಡಬಲ್ಲೆ
ಸ್ವಾನಂದಗಳ ಕೊಡುವ ಧೂರ್ತ-ಲಕ್ಷಣ ಬಲ್ಲೆ
ಹಕ್ಕಿ ಶಕುನವ ಬಲ್ಲೆ ಪಕ್ಷಿ ವ್ಯಾಳ್ಯವ ಬಲ್ಲೆ
ಎಕ್ಕೆ ಬೆನಕುಂಟು ನೆನಸಿಕೋ ಹೇಳಿಕೊಡಬಲ್ಲೆ
ಚಿಂತಾಮಣಿಯ ಬಲ್ಲೆ, ಚಿಲ್ಲ ಹೊತ್ತಿಗೆ ಬಲ್ಲೆ, ನೀ
ರಂತರ ಬಲವ ಪೇಳ್ವ ಜ್ಯೋತಿಷ್ಯಗಳ ಬಲ್ಲೆ
ಕಪ್ಪನಿಡಬಲ್ಲೆ, ಕೈಚಳಕವ ಬಲ್ಲೆ
ತಪ್ಪದಲೆ ವೇತಾಳನೊಶ ಮಾಡಿಕೊಡಬಲ್ಲೆ
ಸಾದೇವ ಎನ್ನ ದಾಸರ ದಾಸ ಸಂಜಯನು
ಯಾದ್ರೀಶ ತಾದ್ರಿಶ ಎನ್ನ ಶಿಷ್ಯರೊಳಗವನೊಬ್ಬ
ಆಕಾಶವಾಣಿಯೆನ್ನಾಶ್ರಿತಳು,
ಬೇಕಾದರೆನ್ನ ಮಾತು ಭಯ ಭಕ್ತಿಯಲಿ ಕೇಳು
ನಾಡಾಡ ಕೊರವಿ ನಾನಲ್ಲ, ನಿರ್ಮಳಾತ್ಮಳು ನಾನು"[೨೮]

ಎಂದು ತಾನು ಬಲ್ಲ ವಿದ್ಯೆಗಳ ಮಾಹಿತಿ ನೀಡುತ್ತಾಳೆ. ಕೊರವಂಜಿ ನೂರಾರು ವಿದ್ಯೆಗಳನ್ನು ಅರಿತವಳಾಗಿದ್ದಳು ಎಂದು ಇದರಿಂದ ತಿಳಿಯುತ್ತದೆ.

ಇಲ್ಲಿ ಕೃಷ್ಣ ಸತ್ಯಭಾಮೆಯ ಅಹಂಕಾರವನ್ನು ಕಳೆಯುವ ಪ್ರಯತ್ನಮಾಡುತ್ತಾನೆ. ರುಕ್ಮಿಣಿ ಕೃಷ್ಣನನ್ನು ಭಕ್ತಿಯಿಂದ ಪೂಜಿಸುವಳು. ಅವಳ ಮನದಲ್ಲಿ ಸದಾ ಕೃಷ್ಣನಿರುವ. ಆದರೆ ಸತ್ಯಭಾಮೆಯದು ಕೇವಲ ಕೃಷ್ಣನ ಬಗೆಗಿರುವದು ಮೋಹ. ಆತ ತನಗೆ ಮಾತ್ರ ಮೀಸಲೆಂಬ ಧೋರಣೆ. ಅವಳ ಈ ಅಹಂಕಾರವನ್ನು ಕಳೆಯಲು ಕೃಷ್ಣ ಕೊರವಂಜಿಯಾಗಿ ಬರುತ್ತಾನೆ. ಅವಳಲ್ಲಿ ಭಕ್ತಿಯ ಭಾವ ಮೂಡಿಸುತ್ತಾನೆ. ಕೇವಲ ಮೋಹದಲ್ಲಿದ್ದ ಸತ್ಯಭಾಮ ಕೃಷ್ಣ ಎದುರಿಗಿದ್ದರೂ ಗುರುತಿಸುವುದಿಲ್ಲ. ಆದರೆ ಇದೆ ವೇಷದಲ್ಲಿ ಕೃಷ್ಣ ರುಕ್ಮಿಣಿ ಹತ್ತಿರ ಹೋದಾಗ ಆಕೆ ಆರತಿ ಮಾಡಿ ಕೃಷ್ಣನನ್ನು ಸ್ವಾಗತಿಸುತ್ತಾಳೆ. ದೇಹ ಮೋಹಕ್ಕಿಂತ ಮನಸ್ಸು ಅರಿತವರಿಗೆ ಅವರನ್ನು ಕಂಡು ಹಿಡಿಯಲು ಸಾಧ್ಯವಾಗುತ್ತದೆ ಎಂಬುದನ್ನು ಇಲ್ಲಿ ಮುಖ್ಯವಾಗಿಸಲಾಗಿದೆ. ಇಲ್ಲಿ ಕೊರವಿಯ ಪಾತ್ರ ಬಹುಮುಖ್ಯವಾಗಿದೆ.

### ೩.೧.೧೩. ಕಾಖಂಡಕಿ ಮಹಿಪತಿದಾಸರ ಕೊರವಂಜಿ ಪದ

ಕೊರವಂಜಿಯು ಸತ್ಯಭಾಮೆಗೆ ಮಗುವಿನ ಜನನದ ಕುರಿತು ಭವಿಷ್ಯ ನುಡಿಯುವ ಚಿತ್ರಣವಿದೆ. ಪತಿತ ಪಾವನನಾದವನು ನಿನ್ನ ಉದರದಲ್ಲಿ ಜನಿಸಿ ಬರುತ್ತಾನೆ ಎಂದು ಕೊರವಂಜಿ ಭವಿಷ್ಯ ನುಡಿಯುತ್ತಾಳೆ. ಇವಳ ಮಾತನ್ನು ಕೇಳಿದ ಸತ್ಯಭಾಮೆ ಎಲ್ಲಿಂದ ಬಂದೆ ಎಂದಾಗ ಲಕ್ಷ ಎಂಬತ್ತನಾಲ್ಕು ಗ್ರಾಮ ನೋಡಿ ಬಂದೆ ಎನ್ನುತ್ತಾಳೆ. ಸತ್ಯಭಾಮೆ

"ಒಡಮೂಡಿ ಬಂದರೆ ಉಡಿಯ ತುಂಬೇನವ್ವ
ಜಡಿತಾಭರಣದುಡಿಗಟ್ಟೆ ನಿನಗವ್ವ"[೩೯]

ಎಂದು ಅವಳನ್ನು ಕುರಿತು ಭವಿಷ್ಯ ಕೇಳಿದಾಗ 'ನಿನ್ನಲ್ಲಿ ದೇವಶಿಖಾಮಣಿ ಅವಧರಿಸಿ ಬರುತ್ತಾನೆ ಎನ್ನುತ್ತಾಳೆ.

ಒಂದು ಪದ್ಯದಲ್ಲಿ ಕೊರವಂಜಿ ಮಗುವನ್ನು ಗರ್ಭದಲ್ಲಿ ಹೊತ್ತವಳ ಬಯಕೆ ಹೇಗಿರುತ್ತವೆ ಎಂಬುದನ್ನು ಸೊಗಸಾಗಿ ವರ್ಣಿಸುತ್ತಾಳೆ.

"ಬಯಕಿ ಲಕ್ಷಣ ನಿನ್ನ ಹೇಳ್ವೆನವ್ವಾ ತಾಯಿ
ಮಾಯಿಕ ಗುಣ ಸುಟ್ಟು ತಿಂದೇನೆಂಬುದು ಬಾಯಿ
ಕೈಕಬ್ಬಲೆ ಶುದ್ಧಿಲ್ಲಾದವರ ತಾಳದು ಸೋವಿ
ಐರಾವತ ಬರುತಾನ ನಿನ್ನೊಳು ಪನ್ನಂಗಶಾಯಿ
ಬಾಹ್ಯನಿಷ್ಠುರ ಕಂಡು ಬದಿಗೆ ಬರಗುಡಿ ನೀನು
ಅಹಂಭಾವಕ ಹೇಸಿ ವಾಕರಿಸುವೆ ನೀನು
ಸೋಹ್ಯ ಸೊನ್ನಿಯ ಮಾತು ಗುಹ್ಯ ಹೇಳುವೆ ನಾನು
ಸಾಹ್ಯ ಮಾಡುವ ಶ್ರೀಗುರು ತಾನು"[೪೦]

ಎಂದು ಸುಗುಣ ಮಗುವನ್ನು ಹೊತ್ತವಳ ಬಯಕಿ ಹೇಗಿರುತ್ತವೆಂದು ತಿಳಿಸುತ್ತಾಳೆ.

ಇಲ್ಲಿ ಮೇಲ್ನೋಟಕ್ಕೆ ಮಗುವಿನ ಜನನದ ಬಗ್ಗೆ ಭವಿಷ್ಯ ನುಡಿಯುವಂತೆ ತೋರುತ್ತಿದ್ದರೂ, ಅವಳು ಹೇಳುತ್ತಿರುವುದು ಅರಿವು ಅಥವಾ ಜ್ಞಾನ ಎಂಬ ಮಗುವಿನ ಬಗ್ಗೆ. ಆ ಮಗು ಜನಿಸುವಾಗ ನಮ್ಮಲ್ಲಿರುವ ದುರ್ಗುಣಗಳು ದೂರವಾಗುವ ಬಗ್ಗೆ ಹೇಳುತ್ತಾಳೆ. ಇಲ್ಲಿ ಕೊರವಿ ಸರಳ ಮಾತುಗಳ ಮೂಲಕ ಆಧ್ಯಾತ್ಮವನ್ನು ಬೋಧಿಸುತ್ತಾಳೆ.

### ೩.೧.೧೪. ರತ್ನಾಕರವರ್ಣಿಯ ಭರತೇಶ ವೈಭವ

ಭರತೇಶ ವೈಭವದಲ್ಲಿ ಒಮ್ಮೆ ಕೊರವಂಜಿ ವೇಷ ಬಂದರೆ, ಮತ್ತೊಮ್ಮೆ ಕೊರವಂಜಿಯ ಬಗ್ಗೆ ಅವಹೇಳನದ ಮಾತುಗಳನ್ನು ರಾಣಿಯರಾಡುತ್ತಾರೆ.

ಭರತೇಶ ಗಿಳಿಯೊಡನೆ ಮಾತನಾಡಿದ್ದನ್ನು ಸುಮನಾಜಿ, ಅಮರಾಜಿ ಕಾವ್ಯ ಮಾಡಿ ಹಾಡಿದಾಗ ಅದನ್ನು ಮೆಚ್ಚಿ ಭರತ ಕುಸುಮಾಜಿ ಅಂತಃಪುರಕ್ಕೆ ತೆರಳುತ್ತಾನೆ. ಅದೇ ವೇಳೆ ಪೂರ್ವನಾಟಕದಲ್ಲಿ ನೃತ್ಯ ವಿದ್ಯಾಧರನ ಮಕ್ಕಳಾದ ನೇತ್ರಮೋಹಿನಿ, ಚಿತ್ರಮೋಹಿನಿಯರು ತಮ್ಮ ಆಟ ನೋಡಲು ರಾಜನ ಅನುಮತಿ ಪಡೆಯುತ್ತಾರೆ. ನಂತರ ನೃತ್ಯ ಪ್ರಾರಂಭವಾಗುತ್ತದೆ. ಚಿತ್ರಮೋಹಿನಿ, ನೇತ್ರಮೋಹಿನಿಯರಿಗಿಂತ ಮುಂಚೆ ಎಳೆಯ ಕನ್ಯೆಯರು ನಾಟ್ಯವಾಡುತ್ತಿರುತ್ತಾರೆ. ಈ ಸೋದರಿಯರ ನಾಟ್ಯ ಪ್ರಾರಂಭವಾಗುವಾಗ ಮಾಯವಾದ ಈ ಕನ್ಯೆಯರು ಸೋದರಿಯರ ನಾಟ್ಯ ನಡೆದಾಗ ಮಾಯಾಂಗನೆಯರಾಗಿ ಮತ್ತೆ ಬಂದು ಕೊರವಂಜಿ ಕಣಿ ಹೇಳುತ್ತಾರೆ. ಆಗ ರಾಜ ಅವರಿಗೆ ಭಕ್ಷೀಸು ಕೊಟ್ಟು ಕಳಿಸುತ್ತಾನೆ.

ಉತ್ತರ ನಾಟಕದಲ್ಲಿ ೧೬ ಜನ ರಾಣಿಯರ ನೃತ್ಯನೋಡಿ ತೃಪ್ತಗೊಂಡ ಭರತ ಅವರಿಗೆ ಉಡುಗೊರೆ ಕೊಡಲು ಕರೆಯುತ್ತಾನೆ. ಆಗ ರೂಪಾನಿ, ಪದ್ಮಾನಿಯರು ಕೋಪಿಸಿಕೊಂಡು ನಮ್ಮ ನೃತ್ಯನೋಡದೆ ಮಂತ್ರಿಯನ್ನು ನೋಡುತ್ತಿದ್ದ ನೀನು ನಮಗೆ ಕಾಣಿಕೆ ಕೊಡುವೆ ಇದು ತಪ್ಪೆಂದು ತಂಟೆ ತಗೆಯುತ್ತಾರೆ. ಭರತ ಸಮಾಧಾನ ಪಡಿಸಲು ಯತ್ನಿಸಿದಾಗ 'ನಾವು ನಾಟಕವನ್ನು ಗಂಭೀರವಾಗಿ ಆಡಿದ್ದೇವೆ. ಸೂಳೆಯರಂತೆ ನಾವು ಪೂರ್ವನಾಟಕವಾಡಿಲ್ಲ. ಕೊರವಂಜಿಯರಂತೆ ತಿರುಕವೇಷವನ್ನು ಆಡಿದ್ದೇವೆಯೇ?' ಎಂದು ಪ್ರಶ್ನಿಸುತ್ತಾರೆ.

ಕೊರವಂಜಿ ಕಣಿ ಹೇಳುವಲ್ಲಿ ಇವರು ರಾಜನ ಮುಂದೆ ನಿಂತು ಕಣಿ ಹೇಳುವ ಪರಂಪರೆ ಇತ್ತೆಂದು ತಿಳಿಯುತ್ತದೆ. ರೂಪಿಣಿ, ಪದ್ಮಿನಿಯರು "ಕೊರವಂಜಿ ಕಟ್ಟಣೆಯೆಂಬ ತಿರುಕವೇಷ ದೆರಕವ ತೊಟ್ಟೆವೆ ನಾವು"[೪೧] ಎಂಬ ಮಾತು ಕೊರವಂಜಿಯರ ಬಡತನದ ಸ್ಥಿತಿ, ರಾಜನ ಆಸ್ಥಾನದಲ್ಲಿ ಗೌರವವಿದ್ದರೂ, ಅವರ ಬಡತನದ ಬಗೆ ರಾಣಿಯರಿಗೇ ಕೀಳುಭಾವನೆ ಇರುವುದು ತಿಳಿದುಬರುತ್ತದೆ.

### ೩.೧.೧೫. ಶೃಂಗಾರಮ್ಮನ ಪದ್ಮಿನಿ ಕಲ್ಯಾಣ

ಪದ್ಮಾವತಿಯು ವೆಂಕಟೇಶನನ್ನು ವಿವಾಹವಾಗುವ ಪ್ರಸಂಗವಿದೆ. ಆಕಾಶರಾಜನ ಮಗಳನ್ನು ಮೋಹಿಸಿದ ವೆಂಕಟೇಶ ಬಕುಳೆಯನ್ನು ಕನ್ಯೆ ಕೇಳಲು ಕಳಿಸಿ ತಾನು ಕೊರವಂಜಿಯಾಗಿ ಬಂದು ಪದ್ಮಿನಿಗೆ ಕಣಿ ಹೇಳುತ್ತಾನೆ. ಈ ಮೂಲಕ ಅವಳ ಮನಸ್ಸಿನ ದುಗುಡ ಕಳೆಯುತ್ತಾನೆ. ಇಲ್ಲಿ ಅವಳು

ತಾನು ಎಲ್ಲ ಮಂತ್ರ ತಂತ್ರಗಳ ಬಲ್ಲೆನೆಂದು ಹೇಳುತ್ತಾಳೆ. "ಎಲ್ಲ ರೋಗವ ಬಿಡಿಸುವ ಯಂತ್ರ ತಂತ್ರವ ಬಲ್ಲೆ ನಾನೆಂದು ಹೇಳಿದಳು."[೪೨] ಹೀಗೆ ಎಲ್ಲ ರೋಗಕ್ಕೂ ತನ್ನಲ್ಲಿ ಮಂತ್ರವಿದೆಯೆಂದು ಹೇಳುವ ಕೊರವಂಜಿ ಪದ್ಮಿನಿಗೆ ರೋಗಕ್ಕೆ ಕಾರಣವನ್ನು ಹೇಳುತ್ತಾಳೆ.

"ತಂಗಿಗೆ ದಿನದೊಳು ಮೂರುಲೋಕಂಗಳ
ನುಂಗುವ ಬಲುಭೂತ ಸೋಂಕಿ
ಭಂಗಬಡಿಸುತಿದೆ ಇದಕೆ ತಾಗುವ ಮಂ
ತ್ರಗಳುಂಟೆಂದು ಹೇಳಿದಳು"[೪೩]

ವೆಂಕಟೇಶ ಮೂರು ಲೋಕಗಳ ನುಂಗುವ ಬಲುಭೂತ ಎನ್ನುವ ಮೂಲಕ ವೆಂಕಟೇಶನ ದರ್ಶನವೇ ಅವಳ ರೋಗಕ್ಕೆ ಕಾರಣವೆನ್ನುತ್ತಾಳೆ. ಪದ್ಮಿನಿಯನ್ನು ವೆಂಕಟೇಶನಿಗೆ ಮದುವೆಮಾಡಿದರೆ ಅವಳ ರೋಗ ನಿವಾರಣೆಯಾಗುತ್ತದೆ ಎಂದು ತಿಳಿಸಿ ಅವಳ ವಿವಾಹವಾಗುವಂತೆ ಮಾಡುತ್ತಾಳೆ.

### ೩.೧.೧೬. ಕೊಡೆಕಲ್ಲ ಬಸವಣ್ಣನವರ ಸಾಹಿತ್ಯ

ಶಿವಾನಂದ ಎಸ್. ವಿರಕ್ತಮಠ ಸಂಪಾದಿಸಿದ ಕೊಡೆಕಲ್ಲ ವಚನ ಕಾವ್ಯ ಸಂಪುಟ ೨ರಲ್ಲಿ ಕೊಡೆಕಲ್ಲ ಬಸವಣ್ಣನವರ ಕೊರವಂಜಿಗೆ ಸಂಬಂಧಿಸಿದ ೩ ವಚನಗಳಿವೆ. 'ಕಣಿಯ ಕೇಳಿರಕ್ಕವ್ವನು ಮಣಿಯ ಹಾಕಿ' ಎನ್ನುವ ಸಾಲು ಗಮನಿಸುವಂಥದ್ದು. ಇಲ್ಲಿ ಚೆನ್ನಬಸವಣ್ಣ, ಬಸವಣ್ಣ ಈ ಲೋಕಕ್ಕೆ ಬರುವ ಬಗ್ಗೆ ಕಾಲಜ್ಞಾನ ವಚನ ನುಡಿಯುತ್ತಾರೆ. 'ಸುಣ್ಣ ಕಲ್ಲು ಕಟ್ಟಿಕೊಂಡು ಮಡುವಿನೊಳಗೆ ಬಿದ್ದ ಪರಿಸ್ಥಿತಿಯಲ್ಲಿರುವಾಗ ಅಣ್ಣ ಬಸವರಾಜ ಬರುತ್ತಾನೆ. ಬಸವಣ್ಣ ಹೊಸದುರ್ಗೆಯಾಗಿ ಲೋಕಕ್ಕೆ ಇಳಿದಿದ್ದಾನೆ. ರುದ್ರನೆಂಬ ರಾಮ ಧರೆಗೆ ಇಳಿದಿದ್ದಾನೆ' ಎನ್ನುತ್ತಾಳೆ. ಇಲ್ಲಿ ವೈಷ್ಣವ ಧರ್ಮ ಅವನತಿಯತ್ತ ಸಾಗಿ ವೀರಶೈವ ಧರ್ಮ ತಲೆಯೆತ್ತುವಾಗ ಬರುವ ಈ ಕಾಲಜ್ಞಾನ ವಚನಗಳಲ್ಲಿ ಹರಭಕ್ತರಾಗಿ ಪರಿವರ್ತನೆ ಹೊಂದಲು ಕೊರವಂಜಿ ಹೇಳುತ್ತಾಳೆ.

"ಹರಿಯ ಭಕ್ತರಾದರಲ್ಲಿ ಹಿರಿಯ ದುರ್ಗಿ ಬಂದ ನಾಡು
ಉರ್ವಿ ಸುಟ್ಟ ಪರಿಯ ನೀವು ಧರಿಯೊಳರಿಯರೆ
ಉದರದೊಳೊಂದು ಲಿಂಗ ಧರಿಸಿ ಬೇಗ ನೀವು ಭಕ್ತರಾಗಿ
ಹರಿಯ ಭಕ್ತರುರವ ಕಂಡು ಬಂದಿನಿಲ್ಲಿಗೆಯಮ್ಮ"[೪೪]

ಹರಿಯಭಕ್ತರು ಅನುಭವಿಸುವ ನೋವು ಬೇಡವಾದರೆ ಹರಭಕ್ತರಾಗಿ ಉಳಿಯುತ್ತಾ

"ಹತ್ತು ಮನಿಗೆ ಹರಿದು ಹೇಳಿ ನೆತ್ತಿಗೆಣ್ಣಿ ಹಿಡಿಕಿ ಜೋಳ
ತುತ್ತು ಕೊಳ ಬೇಡಿ ಒಡಲ ಹೊರೆವಳಲ್ಲವ
ಸತ್ಯರಾಯ ಧರೆಗೆ ಇಳಿದ ಭಕ್ತರೆಲ್ಲ ಗುಡಿಯ ಕಟ್ಟಿ
ಹತ್ತುತ್ತು ಪರಿಗಳಿಂದ ಎತ್ತರ ಕಳಸುವ"[೪೫]

ಎಂದು ತಾನು ಬೇಡುವ ಕೊರವಿಯಲ್ಲ. ಸತ್ಯ ಹೇಳಬಂದ ಕೊರವಿ ಎನ್ನುತ್ತಾಳೆ. 'ರಂಜಿ ಕೆಂಜಡೆಯಾ ಕೊರವಂಜಿ' ಎನ್ನುವ ಕಾಲಜ್ಞಾನ ವಚನದಲ್ಲಿ ನಂಜುಂಡನ ವರವ ಮಂಡಲಕೆ ಸಾರುತ್ತಾ ಬಂದೆ ಎಂದು ಕೊರವಂಜಿ ವೀರಶೈವಧರ್ಮ ಷಟಸ್ಥಲದ ಬಗ್ಗೆ ಹೇಳುತ್ತಾಳೆ.

"ಆರು ದರುಶನಕಿದ ಮೀರಿದ ಸ್ಥಲ ಬಂತು
ಹೋರ್‍ಯಾಡಬೇಡ ಮುಂದಿನ್ನು
ಜರಿಯದಿರಿ ನಿಮ್ಮ ಸ್ಥಲವ ಕಳಿದ ಬಳಿಕ
ಮಾರಹರ ಭಕ್ತ ಎನಲಿಬೇಡ ಮುಂದಿನ್ನು"[೪೬]

ಎಂದು ಶರಣರ ಹೊಂದುವ ಷಟಸ್ಥಲಗಳ ವಿವರಣೆ ನೀಡುತ್ತಾಳೆ.

'ಕಾಯ ಅರಿಕಾಯ ಗುರುರಾಯ' ಎಂಬ ವಚನದಲ್ಲಿ ಕೊರವಂಜಿ ಗುರು ಹೇಗಾಗುವನು ಎಂಬುದರ ಬಗ್ಗೆ ಹೇಳುತ್ತಾಳೆ.

ನಿರುತ ಲಿಂಗವ ಕಾಣಬೇಕು,
ಅರಿತರಿತು ಅದ ಕಟ್ಟಬೇಕು
ಹೊರತಾಗಿ ಶರಣ ಇರಬೇಕು
ಕುರುವ ಗಟ್ಟಾಗಿ ಕಟ್ಟಿ ಹಾಕಬೇಕು"

ಎಂದು ಶರಣ ಹೇಗಿರಬೇಕು ಆತನ ಲಿಂಗನಿಷ್ಠೆ ಹೇಗಿರಬೇಕೆಂದು ಕೊರವಿ ಹೇಳುತ್ತಾಳೆ.

### ೩.೧.೧೭. ಕೂಡಲೂರು ಬಸವಲಿಂಗಪ್ಪ

'ಕೊರವಿ ಬಂದಾಳೋ' ಎನ್ನುವ ವಚನದಲ್ಲಿ ಕೂಡಲೂರು ಶಿವಲಿಂಗಪ್ಪ ಅವರು ಕೊರವಿಯನ್ನು ಜ್ಞಾನದ ಪ್ರಸಾರಾರ್ತಿಯಾಗಿ ಕಾಣುತ್ತಾರೆ. ನಮಗೆ ಭಕ್ತಿ ನೀಡಿ ಮುಕ್ತಿಯತ್ತ ಕರೆದೊಯ್ಯಲು ಈ ಕೊರವಿ ಬಂದಿದ್ದಾಳೆಂದು ತಿಳಿಸುತ್ತಾರೆ. ಇದು ಆರೂಢರ ಪರಂಪರೆಯನ್ನು ತಿಳಿಸುವ ರೀತಿಯಲ್ಲಿ ರಚಿತವಾಗಿದೆ.

"ಶರಣ ಜನರಿಗೆಲ್ಲ ಕಣಿಯ ಹೇಳುವೆನೆಂದು
ಸರುವ ಕಾಲದ ವಿಷಯ ಅರಿತಿರುವೆ ತಾನೆಂದು
ಸತ್ಯದ ನುಡಿಯಲ್ಲಿ ನಿತ್ಯ ಇರುವೆನೆಂದು
ಮಿತಿ ಕೂಡಲೂರೇಶನ ಪ್ರಿಯಳು ತಾನೆಂದು"[೪೮]

ಹೀಗೆ ಆಕೆ ಹೇಳುವ ವಿಷಯಗಳೇನು ಎಂದು ಕವಿ ತಮ್ಮ ಕಾವ್ಯದಲ್ಲಿ ತಿಳಿಸುತ್ತಾರೆ.

### ೩.೧.೧೮. ಅರ್ಜುನ ಕೊರವಂಜಿ

ಧರ್ಮಸ್ಥಳದ ಯಕ್ಷಗಾನ ಹಸ್ತಪ್ರತಿ ವಿವರಣೆ ಸೂಚಿ ಸಂ-೧ರಲ್ಲಿ 'ಅರ್ಜುನ ಕೊರವಂಜಿ' ಎಂಬ ಹಸ್ತಪ್ರತಿಯ ಪ್ರಸ್ತಾಪವಿದೆ. ಇಲ್ಲಿ ಅರ್ಜುನ ಕೊರವಂಜಿ ವೇಷದಲ್ಲಿ ದ್ವಾರಕೆಗೆ ಹೋಗಿ ಶ್ರೀಕೃಷ್ಣನ ನೆರವಿನಿಂದ ಅವನ ತಂಗಿ ಸುಭದ್ರೆಗೆ ಕೊರವಂಜಿ ರೂಪದಲ್ಲಿ ಕಣಿ ಹೇಳಿ ಹಸ್ತಿನಾಪುರಕ್ಕೆ ಕೊಂಡೊಯ್ದು ಮದುವೆಯಾದ ಕಥೆಯಿದೆ. ಇದಕ್ಕೆ 'ಸುಭದ್ರಕಲ್ಯಾಣ' ಎಂಬ ಹೆಸರು ಇದೆ.

### ೩.೧.೧೯. ಪದ್ಮಾವತಿ ಅಮ್ಮನವರ ಕೊರವಂಜಿ

ಧರ್ಮಸ್ಥಳದ ಯಕ್ಷಗಾನ ಹಸ್ತಪ್ರತಿ ವಿವರಣಾ ಸೂಚಿಯಲ್ಲಿ ಸಂ-೧ರಲ್ಲಿ ಪದ್ಮಾವತಿ ಅಮ್ಮನವರ ಕೊರವಂಜಿ ಹಸ್ತಪ್ರತಿಯ ಪ್ರಸ್ತಾಪವಿದೆ. ಲಿಪಿಕಾರ ರಾಯಪ್ಪನ ಮಗ ನಳಿನಾಖ್ಯ ಶಾ.ಶ. ೧೭೧೨ (ಕ್ರಿ.ಶ. ೧೭೯೧)ರಲ್ಲಿ ಈ ಯಕ್ಷಗಾನ ಕೃತಿ ಬರೆದಿದ್ದಾನೆ. ಇದಕ್ಕೆ 'ರಾಮಜನನ' ಎಂಬ ಇನ್ನೊಂದು ಹೆಸರಿದ್ದು, ಇಲ್ಲಿ ಪದ್ಮಾವತಿ ಕೊರವಂಜಿ ವೇಷಧರಿಸಿ ಅಯೋಧ್ಯೆಯ ರಾಣಿ ಕೌಸಲ್ಯೆಗೆ ಗಂಡು ಮಗು ಹುಟ್ಟುವ ಬಗ್ಗೆ ಕಣಿ ಹೇಳುವ ಕಥೆ ಇದೆ.

### ೩.೨. ಜನಪದ ಸಾಹಿತ್ಯ ಕೃತಿಗಳು

### ೩.೨.೧. ಕೃಷ್ಣಕೊರವಂಜಿ

ಎ.ಜಿ. ನೀಲಗಾರ ಸಂಪಾದಿಸಿದ 'ಜಾನಪದ ಝೇಂಕಾರ' ಕೃತಿಯಲ್ಲಿ 'ಕೃಷ್ಣ ಕೊರವಂಜಿ' ಜನಪದ ಗೀತೆ ಇದೆ. ಇಲ್ಲಿ ಕೃಷ್ಣ ಕೊರವಂಜಿ ವೇಷಧರಿಸಿ ರುಕ್ಮಿಣಿಗೆ ಅವಳ ಮನಸಲ್ಲಿ ಕೃಷ್ಣನಿರುವ ಬಗ್ಗೆ, ಆತ ಬೇಗ ಬರುವ ಬಗ್ಗೆ ಭವಿಷ್ಯ ನುಡಿಯುತ್ತಾಳೆ. ಕೃಷ್ಣನು ಕೊರವಂಜಿ ವೇಷ ಧರಿಸಿ ಅದಕ್ಕೆ ತಕ್ಕ ಹಾಗೆ ಶೃಂಗಾರಗೊಂಡು 'ಕಣಿ ಹೇಳುವೆ ಕಣಿ' ಎಂದು ಸಾರುತ್ತಾ ಕೇರಿ ಕೇರಿಯಲ್ಲಿ ಬರುತ್ತಾಳೆ. ಇವಳನ್ನು ಕಂಡ ರುಕ್ಮಿಣಿ ದಾಸಿಯರ ಮೂಲಕ ಕರೆಕಳಿಸುತ್ತಾಳೆ. ಅಲ್ಲಿಗೆ ಬಂದ ಕೊರವಂಜಿ ನಾನು ವಯ್ಯಾರಪುರದಿಂದ ಬಂದಿದ್ದೇನೆ. ಆದಿಗಣೇಶನ ಮಗಳು, ಸಿದ್ಧಲಿಂಗೇಶ್ವರ ಎನಗೆ ಚಿಕ್ಕಪ್ಪ, ನಾನು ಹೊಟ್ಟೆ ಹಿಟ್ಟಿಗಾಗಿ ಕಣಿ ಹೇಳಲು ಬಂದವಳಲ್ಲ ಎನ್ನುತ್ತಾಳೆ. ರುಕ್ಮಿಣಿ ಇವಳ ಮಾತಿಗೆ ನೀನು ಸುಳ್ಳು ಹೇಳುತ್ತಿರುವೆ ಎನ್ನುತ್ತಾಳೆ. ಆಗ ಕೊರವಂಜಿ ಮಗುವಿನ ಹಣೆಮುಟ್ಟಿ ಭಾಷೆ ಮಾಡುತ್ತಾಳೆ. ನಿನಗೆ ಮುತ್ತು, ಮಾಣಿಕ್ಯ ಕೊಡುವೇನು ಕಣಿ ಹೇಳು ಎಂದಾಗ, ಅವು ನಮ್ಮನೆಯ ಅವರೆಕಾಳು, ಮಲ್ಲಿಗೆ ಹೂ ಇದ್ದಂತೆ ಎನ್ನುತ್ತಾಳೆ. ನಾ ಮನಸ್ಸಿನ ಆಸೆ ಹೇಳಿದಾಗ ಏನು ಕೊಡುವೆ ಎಂದು ಕೇಳಿ, ಮಗುವಿಗೆ ಉಂಗುರ, ಅಪರಂಜಿ ಬಳೆಗಳನ್ನು ಕೈತುಂಬಾ ಕೊಡುವೆ ಎಂದಾಗ ಕಣಿ ಹೇಳಲು ಒಪ್ಪುತ್ತಾಳೆ. ಮನೆ ಸಾರಿಸಿ ಅವಳನ್ನು ಅದರ ಮೇಲೆ ಕೂಡಿಸಿ ಕೈ ಹಿಡಿದು ನಿನಗೆ ಕೃಷ್ಣನಲ್ಲಿ ಮನಸ್ಸಾಗಿದೆ, ಆತ ಸುಂಟರ ಗಾಳಿಯಲ್ಲಿ ಸುಳಿದಾಡುತ್ತಿದ್ದಾನೆ. ನಾಳೆ ಹೊತ್ತು ಬರುತ್ತಾನೆ, ಅನುಮಾನ ಬೇಡ ಎನ್ನುತ್ತಾಳೆ. ಆಗ ಕೊರವಂಜಿಯ ಧ್ವನಿ ಗಂಡಸರ ಧ್ವನಿಯಾಗಿ ಪರಿವರ್ತನೆಯಾಗುತ್ತದೆ. ಇದನ್ನು ಕೇಳಿದ ರುಕ್ಮಿಣಿ ನಾಚಿ ಕೋಣೆ ಸೇರುತ್ತಾಳೆ. ಹೆಂಗಸರ ನಾಚಿಕೆ ಕೆಡಿಸಬಾರದೆಂದು ತಿಳಿದ ಕೃಷ್ಣ ಕಾವೇರಿ ನದಿಗೆ ತೆರಳಿ ಸ್ನಾನ ಮಾಡಿಬರುತ್ತಾನೆ. ಇಬ್ಬರು ಜೊತೆಯಾಗಿ ಮಠಕ್ಕೆ ಬರುತ್ತಾರೆ. ಆಗ ಆಕಾಶದಗಲ ಚಪ್ಪರ ಹಾಕಿ ಇವರಿಬ್ಬರಿಗೂ ವಿವಾಹ ನೆರವೇರುತ್ತದೆ.

ಕಣಿ ಹೇಳಲು ಬಂದ ಕೃಷ್ಣ

> "ಅಂಕನ ತೆಂಕನ ಘೋರ ಮಲೆಯಾಳು
> ದಿಲ್ಲಿ ದವನಗಿರಿ ಮೊದಲಮ್ಮ ನಮ್ಮದು
> ಆಕಾಶ ಬ್ರಹ್ಮನ ಸೋಕಿ ನಾ ಬಂದೆ
> ಆದಿಗಣೇಶ್ವರನ ಮಗಳಮ್ಮ ನಾನು

ಸಿದ್ಧಲಿಂಗೇಶ್ವರನು ಚಿಕ್ಕಪ್ಪ ಎನಗೆ
ವಯ್ಯಾರಿಪುರದಿಂದ ಇಳಿದು ಬಂದೆ"[೨೯]

ಎಂದು ಶಿವ ಪರಿವಾರ ತನ್ನ ಪರಿವಾರ ಎನ್ನುತ್ತಾಳೆ. ಜೊತೆಗೆ ಹಿಟ್ಟಿನಾಸೆಗೆ ಬಂದ ಕೊರವಿ ನಾನಲ್ಲವೆಂದು ಮಗುವಿನ ಅಣೆ ಮಾಡಿ ಭವಿಷ್ಯ ನುಡಿಯುತ್ತಾಳೆ.

ಇಲ್ಲಿ ಕೃಷ್ಣ ತನಗಾಗಿ ಕಾಯುತ್ತಿರುವ ರುಕ್ಮಿಣಿಯನ್ನು ಸಂತೋಷಗೊಳಿಸಲು ತಾನೇ ಕೊರವಂಜಿಯಾಗಿ ಬಂದು ಕಣಿ ಹೇಳುತ್ತಾನೆ. ಅವಳ ಮನಸ್ಸಿನ ದುಗುಡ ಕಳೆಯುತ್ತಾನೆ. ಆದರೆ ಕೃಷ್ಣನ ಧ್ವನಿಪರಿವರ್ತನೆಯಾದರೂ ರುಕ್ಮಿಣಿಗೆ ಕೃಷ್ಣನನ್ನು ಗುರುತಿಸಲಾಗುವುದಿಲ್ಲ.

### ೩.೨.೨. ಕೃಷ್ಣಕೊರವಂಜಿ

ಜಿ.ಶಂ. ಪರಮಶಿವಯ್ಯರ 'ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು ಕೃತಿಯಲ್ಲಿ ಕೃಷ್ಣಕೊರವಂಜಿ ಹಾಡಿನ ಬಗ್ಗೆ ವಿವರ ಇದೆ. ಇದು ಜನಪದ ಝೇಂಕಾರದಲ್ಲಿ ಬರುವ ಕೃಷ್ಣಕೊರವಂಜಿ ಹಾಡನ್ನೆ ಹೋಲುತ್ತದೆ. ಆದರೆ ಇದು ಕೃಷ್ಣಗೊಲ್ಲರು ತಮ್ಮ ಕೋಲಾಟದಲ್ಲಿ ಹಾಡುವ ಕಥನಗೀತವಾಗಿದೆ. ಇಲ್ಲಿ ೨ ಸಾಲಾಗಿ ನಿಂತ ನಾಲ್ಕುಮಂದಿ ಹಿಮ್ಮೇಳದವರು ಕೋಲು ಹಾಕುತ್ತ ಹಾಡುತ್ತ ಸಾಗಿದರೆ, ಇನ್ನೊಬ್ಬರು ಕೃಷ್ಣಕೊರವಂಜಿಯ ಪ್ರಸಂಗವನ್ನು ಅಭಿನಯಿಸುತ್ತಾ ಕೋಲು ಹಾಕುತ್ತಾ ಮುಂದೆ ಸಾಗುತ್ತಾರೆ. ಶ್ರೀಕೃಷ್ಣ ತನ್ನಲ್ಲಿ ಅನುರಕ್ತಳಾದ ರುಕ್ಮಿಣಿಯ ಅಂತರಂಗ ತಿಳಿಯಲು ಅವಳ ಅರಮನೆಗೆ ಹೋದ ಪ್ರಸಂಗವನ್ನು ಇವರು ನೃತ್ಯವಾಗಿ ಅಭಿನಯಿಸುತ್ತಾರೆ.

ವೈಯ್ಯಾರದ ಅಲಂಕಾರ ಮಾಡಿಕೊಂಡ ಕೊರವಂಜಿ ತನ್ನ ಮನೆ ಮುಂದೆ ಸಾಗುವುದನ್ನು ಕಂಡು ರುಕ್ಮಿಣಿ ಗೌಡಿಯ ಮುಖಾಂತರ ಅರಮನೆಗೆ ಕರೆಸುತ್ತಾಳೆ. ಆದರೆ ಕೊರವಂಜಿ

"ಪುರುಷರಿಲ್ಲದ ಮನೆ ಸೇರುವಳಲ್ಲ,
ಮಕ್ಕಳಿಲ್ಲದ ಮನೆ ಹೊಕ್ಕವಳಲ್ಲ"[೩೦]

ಎಂದು ನಿರಾಕರಿಸುತ್ತಾಳೆ. ಅವರ ಒತ್ತಾಯಕ್ಕೆ ಹೋದ ಕೊರವಂಜಿ ಕೈತಾರೆ ಎಂದು ರುಕ್ಮಿಣಿ ಕೈ ಹಿಡಿದು ಕೃಷ್ಣಬರುವನೆಂದು ಭವಿಷ್ಯ ನುಡಿಯುತ್ತಾಳೆ. ಅವಳ ಮನಸ್ಸಿನ ತಳಮಳ ಗುರುತಿಸಿದ ಕೃಷ್ಣ ಕೊನೆಗೆ ಅವಳಿಗೆ ತನ್ನ ನಿಜರೂಪ ತೋರುತ್ತಾನೆ. ಆಗ ಅವನನ್ನು ಗುರುತಿಸಿದ ರುಕ್ಮಿಣಿ ನಾಚಿ ಒಳಹೋಗುತ್ತಾಳೆ. ರುಕ್ಮಿಣಿಯ ಮನದ ದುಗುಡ ಕಳೆಯಲು ಬಂದ ಕೃಷ್ಣ

"ಎಂಟು ಮಂದಿಯು ನಿನ್ನ ನೆಂಟರು ಕಾಣೆ,
ನೆಂಟರು ನಿನ್ನ ನೆಚ್ಚಿಕೊಂಡಿದ್ದರು
ಸುಂಟರಗಾಳೀಲೆ ತಿರುಗುತಿಯಲ್ಲೆ
ಉಂಟವೋ ಇಲ್ಲವೋ ಅನುಮಾನ ಬೇಡ
ಮೂಡಲ ಸೀಮೆಗೆ ಹೋಗುವನೆ ಸ್ವಾಮಿ
ಮುತ್ತುರತ್ನವನೇ ನಿನಗೆ ತರುತ್ತಾನೆ
ವಜ್ರವೈಡೂರ್ಯ ನಿನಗೆ ತರುತ್ತಾನೆ"[೩೧]

ಎಂದು ಹೇಳಿ ಅವಳ ಮನಸ್ಸಿನ ಅನುಮಾನವನ್ನು ದೂರ ಮಾಡುತ್ತಾಳೆ. ಅವಳ ಮನಸ್ಸಿನ ಹೊಯ್ದಾಟವನ್ನು ಸುಂಟರಗಾಳಿಗೆ ಹೋಲಿಸುತ್ತಾ ಹೀಗೆ ಭರವಸೆ ನೀಡಿದ ಕೃಷ್ಣ ಕೊನೆಗೆ ಅವಳಿಗೆ ಭರವಸೆ ಹುಟ್ಟಿಸಲು ತನ್ನ ನಿಜರೂಪ ತೋರಿದರೆ, ರುಕ್ಮಿಣಿಯು 'ಇದು ಎಲ್ಲ ಹೆಣ್ಣು ಮಾಯೆ' ಎಂದು ಕೃಷ್ಣನನ್ನು ನಂಬದೆ ಹೋಗುತ್ತಾಳೆ. ಕೃಷ್ಣನ ಕೊರವಂಜಿ ವೇಷ, ವರ್ತನೆ ತಾನು ನಿಜರೂಪ ತೋರಿದರು ತನ್ನ ಮನದನ್ನೆಯೇ ನಂಬದಿರುವಷ್ಟು ಸಹಜ, ಸುಂದರವಾಗಿದ್ದೆ ಇದಕ್ಕೆ ಕಾರಣವಾಗುತ್ತದೆ.

### ೩.೨.೩. ಮಂಟೆಸ್ವಾಮಿ ಕಾವ್ಯ

ಪಾಂಚಾಳರ ಅಹಂಕಾರ ತಗ್ಗಿಸಲು ಮಂಟೇಸ್ವಾಮಿ ಶಿಷ್ಯ ಸಿದ್ದಪ್ಪಯ್ಯ ಕೊರವಂಜಿಯಾಗುತ್ತಾನೆ.[೨೮] ಕಲಿಪುರುಷ ಹೆಂಡತಿಯನ್ನು ಹೆಗಲ ಮೇಲೆ ಹೊತ್ತುಕೊಂಡು ತಾಯಿಯನ್ನು ನಡೆಸುತ್ತಾ ಹೆಂಡತಿಯ ಚಪ್ಪಲಿಯನ್ನು ತಾಯಿ ಕೈಯಲ್ಲಿ ಕೊಟ್ಟು ಬರುತ್ತಿರುವುದನ್ನು ಕಂಡು ಮಡಿವಾಳ ಮಾಚಯ್ಯ ಇದನ್ನು ಮಂಟೇಸ್ವಾಮಿಗೆ ಹೇಳುತ್ತಾನೆ. ಇಂಥ ಕಾಲದಲ್ಲಿ ಇಂದೇ ಪಾತಾಳ ಬಾವಿಯಲಿ ಪವಡಿಸಲು ನಿರ್ಧರಿಸಿ ಶಿವ ಸಿದ್ದಪ್ಪಾಜಿಗೆ ೯ ಎತ್ತು ತರಲು ಹೇಳುತ್ತಾನೆ. ಹೋಗಲು ಮನಸ್ಸಿಲ್ಲದ ಸಿದ್ದಪ್ಪಾಜಿ ೭ ಜನ ಪಾಂಚಾಳ ಧಣಿಗಳಿರುವ ಹಲಗೂರಿಗೆ ಹೋಗುತ್ತಾನೆ. ಅವರಿಂದ ಉಗ್ರ ಪವಾಡ ಎದುರಿಸಿ, ಭಿಕ್ಷೆ ನೀಡದೆ ಅವರು ಶಿಷ್ಯನನ್ನು ಹೊರಹಾಕಿದಾಗ ಕೋಪ ತಾಳಿದ ಮಂಟೇಸ್ವಾಮಿ ಸಿದ್ದಾಪ್ಪಾಜಿಯಿಂದ ನವ ದುರ್ಗೆಯರ ಕರೆಯಿಸಿ ಅವರನ್ನು ಕುರಿ ಮಾಡಿ ತಾನು ಕುರುಬನಾಗಿ ಊರು ಪ್ರವೇಶಿಸುತ್ತಾನೆ. ೭ ದಿಕ್ಕುಗಳಿಂದ ಊರು ದಾಳಿಮಾಡಿ ೭ ಜನರನ್ನು ಬಿಟ್ಟು ಊರನಾಶಮಾಡಲು ಹೇಳುತ್ತಾನೆ. ದುರ್ಗೆಯರು ವಾಂತಿ ಭೇದಿಯಿಂದ ಊರುನಾಶಗೊಳಿಸುತ್ತಾರೆ. ೭ ಜನರನ್ನು ನಾಶಮಾಡಲು ಅನುಮತಿ ಕೇಳಿದಾಗ ಅವರನ್ನು ಶಿಶುಗಳಾಗಿ ಮಾಡುತ್ತಾನೆ.

೭ ಜನ ಶ್ರೀಮಂತರು ಊರಿಗಾದ ಸ್ಥಿತಿಗೆ ಹರಕೆ ಹೊತ್ತು ಶಾಸ್ತ್ರ ಕೇಳಲು ಹೋದಾಗ ಸಿದ್ದಪ್ಪಾಜಿ ಕೊರವಂಜಿ ವೇಷಧರಿಸಿ ನಿಮ್ಮ ಮನೆದೇವರಿಗೆ ಹರಕೆಯಿಟ್ಟ ಒಡವೆ ಒಪ್ಪಿಸಿ ಎಂದಾಗ ಪಾಂಚಾಳರು ಒಪ್ಪಿಸುತ್ತಾರೆ. 'ಮಂಟೇಸ್ವಾಮಿ ಹಾಕಿದ ಶಾಪ ಹಲಗೂರ ನಾಶಕ್ಕೆ ಕಾರಣ, ತೋಟದಲ್ಲಿ ಈದ ಹುಲಿಯೊಂದಿಗೆ ಆಟವಾಡುತ್ತಾ ಇರುವ ಅವರಿಗೆ ಶರಣಾಗಿ' ಎಂದು ಕೊರವಂಜಿ ಹೇಳುತ್ತಾಳೆ. ಅವರು ಮಂಟೇಸ್ವಾಮಿಯನ್ನು ಹುಡುಕುತ್ತಾ ಬಂದು ದೀಕ್ಷೆ ಪಡೆದು ನೀಲಗಾರರಾಗುತ್ತಾರೆ.

ಅಹಂಕಾರದಿಂದ ವರ್ತಿಸುವ ಪಾಂಚಾಳರನ್ನು ಅಡಗಿಸಲು ಸಿದ್ದಪ್ಪಯ್ಯ ಕೊರವಂಜಿಯಾಗುತ್ತಾನೆ. ಕಣಿ ಹೇಳುವ ಮೂಲಕ ಅವರನ್ನು ಮಂಟೇಸ್ವಾಮಿ ಶಿಷ್ಯರನ್ನಾಗಿ ಮಾಡುತ್ತಾನೆ. ಅಹಂಕಾರದಿಂದ ಮೆರೆಯುವವರ ಅಹಂಕಾರ ಅಡಗಿಸುವ ಕಾರ್ಯವನ್ನು ಕೊರವಂಜಿ ಮಾಡುತ್ತಾಳೆ.

### ೩.೨.೪. ಸಾರಂಗಧರನ ಕಥೆ

ಜಿ.ಶಂ. ಪರಮಶಿವಯ್ಯ ಸಂಪಾದಿಸಿದ 'ದಕ್ಷಿಣ ಕರ್ನಾಟಕದ ಜನಪದ ಕಾವ್ಯಪ್ರಕಾರಗಳು' ಕೃತಿಯಲ್ಲಿ ಸಾರಂಗಧರನ ಕತೆಯ ಪ್ರಸ್ತಾಪವಿದೆ. ಇಲ್ಲಿ ರಾಣಿ ಚಿತ್ರಾಂಗದೆಯ ತವರುಮನೆ ದೇವರು 'ಕುರದಂಕದಮಾರಿ' ಬಂದು ರಾಣಿಗೆ ಭವಿಷ್ಯ ಹೇಳುತ್ತಾಳೆ.

ಕುಮಾರರಾಮ ಮತ್ತು ರತ್ನಾಜಿ ಕಥೆ ಹೋಲುವ ಕಾವ್ಯ ಸಾರಂಗಧರನ ಕಥೆ. ರಾಜಮಹೇಂದ್ರಪುರದ ರಾಜೇಂದ್ರ ರತ್ನಾಂಗ ದೇವಿಗೆ ಬಹಳ ಕಾಲ ಮಕ್ಕಳಾಗದಕ್ಕೆ ಅನೇಕ ದೇವರ ಪ್ರಾರ್ಥಿಸಿ ಸಾರಂಗಧರನ ಪಡೆಯುತ್ತಾರೆ. ಸಾರಂಗಧರ ಪ್ರಾಪ್ತನಾದಾಗ ಗುಜ್ಜಲೇಶ್ವರನ ಮಗಳು ಚಿತ್ರಾಂಗದೆಯನ್ನು ಮಗನಿಗೆ ತರಲು ನಿರ್ಧರಿಸಿದಾಗ ಚಿತ್ರಪಟದ ಅವಳ ಚಿತ್ರಕ್ಕೆ ಮರುಳಾಗಿ ರಾಜ ತಾನೇ ಮದುವೆಯಾಗುತ್ತಾನೆ. ಮುದಕನ ಮದುವೆಯಾದ ಬಗ್ಗೆ ಕೊರಗುತ್ತಿದ್ದ ರಾಣಿ ರಾಜಕುಮಾರನನ್ನು ಒಂದು ಕ್ಷಣವಾದರೂ ಪತಿ ಎಂದು ಭಾವಿಸದೆ ಇರಲಾರೆನೆಂದು ಪಣ ತೊಡುತ್ತಾಳೆ. ರಾಜ ಬೇಟೆಗೆ ಹೋದಾಗ ಪಾರಿವಾಳದ ಜೂಜಾಡಲು ಮಂತ್ರಿಮಗನ ಜೊತೆ ಬಂದ ರಾಜಕುಮಾರನ್ನು ಮೋಹಿಸಿ ಸೇವಕಿಗೆ ಹೇಳಿದಾಗ ಅವಳು ಬುದ್ಧಿ ಮಾತು ಹೇಳಿ ಹೋಗುತ್ತಾಳೆ. ಅವನನ್ನೇ ಪಡೆಯಲೇಬೇಕೆಂದು ತೀರ್ಮಾನಿಸಿ ದೇವತೆಗಳಿಗೆ ಮೊರೆ ಇಟ್ಟಾಗ ತವರಿನ ದೇವಿ 'ಕುರದಂಕದ ಮಾರಿ' ಕೊರವಂಜಿಯಾಗಿ ಬಂದು 'ಇನ್ನೊಂದು ಗಳಿಗೆಯಲಿ ಸಾರಂಗಧರ ಅರಮನೆಗೆ ಬರುವಂತೆ ಮಾಡುತ್ತೇನೆ' ಎಂದು ಹೇಳಿ ಹೋಗುತ್ತಾಳೆ.

ಮಾರಿ ಗಿಡುಗನಾಗಿ ಸಾರಂಗಧರನ ಪಾರಿವಾಳ ಗಾಯಗೊಳಿಸಿ ಚಿತ್ರಾಂಗದೆಯ ಅಂತಃಪುರದಲ್ಲಿ ಎಸೆಯುತ್ತಾಳೆ. ಅದನ್ನು ತರಲು ಬಂದಾಗ ೭ ಬಾಗಿಲು ಭದ್ರಪಡಿಸಿ ಅವನ ಮುತ್ತಿನ ಸೆರಗು ಹಿಡಿದು ಎಳೆದಾಗ ಪಾಪವೆಂದು ತಿಳಿದ ಸಾರಂಗಧರನು ಧರ್ಮದೇವತೆಯನ್ನು ಪ್ರಾರ್ಥಿಸಿದಾಗ, ಬಾಗಿಲು ತೆಗೆದು ಆತ ಹೊರಹೋಗುತ್ತಾನೆ. ಅಲ್ಲಿಯೇ ಉಳಿದ ಅವನ ಶಲ್ಯ ತೋರಿಸಿ ಬೇಟೆಯಿಂದ ಬಂದ ರಾಜನಿಗೆ ಸಾರಂಗಧರ ತನ್ನ ಮಾನ ಕಳೆದನೆಂದು ರಾಣಿ ಹೇಳುತ್ತಾಳೆ. ರಾಜ ಸಾರಂಗಧರನನ್ನು ಕೊಲ್ಲಿಸಲು ಹೇಳುತ್ತಾನೆ. ತಾಯಿ ಬಂದು ಕೇಳಿದಾಗ ಚಿತ್ರಾಂಗದೆ ಅವಳನ್ನು ಹೊರಹಾಕಿ ಸಾರಂಗಧರನನ್ನು ನೀರು ನೆರಳು ಇಲ್ಲದಲ್ಲಿ ಕೈಕಾಲು ಕಟ್ಟಿಸಿ ಒಗೆಸುತ್ತಾಳೆ. ಸಾರಂಗಧರನಿಗೆ ಮರಿಜಂದ್ರಯೋಗಿ ಋಷಿಗಳಿಂದ ಕೈಕಾಲು ಬಂದು, ತಂದೆಗೆ ಮಗನ ತಪ್ಪಿಲ್ಲೆಂದು ತಿಳಿಯಿತು. ರಾಜ ಚಿತ್ರಾಂಗದೆಯನ್ನು ಕೊಂದು ಪಾಳುಬಾವಿಯಲ್ಲಿ ಹಾಕಿ ಮಗನನ್ನು ಕರೆಯಲು ಹೋಗುತ್ತಾನೆ. ಚಿಕ್ಕಮ್ಮ ಬರದನ್ನು ತಿಳಿದು ನಾಲ್ಕು ಮಂತ್ರ ಕಲಿತು ಸಾರಂಗಧರ ಚಿಕ್ಕಮ್ಮನನ್ನು ಬದುಕಿಸುತ್ತಾನೆ.

ಪ್ರತಿಕಡೆಯು ಒಳಿತನ್ನು ಮಾಡಲು ಬರುವ ಕೊರವಂಜಿ ಇಲ್ಲಿ ಕೆಡುಕಿಗೆ ಹಾದಿ ಮಾಡುತ್ತಾಳೆ. ಅನೈತಿಕ ಸಂಬಂಧಕ್ಕೆ ಹಾತೊರೆಯುವ ಚಿತ್ರಾಂಗದೆಗೆ ಕಣಿ ಹೇಳಿ ಅವಳಿಗೆ ಅನುಕೂಲ ಪರಿಸ್ಥಿಯನ್ನು ಕಲ್ಪಿಸುತ್ತಾಳೆ. ಅವಳು ಇಲ್ಲಿ ಮಾಡಿದ್ದು ತಪ್ಪಿದ್ದರೂ, ತಂದೆ ವಯಸ್ಸಿನ ರಾಜನನ್ನು ಮದುವೆಯಾಗಿ ನೊಂದಿರುವ ಚಿತ್ರಾಂಗದೆಯನ್ನು ಸಂತೈಸುವ ಭಾವ ಅವಳಲ್ಲಿದೆ.

**೩.೨.೫. ಕೊರವಂಜಿ ಹಾಡು**

ಕೆ.ಆರ್. ಕೃಷ್ಣಸ್ವಾಮಿಯವರು ಸಂಪಾದಿಸಿದ 'ಹಾಡು ಚೆಲ್ಲಾವೆ ನಾಡಿಗೆ' ಕೃತಿಯಲ್ಲಿ ಈ ಹಾಡುಬರುತ್ತದೆ. ಇದು ಜಾನಪದ ಝೇಂಕಾರದ ಕೃಷ್ಣಕೊರವಂಜಿ ಹಾಡನ್ನೆ ಹೋಲುತ್ತದೆ. ಈ ಜನಪದ ಕಥನಗೀತೆಯನ್ನು ಬಯಲುನಾಡಿನ ಹಳ್ಳಿಗಳಲ್ಲಿ ಗೊಲ್ಲರು ಗೋಕುಲಾಷ್ಟಮಿಯ ದಿನ ಬೆಳದಿಂಗಳಲ್ಲಿ ಕೋಲು ಹಾಕಿಕೊಂಡು ಹಾಡುತ್ತಾರೆಂದು ಸಂಪಾದಕರು ಹೇಳುತ್ತಾರೆ.

ಕೃಷ್ಣ ತನಗಾಗಿ ಕಾಯುತ್ತಿದ್ದ ರುಕ್ಮಿಣಿಗೆ ತಾನು ಬರುವ ವಿಷಯವನ್ನು ತಿಳಿಸಲು ಕೊರವಂಜಿ ವೇಷವನ್ನು ಹಾಕಿಕೊಂಡು ಹೋಗುತ್ತಾನೆ. ಕೇರಿಕೇರಿ ಸುತ್ತುವ ಕೊರವಂಜಿಯನ್ನು ಕಂಡು ರುಕ್ಮಿಣಿ ಕರೆಸುತ್ತಾಳೆ. ಯಾವೂರು ಎಂದಾಗ

"ಅಂಕಟಂಕಿಣಿ ನಮಗೆ ಗೌರಮ್ಮಳಿಯಾಳು
ಆದಿಗಣೇಶ್ವರನ ಮಗಳಲ್ಲವೇನೆ?
ಸಿದ್ದಲಿಂಗೇಶ್ವರನು ಚಿಕ್ಕಪ್ಪ ನನಗೆ
ವಯ್ಯಾರಿಪುರದಿಂದ ನಾ ಒಬ್ಬಳೆ ಬಂದೆ"[೫೨]

ಎಂದು ತನ್ನ ಪರಿವಾರ ಹೇಳುತ್ತಾಳೆ. ಇಲ್ಲಿ ಕೊರವಂಜಿ ವೇಷ ಧರಿಸಿದವನು ವಿಷ್ಣುವಿನ ಅವತಾರವಾದ ಕೃಷ್ಣ. ಆದರೆ ಈಕೆ ತನ್ನ ಸಂಬಂಧಿಗಳೆಂದು ಹೇಳುವುದು ಮಾತ್ರ ಶಿವಕುಟುಂಬವನ್ನು. ಜನಪದರಲ್ಲಿ ಶಿವ ವಿಷ್ಣುವರಲ್ಲಿ ಭೇಧವಿಲ್ಲ. ಅದು ದೈವಬಳಗ. ಅಂತೆಯೇ ಇಲ್ಲಿಯ ಕೊರವಂಜಿಯು ಹಾಗೇಯೇ ಹೇಳುತ್ತಾಳೆ. ಅಂತೆಯೇ ಕೊರವಿ ತಾನು ಎಂಥವಳೆಂಬುದನ್ನು

"ಹೊಟ್ಟೆಗೆ ಹಿಟ್ಟಿಗೆ ಬಂದ ಹೆಣ್ಣು ನಾನಲ್ಲಾ
ತೊಟ್ಟು ಗೂಡೆಯ ತಂದು ನಾ ಮಾರೋಳಲ್ಲ
ಹೊಟ್ಟೆಗೆ ಹಿಟ್ಟಗೆ ಬಂದ ಹೆಣ್ಣು ನಾನಲ್ಲ
ಸುಳ್ಳಲ್ಲ ಕಣಮ್ಮ ಮಗು ಮೇಲೊಂದಾಣೆ"[೫೩]

ಎಂದು ಹೇಳಿ ತಾನು ದೇವಲೋಕದವಳೆಂದು ತಿಳಿಸಲು ಯತ್ನಿಸುವಳು. ಕಣಿ ಕೇಳುವವರು ಏನು ಮಾಡಬೇಕೆಂಬುದನ್ನು ಸಹ ಕೊರವಂಜಿ

"ಮಟ್ಟ ಮಂಗಳವಾರ ಮನೆ ಸಾರಿಸು ಹೆಣ್ಣೆ
ಗಂಟು ಮೂಟೆಗಳನ್ನೆಲ್ಲಾ ಹೊರಗೆ ತಂದಿರಿಸು
ಎಂಟು ಗಾಡಿಯ ನೀರಿನಲಿ ನೀ ತಾನವ ಮಾಡು
ಎಂಟು ತರಹದ ಕಾಸು ನೀ ತಂದು ಮಡಗು
ಗೊನೆಯ ಬಾಳಿಯ ಹಣ್ಣು ನೀ ತಂದಿರಿಸು
ಗೊನೆಯ ತೆಂಗಿನಕಾಯಿ ನೀ ತಂದಿರಿಸು
ನಾಕು ಮೂಲೆಗೆ ನಾಕು ಹಣ ಒಂದೇ ಇರಿಸು
ನೆನೆ ಅಕ್ಕಿ ನೆನಗಡಲೆ ತಂದು ನೀನು ಮಡಗು
ಆಭರಣ ಒಡವೆನೆಲ್ಲಾ ನೀ ತಂದು ಸಿಂಗರಿಸು
ನಿಮ್ಮ ದೇವರುಗಳ ನೀನು ನೆನಸಿಕೊಳ್ಳಬೇಕು
ನಮ್ಮ ದೇವರು ನಮ್ಮ ಭಾಗವಲ್ಲವೇನೆ"[೫೪]

ಎಂದು ಹೇಳುತ್ತಾಳೆ. ಇಲ್ಲಿ ಅವಳು ಕಣಿ ಕೇಳುವ ಸಿದ್ಧತೆಗಾಗಿ ಹೇಳುವುದು ಪರಿಶುದ್ಧತೆ ಮತ್ತು ದಿನಬಳಕೆಯ ಸರಳ ವಸ್ತುಗಳನ್ನು ಮಾತ್ರ ಕೇಳುವುದು. ಹೀಗೆ ಕಣಿ ಹೇಳಿದ ಕೊರವಂಜಿ ಕೃಷ್ಣನ ರೂಪವನ್ನು ಧರಿಸಿದರು ರುಕ್ಮಿಣಿ ಗುರುತಿಸದೆ ಮಾಯೆಯೆಂದು ನಾಚಿ ಓಡುತ್ತಾಳೆ.

### ೩.೨.೬. ಕೊರವಂಜಿ ಹಾಡು

ಕಾಪಸೆ ರೇವಪ್ಪನವರು ಸಂಪಾದಿಸಿದ 'ಮಲ್ಲಿಗೆ ದಂಡೆ' ಕೃತಿಯಲ್ಲಿ ಕೊರವಂಜಿಯ ಹಾಡಿದೆ. ಇಲ್ಲಿ ಸೂಳೆ ಹೋದ ಗಂಡನನ್ನು ಸ್ವತಹ ಹೆಂಡತಿಯೇ ಕೊರವಂಜಿಯ ವೇಷವನ್ನು ಹಾಕಿಕೊಂಡು ಹೋಗಿ ಅವನನ್ನು ತಿದ್ದಿ, ಕ್ಷಮಿಸಿ ಮನೆಗೆ ಮರಳಿ ಕರೆದುಕೊಂಡು ಬರುವ ಚಿತ್ರಣವಿದೆ.

ತಾಯಿ ತನ್ನ ಅಣ್ಣನ ಮಗಳನ್ನು ತನ್ನ ಮಗನಿಗೆ ಮದವೆ ಮಾಡಿಕೊಂಡಿರುತ್ತಾಳೆ. ಆದರೆ ಮಗ ಮಡದಿಯನ್ನು ಬಿಟ್ಟು ಸೂಳೆಯ ಮನೆಯಲ್ಲಿಯೇ ವಾಸವಾಗಿದ್ದಾನೆ. ಆತನೊಮ್ಮೆ ಬಂದಾಗ ತಾಯಿ ಆತನಿಗೆ ತನ್ನ ಸೊಸೆಯ ರೂಪ ಗುಣಗಳನ್ನು ವರ್ಣಿಸಿ ಸೂಳೆಯನ್ನು ತೊರೆದು ಮಡದಿಯೊಡನೆ ಸಂಸಾರ ಮಾಡಲು ತಿಳಿಸುತ್ತಾಳೆ. ಆದರೆ ತಾಯಿಯ ಮಾತು ಕೇಳದ ಮಗ ಸೊಸೆಯನ್ನು ತವರಿಗಾದರೂ ಕಳಿಸು, ಬಾವಿಗಾದರೂ ತಳ್ಳು ಎಂದು ಹೇಳಿ ಮತ್ತೆ ಸೂಳೆಯ ಮನೆಗೆ ಮರಳುತ್ತಾನೆ.

ಇದರಿಂದ ನೊಂದ ತಾಯಿ ಅಕ್ಕರೆಯ ಸೊಸೆಯನ್ನು ತವರಿಗೆ ಹೋಗಲು ಹೇಳುತ್ತಾಳೆ. ಆದರೆ ಇದಕ್ಕೆ ಒಪ್ಪದ ಸೊಸೆ ತನಗೆ ಕೊರವಂಜಿ ಬುಟ್ಟಿಯನ್ನು ಕೊಡು, ನಾನು ಹೋಗಿ ಗಂಡನ ಸಮಾಚಾರವನ್ನು ತಿಳಿದು ಬರುತ್ತೇನೆಂದು ತಿಳಿಸುತ್ತಾಳೆ. ಅತ್ತೆ ಕೊಡಿಸಿದ ಕೊರವಂಜಿ ಬುಟ್ಟಿ ತೆಗೆದುಕೊಂಡು ದನಕಾಯುವ ಹುಡುಗರನ್ನು ಕೇಳುತ್ತಾ ತನ್ನ ರಾಯನಿರುವ ರಾಜಪಟ್ಟಣಕ್ಕೆ ಹೋಗುತ್ತಾಳೆ. ಗಂಡನಿಗೆ 'ಸೂಳೆಯರಿಂದ ನಿನಗೆ ಮರಣವಿದೆ' ಎಂದು ಕಣಿ ಹೇಳುತ್ತಾಳೆ. ಗಂಡ ವಶೀಕರಣ ವಿದ್ಯೆಯಿಂದ ನನ್ನ ಹೆಂಡತಿಯನ್ನು ನನ್ನೊಂದಿಗೆ ಕೂಡಿಸು ಎಂದು ಬೇಡಿಕೊಳ್ಳುತ್ತಾನೆ. ಆಗ ತಾನೇ ಆತನ ಹೆಂಡತಿಯೆಂದು ತಿಳಿಸಿ ಪತಿಯನ್ನು ಕರೆದುಕೊಂಡು ಬರುತ್ತಾಳೆ. ಬೆನ್ನ ಹತ್ತಿ ಬಂದ ಸೂಳೆಯನ್ನು ತಿರುಗಿ ನೋಡದ ಹಾಗೆ ಹೊಡೆದು ಹಾಕಿ ತನ್ನ ಗಂಡನನ್ನು ಕರೆದುಕೊಂಡು ಮನೆಗೆ ತೆರಳಿ ಅತ್ತೆಗೆ ಮಗನನ್ನು ಕರೆದಕೊಂಡು ಬಂದ ವಿಷಯ ತಿಳಿಸುತ್ತಾಳೆ.

ಬಹುತೇಕ ಕಾವ್ಯಗಳಲ್ಲಿ ದೇವಾನುದೇವತೆಗಳು ಕೊರವಂಜಿಯ ವೇಷ ಧರಿಸಿ ತಮ್ಮ ಆಪ್ತರಿಗೋ, ಮನದನ್ನೆಯರಿಗೋ ಬಂದ ಸಂಕಷ್ಟಗಳನ್ನು ನಿವಾರಿಸಿ ಅವರ ನೋವನ್ನು ಪರಿಹರಿಸುತ್ತಾರೆ. ಆದರೆ ಈ ಜನಪದ ಕಾವ್ಯದಲ್ಲಿ ಕೊರವಂಜಿ ವೇಷ ಧರಿಸುವುದು ಜನಪದ ಗರತಿ. ಅವಳು ವೇಷಧರಿಸುವದು ತನಗೆ ಬಂದ ಸಮಸ್ಯೆಯನ್ನು ಪರಿಹರಿಸಿಕೊಳ್ಳುವುದಕ್ಕಾಗಿ. ದೇವಾನು ದೇವತೆಗಳು ಸಹ ತಮ್ಮ ಸಂಕಟಕಾಲದಲ್ಲಿ ಮತ್ತೊಬ್ಬರ ಮೊರೆ ಹೋಗುತ್ತಾರೆ. ಆದರೆ ಇಲ್ಲಿ ಸಾಮಾನ್ಯ ಹೆಣ್ಣುಮಗಳು ತನ್ನ ಸಮಸ್ಯೆ ನಿವಾರಣೆಗೆ ಇತರರ ಮೊರೆ ಹೋಗದೆ ತಾನೇ ಖುದ್ದಾಗಿ ಪರಿಹಾರ ಕಂಡುಕೊಳ್ಳುತ್ತಾಳೆ. ಸೊಸೆಯ ನೋವನ್ನು ನೋಡದ ಅತ್ತೆ ಅವಳನ್ನು ತವರಿಗೆ ಕಳಿಸಲು ಸಿದ್ಧವಾದಾಗ

> "ಅಣ್ಣ್ಯಾರ ತಮ್ಮ್ಯಾರ ತಾಯ್ಯಾರ ತಂದ್ಯಾರ,
> ಅಣ್ಣಾನ್ಹೆಂಡಾರೊಂದವರ್‍ಯಾರತ್ತೆವ್ವಾ

ಹೋಗ್ಲಾರೆ ತವರ್ಮನಿಽಗೆ। ಅತ್ತೆವ್ವಾ ।
ಹೋಗ್ಲಾರೆ ತವರ್ಮನಿಽಗೆ"[೫೫]

ಎಂದು ಮದುವೆಯಾದ ನಂತರ ಹೆಣ್ಣಿಗೆ ಗಂಡನ ಮನೆಯೇ ಸ್ಥಿರ ಉಳಿದವರ್‍ಯಾರು. ಸಂಬಂಧವಲ್ಲ. ಒಂದು ವೇಳೆ ಕಳ್ಳುಬಳ್ಳಿ ಸಂಬಂಧದಿಂದ ಅಣ್ಣ ತಮ್ಮ ತಂದೆ ತಾಯಿ ಒಪ್ಪಿದರೂ ಅಣ್ಣನ ಹೆಂಡರು ಹೊಂದಿಕೊಳ್ಳುವುದಿಲ್ಲ. ಹಾಗಾಗಿ ತವರಿಗೆ ಹೋಗದೆ ಗಂಡನನ್ನು ಸೂಳೆಯಿಂದ ಬಿಡಿಸಿ ತರುವ ದಿಟ್ಟ ನಿರ್ಧಾರಕ್ಕೆ ಬರುತ್ತಾಳೆ. ತನ್ನ ಸಮಸ್ಯೆ ಪರಿಹಾರಕ್ಕಾಗಿ

"ದನಕಾಯೋ ಅಣ್ಣಗಳಿರ್‍ಯಾ ಎನ್ನಮ್ಮ!
ದನಕಾಯೋ
ತಮ್ಮಗಳಿರ್‍ಯಾ ಎನ್ನಮ್ಮ ದನಕಾಯೋ ಅಣ್ಣಗಳಿರ್‍ಯಾ
ರಾಯ್ಯರ ಇರುವುದು ರಾಜಪಟ್ಟಣದ್ದಾದಿ ದಾವದೊಂದ್ಹೇಳಿ
ಕೊಡಿರಿ"[೫೬]

ಎಂದು ಊರೂರು ಬೀದಿಬೀದಿ ತಿರುಗಾಡಿ ತನ್ನ ಗಂಡನಿರುವ ಪಟ್ಟಣ ಅರಸುತ್ತಾಳೆ. ಗಂಡನನ್ನು ಕಂಡ ಗರತಿ

ಆ ನಾಡದ ಕೊರಿವ್ಯಲ್ಲ ಈ ನಾಡದ ಕೊರಿವ್ಯಲ್ಲ ।
ದೇವಲೋಕದ
ಕೊರಿವಿದ್ದೊ ಜಾಣ ನಾ।
ದ್ಯಾವಾರ್ದೇಳತೇನೋ । ಸುಳ್ಯಾರು ।
ಮಾಡೇರೆ ಹೊಡಿತಾರೊ"[೫೭]

ಎಂದು ಸೂಳೆಯರ ಸಹವಾಸ ಒಳ್ಳೆಯದಲ್ಲ. ಅವರಿಂದ ಎಂದೂ ಕಷ್ಟ ತಪ್ಪಿದಲ್ಲ ಎಂದು ಸಂಸಾರ ಸರಿಪಡಿಸಿಕೊಳ್ಳಲು ಬುದ್ಧಿಮಾತುಗಳನ್ನು ಹೇಳುತ್ತಾಳೆ. ಬುದ್ಧಿ ತಿಳಿದ ಗಂಡ 'ಹೆಂಡತಿ ಬಿಟ್ಟು ಹನ್ನೆರಡು ವರುಷಾಯ್ತು, ಕೈಯ್ಯಾರೆ ಜೋಡಸ್ತೀನ ಕಾಲಾರ ಬಿಳುವೆ। ಅವಳ ಜೊತೆ ಸೇರಿಸು' ಎಂದು ಅವಳನ್ನು ಬೇಡಿಕೊಳ್ಳುತ್ತಾನೆ. ಕೊರವಂಜಿ ವೇಷದ ಹೆಣ್ಣುಮಗಳು

"ನನ ಕಾಲ ಬೀಳಲಕ ನನ್ನ ಕೈ ಜೋಡಿಸಲಕ।
ಯಾರೀಗಿ ಯೇನ್ಽ ಮಾಡಿದಿ
ಮಾರಾಯ।
ಹೋಗೊನು ನಡೀರಿ। ಮಾರಾಯ।
ಹೋಗೊನ ನಡೀರಿ"[೫೮]

ಎಂದು ಅವನನ್ನು ಕರೆದುಕೊಂಡು ಮನೆಯತ್ತ ಸಾಗುತ್ತಾಳೆ. ಹನ್ನೆರಡು ವರ್ಷ ತನ್ನನ್ನು ಬಿಟ್ಟು ಸೂಳೆಯ ಸಹವಾಸ ಮಾಡಿದ್ದು ಅವಳಿಗೆ ದೊಡ್ಡತಪ್ಪಲ್ಲ. ತನ್ನನ್ನು ತೊರೆದದ್ದರ ಬಗ್ಗೆ ಅವಳಿಗೆ ನೋವಿದೆ. ಆದರೆ ಆ ತಪ್ಪಿಗೆ ಶಿಕ್ಷೆ ಕೊಡುವ ಗುಣ ಅವಳದಲ್ಲ. ಗಂಡ ತಪ್ಪನ್ನು ತಿದ್ದಿಕೊಂಡು

ಸರಿದಾರಿಗೆ ಬರುವುದು ಮುಖ್ಯ ಹೊರತು, ಅದಕ್ಕೆ ಶಿಕ್ಷೆ ಕೊಟ್ಟು ಅವನನ್ನು ದಂಡಿಸುವುದು ಅಥವಾ ತೊರೆಯುವುದು ಮುಖ್ಯವಲ್ಲ. ತಪ್ಪು ಮಾಡಿದವರನ್ನು ತಿದ್ದಿ ಸ್ವೀಕರಿಸುವ ತಾಯಿ ಮನಸ್ಸು ಈ ಕೊರವಂಜಿಯದು.

**೩.೨.೭. ಕೊರಾಚಿ ಕಂಚಿ**

ಕೃಷ್ಣಮೂರ್ತಿ ಹನೂರು ಅವರು ಸಂಪಾದಿಸಿದ ಜನಪದ ಮತ್ತು ಬುಡಕಟ್ಟು ಗೀತೆಗಳು ಕೃತಿಯಲ್ಲಿ 'ಕೊರಾಚಿ ಕಂಚಿ' ಕಥನ ಕಾವ್ಯವಿದೆ. ಇಲ್ಲಿ 'ಮಹಾಲಕ್ಷ್ಮೀ ಅಮ್ನೋರು' ತನ್ನ ಪತಿ ನಾರಾಯಣನಿಂದ ಕಷ್ಟಕ್ಕೆ ಸಿಲುಕಿದ 'ಕೊರಾಚಿ ಕಂಚಿ'ಯನ್ನು ಬಿಡಿಸಲು ಅವಳ ಬಟ್ಟೆಯನ್ನು ಧರಿಸಿ ಕೊರವಂಜಿಯಾಗಿ ಹೋಗುತ್ತಾಳೆ.

ಕೊರವರ ಕಂಚಿ ಮನೆಕೆಲಸ ಮುಗಿಸಿ ತನ್ನ ಕೊರವ ಜಾತಿಯ ವೃತ್ತಿಯಾದ ಕಸಬರಿಗೆ, ನೆಲುವು, ಸಿಂಬೆ ಮಾಡುವುದಕ್ಕಾಗಿ ಬಿದಿರು, ಹುಲ್ಲು ತರಲು ಗುಡ್ಡಕ್ಕೆ ಹೋಗುತ್ತಾಳೆ. ಅಲ್ಲಿ ತನ್ನ ಬುಟ್ಟಿ ಇಳಿದು ಗಿಡದ ಹಿಂದಿರುವ ಮಿಳೆನಾರನ್ನು ಕಡಿಯುತ್ತಿರುತ್ತಾಳೆ. ಆಗ ಅಲ್ಲಿ ಬಂದ ನಾರಾಯಣಸ್ವಾಮಿ

"ಇಲ್ಲುಬಾರೆ ಕಂಚಿ ನೀನು ಒಂದ್ ಎಲೀನಾರು ತಿನ್ವನಾ"[೫೯]

ಎಂದು ಎಲೆ ತಿನ್ನುವ ನೆಪದಲ್ಲಿ ಸರಸಕ್ಕೆ ಆಹ್ವಾನಿಸುತ್ತಾನೆ. ಕಂಚಿ ನಮ್ಮ ಜಾತಿಯವರ ಸುಣ್ಣ ನೀವು ತಿನ್ನಬಾರದು ಎಂದು ಹೇಳಿದಾಗ ಚಿಪ್ಪಿನ ಸುಣ್ಣಕ್ಕೆ, ಚಪ್ಪರದ ಎಲೆಗೆ ಜಾತಿಯೆಲ್ಲಿ ಎನ್ನುವ ಮೂಲಕ ಅವಳನ್ನು ಮತ್ತೆ ಕರೆಯುತ್ತಾನೆ. ನನ್ನ ಗಂಡ ಬರುವ ಹೊತ್ತಾಯ್ತು ಅವನಿಗೆ ಗಂಜಿ ಹಾಕಿ ಬರುವೆ ಎಂದು ಹೇಳಿ, ಹಾಗೆ ನಿಮ್ಮ ಮೇಲೆ ನನಗೆ ಭರವಸೆ ಇಲ್ಲ ನಿಮ್ಮ ಮುದ್ರೆ ಉಂಗುರ ಕೊಡಿ ನಾನು ಬರುವವರೆಗೆ ಇಲ್ಲಿ ಕೂಡಿ ಎಂದು ಅವನಿಂದ ಮುದ್ರೆ ಉಂಗುರ ಇಸಿದುಕೊಂಡು ಹೋಗುತ್ತಾಳೆ.

ನೇರವಾಗಿ ನಾರಾಯಣಸ್ವಾಮಿ ಪತ್ನಿಯಾದ ಮಾಲಕ್ಷ್ಮಿ ಅಮ್ನೋರ ಹತ್ತಿರ ಹೋಗಿ ಮುದ್ರೆ ಉಂಗುರ ತೋರಿಸಿ ನಡೆದ ವಿಷಯ ತಿಳಿಸಿ ನೀವೆ ನಿಮ್ಮ ಗಂಡನ ಹತ್ತಿರ ನನ್ನ ವೇಷದಲ್ಲಿ ಹೋಗಿ ಎಂದು ಅವಳಿಗೆ ತನ್ನ ವೇಷ ತೊಡಿಸಿ ಕಳಿಸುತ್ತಾಳೆ. ಕೊರವಿ ವೇಷದಲ್ಲಿ ನಾರಾಯಣಸ್ವಾಮಿಯನ್ನು ಸೇರಿದ ಮಾಲಕ್ಷ್ಮಿ ನನ್ನ ಗಂಡ ಬರುವ ಹೊತ್ತಾಯ್ತೆಂದು ಮನೆಗೆ ಬರುತ್ತಾಳೆ. ನಂತರ ಬಂದ ನಾರಾಯಣಸ್ವಾಮಿಯನ್ನು ಒಳಬಿಡದೆ ತಡೆಯುತ್ತಾಳೆ. ಕಾರಣ ಕೇಳಿದಾಗ ನೀವು ಹೊಲೆ ಹೋಗಿದ್ದಿರಿ, ಕಂಚಿಯೇ ನನಗೆ ಹೇಳಿದ್ದಾಳೆ. ಸುಳ್ಳೆಂದರೆ ಮುದ್ರೆ ಉಂಗುರ ತೋರಿಸಿ ಎನ್ನುತ್ತಾಳೆ. ನಂತರ ಏಳು ಹಳ್ಳಿ ಕಟ್ಟೇಕು, ಏಳು ಹಳ್ಳಿ ಸುಡ್ಬೇಕು, ಏಳು ಜಾತಿ ಸೊಪ್ಪುಸೋರೆ ಬಿಡಬೇಕು ಇದು ನಿಮ್ಮ ಅರೆಜಾತಿಗೆ ಲೆಕ್ಕ ಎಂದು ಆತನಿಗೆ ಶಿಕ್ಷೆ ಕೊಡುತ್ತಾಳೆ.

ಇಡೀ ಕಾವ್ಯ ಸಮಾಜದ ಜಾತಿವ್ಯವಸ್ಥೆಯ ಚಿತ್ರಣ ನೀಡುತ್ತದೆ. ಮೇಲ್ಜಾತಿಯ ನಾರಾಯಣ ಎಲೆ ತಿನ್ನಲು ಕರೆದಾಗ ಕಂಚಿಯು ಹೇಳುವ

"ನಾ ಕೊರ್‍ರ ಕಂಚಿ ಎಂಬಳು

ನಾ ಕೊಟ್ ಸುಣ್ಣವ

ನೀವಾರು ತಿನ್ಸ್ ಬಾರ್‍ದು"[೬೦]

ಎಂಬ ಮಾತು ಕೆಳಜಾತಿಯ ಮೇಲ್ಜಾತಿಯ ನಡುವೆ ಕೊಡು ತೆಗೆದುಕೊಳ್ಳುವ ವ್ಯವಹಾರ ಇರಲಿಲ್ಲ. ಸಮಾಜದಲ್ಲಿರುವ ಮೇಲ್ಜಾತಿಯವರು ಕೆಳಜಾತಿಯವರನ್ನು ಕೀಳಾಗಿ ನಡೆಸಿಕೊಳ್ಳುವ ಸ್ಥಿತಿಯನ್ನು ತಿಳಿಸುತ್ತದೆ. ಆದರೆ ನಾರಾಯಣ

"ಚಿಪ್ಪೆಯ ಸುಣ್ಣವೂ

ಚಪ್ಪರದ ಬೆಳೆಯೆಲಿ

ವಾಜಿಲ್ಲೆ ಕಂಚಿ ತಿಂಬೋವಾ"[೬೧]

ಎಂದು ಸುಣ್ಣ ಹಾಗೂ ಎಲೆಗೆ ಜಾತಿ ಇಲ್ಲ ಎನ್ನುತ್ತಾನೆ. ಜಾತಿ, ವರ್ಗ, ವರ್ಣವ್ಯವಸ್ಥೆಯನ್ನು ಸೃಷ್ಟಿಸಿದ ಮೇಲ್ಜಾತಿಯ ನಾರಾಯಣನೇ ಇಲ್ಲಿ ಜಾತಿ ವ್ಯವಸ್ಥೆಯನ್ನು ಮುರಿಯಲು ಮುಂದಾಗುತ್ತಿದ್ದಾನೆ. ಆತ ಈ ವ್ಯವಸ್ಥೆಯನ್ನು ಮೀರಿ ಬರುವುದು ಕೇವಲ ತನ್ನ ಲೈಂಗಿಕ ಆಪೇಕ್ಷೆಯಿಂದ ಮಾತ್ರವೇ ಹೊರತು ಜಾತಿವ್ಯವಸ್ಥೆಯನ್ನು ಕಿತ್ತು ಹಾಕುವ ಅಥವಾ ಕೆಳಜಾತಿಯವರನ್ನು ಗೌರವದಿಂದ ಕಾಣುವ ಭಾವನೆಯಿಂದಲ್ಲ. ಇದನ್ನರಿತ ಕೊರವಂಜಿ ಅವನಿಂದ ತಪ್ಪಿಸಿಕೊಳ್ಳಲು ಪ್ರತಿತಂತ್ರ ಹೂಡುತ್ತಾಳೆ.

ನಾರಾಯಣನ ಹೆಂಡತಿ ಮಾಲಕ್ಷ್ಮೀಯೂ ಜಾತಿವಾದಿಯೇ ತನ್ನ ಗಂಡ ಬೇರೆ ಜಾತಿಯವಳ ಸಂಗ ಮಾಡಿದ್ದಾನೆಂದು ಗಂಡನಿಗೆ ಏಳು ಹಳ್ಳಿ ಸುಡ್ಬೇಕು, ಏಳು ಹಳ್ಳಿ ಕಟ್ಬೇಕು, ಏಳುಸೊಪ್ಪು ಸೊದೆ ಬಿಡ್ಬೇಕು ಎಂದು ಶಿಕ್ಷೆ ನೀಡುತ್ತಾಳೆ. ಆದರೆ ಅವಳು ಈ ಜಾತಿವ್ಯವಸ್ಥೆಯನ್ನು ಮೀರಿ ಕೆಳಜಾತಿಯ ಹೆಣ್ಣುಮಗಳು ಉಟ್ಟುಬಿಟ್ಟ ಬಟ್ಟೆಯನ್ನು ಧರಿಸಿ ಅವಳ ರಕ್ಷಣೆಗೆ ಧಾವಿಸುತ್ತಾಳೆ. ಇಲ್ಲಿ ಮಾಲಕ್ಷ್ಮೀ ಜಾತಿವ್ಯವಸ್ಥೆ ಮೀರುವದು ತನ್ನ ಆಸೆ ಈಡೇರಿಸಿಕೊಳ್ಳುವ ಸ್ವಾರ್ಥದಿಂದಲ್ಲ. ಜಾತಿ, ಪ್ರತಿಷ್ಠೆ, ಶ್ರೀಮಂತಿಕೆಯನ್ನು ಮೀರಿದ ಮಾನವೀಯತೆ ಅವಳಲ್ಲಿರುವುದರಿಂದ. ಇದರಿಂದ ತನ್ನಂತೆ ಇರುವ ಮತ್ತೊಬ್ಬ ಹೆಣ್ಣುಮಗಳ ರಕ್ಷಣೆಗಾಗಿ ಧಾವಿಸುತ್ತಾಳೆ. ಜಾತಿ, ಅಂತಸ್ತಿನಿಂದ ಮೇಲಿರುವ ಪುರುಷ ಯಾವತ್ತಿಗೂ ತನ್ನ ಕೆಳಗಿನವರ ಮೇಲೆ ಅಧಿಕಾರ ಚಲಾಯಿಸಲು ಯತ್ನಿಸುತ್ತಾನೆ. ಆದರೆ ಹೆಣ್ಣುಮಗಳು ತನಗಿಂತ ಕೆಳಗಿರುವ ಹೆಣ್ಣುಮಗಳ ಮೇಲೆ ಅಧಿಕಾರ ಚಲಾಯಿಸುವುದಕ್ಕಿಂತ ಅವಳ ಜೊತೆ ಸ್ನೇಹದಿಂದಿರುವ, ಅವಳ ಕಷ್ಟ ಸುಖಗಳಿಗೆ ಸ್ಪಂದಿಸುವ ಮನೋಭಾವ ಹೊಂದಿರುತ್ತಾಳೆ. ಇಲ್ಲಿ ಮಾಲಕ್ಷ್ಮೀ ಅಮ್ನೋರಿಗೆ ತನ್ನ ಗಂಡ ಅನ್ಯ ಹೆಣ್ಣಿನ ಸ್ನೇಹ ಮಾಡುವುದರಿಂದ ತಪ್ಪಿಸುವ ಪ್ರಯತ್ನದ ಜೊತೆಗೆ ಕೊರವಂಜಿಯನ್ನು ರಕ್ಷಿಸುವ ಉದ್ದೇಶವು ಇದೆ. ಹೆಣ್ಣು ಹೆಣ್ಣಿನ ಸಮಸ್ಯೆಗ ಸ್ಪಂದಿಸುವ ಈ ನೆಲದ ಸಂಸ್ಕೃತಿಯೇ ಇದಕ್ಕೆ ಕಾರಣವಿರಬಹುದು.

ಇಲ್ಲಿ ಕಂಚಿ ತನಗೊದಗಿದ ಕಷ್ಟಕ್ಕೆ ತನ್ನ ಗಂಡ ಅಥವಾ ದೇವರ ಮೊರೆ ಹೋಗುವದಿಲ್ಲ. ಒಂದು ವೇಳೆ ಗಂಡನ ಹತ್ತಿರ ಹೋಗಿದ್ದರು ಮೇಲ್ಜಾತಿಯವನೊಂದಿಗೆ ವಿರೋಧ ಕಟ್ಟಿಕೊಂಡು ಅವನು ಹೆಂಡತಿಯನ್ನು ರಕ್ಷಿಸುವ ಸಾಧ್ಯತೆ ಇರಲಿಲ್ಲ. ಹೀಗಾಗಿ ಕೊರವಂಜಿ ತಾನೇ ತನ್ನ ರಕ್ಷಣೆಗೆ

ಮುಂದಾಗುತ್ತಾಳೆ. ತನ್ನ ಧೈರ್ಯ, ಬುದ್ಧಿಯ ಮೂಲಕ ತನಗೊದಗಿದ ಸಮಸ್ಯೆಯನ್ನು ತಾನೇ ನಿವಾರಿಸಿಕೊಳ್ಳುತ್ತಾಳೆ. ನಾರಾಯಣಸ್ವಾಮಿಯಂಥೋರಿಗೆ ಮತ್ತೊಮ್ಮೆ ಹಾದಿ ತಪ್ಪದಂತೆ ಪಾಠವನ್ನು ಕಲಿಸುತ್ತಾಳೆ.

### ೩.೨.೮. ಸಾಲು ಸಂಪಿಗೆಯ ನೆರಳು

ಕಾಳೇಗೌಡ ನಾಗವಾರ ಅವರು ಸಂಪಾದಿಸಿದ ಸಾಲು ಸಂಪಿಗೆಯ ನೆರಳು ಕೃತಿಯಲ್ಲಿ ಕೊರವಂಜಿ ಪದ್ಯವಿದೆ. ಇಲ್ಲಿಯ ಕೊರವಂಜಿ ಬೀದಿ ಬೀದಿ, ಕೇರಿಕೇರಿ ಸುತ್ತುತ್ತಾ ಕಣಿ ಹೇಳುತ್ತಾ ಹೋಗುತ್ತಾಳೆ. ಕಾಸು, ಆನೆ, ಒಂಟೆ ಮುಂತಾದ ಬೆಲೆಬಾಳುವ ವಸ್ತುಗಳನ್ನು ಕೊಟ್ಟೆವು ಕಣಿ ಹೇಳು ಬಾ ಎಂದಾಗ, ಅವೆಲ್ಲ ನನಗೆ ತುಚ್ಚ ವಸ್ತುಗಳೆಂದು ನಿರಾಕರಿಸುತ್ತಾಳೆ. ಕಣಿ ಕೇಳುವವರ ಅನಾರೋಗ್ಯಕ್ಕೆ ಏನು ಕಾರಣವೆಂಬುದನ್ನು ತಿಳಿಸುತ್ತಾಳೆ. ಕಾಸು, ಒಂಟಿ, ಆನೆ ಕೊಡುವೆವೆಂದು ಹೇಳಿದಾಗ

"ಕಾಸು ನಮ್ಮನೆಯ ಮುತ್ತಿನ ರಾಶಿ। ಕಾಣು
ಒಂಟೆ ನಮ್ಮನೆಯ ಕುಂಟೆಮ್ಮೆ ಹಿಂಡು । ಕಾಣು
ಆನೆ ನಮ್ಮನೆಯ ಆಡಿನ ಹಿಂಡು । ಕಾಣು"[೬೨]

ಎಂಬ ಮಾತು ಸಂಪತ್ತು ಹಾಗೂ ಅಂತಸ್ತುಗಳ ನಿರಾಕರಣೆಯನ್ನು ಸೂಚಿಸುತ್ತದೆ. ಜನರ ಮನಸ್ಸಿನ ನೋವು ನಿವಾರಿಸುವದೇ ಕೊರವಂಜಿಗೆ ಮುಖ್ಯವಾಗಿರುವದನ್ನು ತಿಳಿಸುತ್ತದೆ.

"ಬಡಗಾರ ಸೀಮೆಗೆ ಹೋಗಿದ್ದೆ ಮಗಳೇ
ಬಾಳೀಯ ಮರದಡಿ ಮಲಗಿದ್ದೆ ಮಗಳೇ
ಆ ಬ್ಯಾರ ಗಾಳಿಯು ಬೀಸ್ಯಾದೆ ಮಗಳೇ"[೬೩]

ಎಂದು ಕೊರವಂಜಿ ಮಾತು ಅನಾರೋಗ್ಯಕ್ಕೆ ಗಾಳಿ, ಭೂತ, ದೆವ್ವ ಕಾರಣವೆಂಬ ನಂಬಿಕೆ ತಿಳಿಸುತ್ತದೆ. ಆತ್ಮೀಯತೆಯ ಮೂಲಕ ರೋಗ ನಿವಾರಿಸುವ ಪ್ರಯತ್ನವು ಅವಳ ಮಾತಿನಲ್ಲಿದೆ.

### ೩.೨.೯. ಎಲ್ಲಮ್ಮನ ಕತೆ

ಡಾ. ಜಿ.ಶಂ. ಪರಮಶಿವಯ್ಯ ಅವರು ಸಂಪಾದಿಸಿದ 'ಕರುಣಿ ಕಣ್ಣು ತೆರೆಯೆ' ಕೃತಿಯಲ್ಲಿ ಚೌಡಿಕೆ ಸಂಪ್ರದಾಯದ ಎಲ್ಲಮ್ಮನ ಕತೆ ಇದೆ. ಇಲ್ಲಿ ಒರಂಗಲ್ಲಿನ ರಾಜನ ಅಹಂಕಾರ ಅಳಿಸಲು ಅವನಿಗೆ ರೋಗ ತಂದಿತ್ತ ಎಲ್ಲಮ್ಮ, ಅದರ ನಿವಾರಣೋಪಾಯ ತಿಳಿಸಲು ಕೊರವಂಜಿ ವೇಷ ಧರಿಸುತ್ತಾಳೆ.

ನೆಲದುರ್ಗದ ಶಿವಶರಣೆ ಮಲ್ಲಜಮ್ಮನಿಗೆ ಜಂಗಮವೇಷದಲ್ಲಿ ಬಂದ ಪರಮೇಶ್ವರ ಕೊಟ್ಟ ಮೂರು ಕುಂಬಳ ಬೀಜದಲ್ಲಿ ಒಂದು ಬೆಳೆದು ಹಣ್ಣಾದಾಗ ಅವಳು ಸಾಧುಸತ್ಪುರುಷರಿಗೆ ದಾನ ಮಾಡುತ್ತಾಳೆ. ಕುಂಬಳಕಾಯಿ ಒಡೆದಾಗ ಒಂದು ಭಾಗದಲ್ಲಿ ಶತಕೋಟಿ ಲಿಂಗ, ಮತ್ತೊಂದು ಭಾಗದಲ್ಲಿ ೩ಕೋಟಿ ಲಿಂಗವನ್ನು ಮೈಯಲ್ಲುಳ್ಳ ಶಿಶುವಿರುತ್ತದೆ. ಮುಂದೆ ಆ ಮಗು ಬೆಳೆದು

ಒರಂಗಲ್ಲಿನ ರಾಜನಾಗಿ ಸಕಲದೇವತೆಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡು ಸೇವೆ ಮಾಡಿಸಿಕೊಳ್ಳ ತೊಡಗುತ್ತಾನೆ. ನಾರಾಯಣ ಒರಂಗಲ್ಲಿನ ರಾಜನ ಪ್ರತಾಪ ತಗ್ಗಿಸಲು ಏಳು ಸಮುದ್ರದ ಆಚೆಯಿರುವ ಯಲ್ಲಮ್ಮನ ಬಗ್ಗೆ ತಿಳಿಸಿ ಅವನಲ್ಲಿ ಲಗ್ನದ ಆಸೆ ಹುಟ್ಟಿಸಿದ. ರಾಜ ಅವಳನ್ನು ಹುಡುಕಿ ತರಲು ಜನರನ್ನು ಕಳಿಸಿದ. ಹುಡುಕುತ್ತಾ ಹೋದವರೆಲ್ಲ ಮರಣ ಹೊಂದಿ ಪಕ್ಷಿ ಮುಖಾಂತರ ರಾಜ ಬರೆದ ಓಲೆ ಯಲ್ಲಮ್ಮನಿಗೆ ಸಿಗುತ್ತದೆ. ಕೋಪಗೊಂಡ ಯಲ್ಲಮ್ಮ ಒರಂಗಲ್ಲ ಪಟ್ಟಣವನ್ನು ನೋಡಿ ಬರುವೆನೆಂದು ಹೊರಡುತ್ತಾಳೆ. ಹಾದಿಯಲ್ಲಿ ಮಾತಂಗಿ ಶಿಷ್ಯೆಯಾಗುತ್ತಾಳೆ. ಹಾದಿಯಲ್ಲಿ ಮಾತಂಗಿ ಸುರೆ ಕುಡಿಯಲು ಮಾರ್ತಾಂಡಗೌಡನ ಈಚಲವನಕ್ಕೆ ಹೋಗಿ ತನ್ನಲ್ಲಿ ಲಿಂಗವಿರದಕ್ಕೆ, ಅವನಿಂದ ಬಡಿಸಿಕೊಂಡು ಬರುತ್ತಾಳೆ. ಆತನ ತಮ್ಮ ಒಡ್ಡೆಲ್ಲೆಗೌಡ ಮಾತ್ರ ಮಾತಂಗಿಯನ್ನು ಸತ್ಕರಿಸಿ ಅವಳಿಂದ ಶ್ರೀಮಂತಿಕೆ ಸುಖದ ಆಶೀರ್ವಾದ ಪಡೆಯುತ್ತಾನೆ.

ಒರಂಗಲ್ಲ ಪಟ್ಟಣದ ಕಡೆಗೆ ಹೊರಟ ಎಲ್ಲಮ್ಮ ಸಕಲದೇವತೆಗಳನ್ನು ಕಲೆಹಾಕಿ ಕೋಣಾಸುರನನ್ನು ಸಂಹರಿಸಲು ಯತ್ನಿಸುತ್ತಾಳೆ. ರಕ್ತದಿಂದ ಕೋಟಿ ರಾಕ್ಷಸರು ಹುಟ್ಟಿದಾಗ ಯಲ್ಲಮ್ಮನ ತಮ್ಮ ಒಯ್ಯಾಳಿಪಾತಾರಲಿಂಗ ರಾಕ್ಷಸರನ್ನು ಬಾಯಲ್ಲಿ ಹಾಕಿಕೊಂಡು ಕಚಕಚನೆ ಅಗೆದು, ಸೂರ್ಯಮಂಡಲ ಚಂದ್ರಮಂಡಲದವರೆಗೆ ಬೆಳೆದ ಯಲ್ಲಮ್ಮನ ಉಡಿಯಲ್ಲಿ ಉಗುಳುತ್ತಾನೆ. ನಂತರ ಮಾತಂಗಿಯೊಡನೆ ಒರಂಗಲ್ಲಿನ ಉದ್ಯಾನವನದಲ್ಲಿ ಯಲ್ಲಮ್ಮ ಕಾಣಿಸಿಕೊಂಡಾಗ ರಾಜ ಅವಳನ್ನು ಎಳೆತರುವಂತೆ ಆಳುಗಳಿಗೆ ಆಜ್ಞೆಮಾಡುತ್ತಾನೆ. ಮಾತಂಗಿಯನ್ನು ಮರದ ಮೇಲೆ ಕೂಡಿಸಿದ ಯಲ್ಲಮ್ಮ ಉರಿಭಂಡಾರವನ್ನು ಅವನಿಗೆ ಎರಚಲು ಮಾಯದ ರೋಗ ಬರುತ್ತದೆ. ಪರಿವಾರದ ದೇವತೆಗಳೆಲ್ಲ ಜಾರಿದಾಗ, ಕಣಿಯವರನ್ನು ಕರೆತರುವಂತೆ ರಾಜ ಹೇಳುತ್ತಾನೆ. ಕೊರವಂಜಿ ರೂಪ ತಾಳಿದ ಯಲ್ಲಮ್ಮ ನೀನು ಎಲ್ಲಮ್ಮನಿಗೆ ಓಲೆ ಬರೆದುದರ ಫಲ. ಪರಿಹಾರವಾಗಬೇಕೆಂದರೆ ಮೈಮೇಲಿನ ಶತಕೋಟಿ ಲಿಂಗ ತೆಗೆದು ಎಲ್ಲಮ್ಮನಿಗೆ ಒಕ್ಕಲಾಗಬೇಕೆಂದು ಹೇಳುತ್ತಾಳೆ. ಅವಳು ಹೇಳಿದ "ಏಳುಕೋಟಿ ಎಕ್ಕಲ್ವೆ ಉಘೇ" ಎಂದಾಗ ರೋಗಗಳು ಅಳಿಯುತ್ತವೆ. ದೇವಿ ನಿಜರೂಪ ನೋಡಬೇಕೆಂದಾಗ ಮೊದಲ ದುರ್ಗಿಯ ರೂಪ ತೋರಿಸಿ ನಂತರ ಕುಮಾರಿ ರೂಪ ತೋರಿಸಿ ದುಷ್ಟ ಶಿಕ್ಷಣ, ಶಿಷ್ಟ ರಕ್ಷಣೆಗಾಗಿ ಏಳುಕೊಳ್ಳದಲ್ಲಿ ನೆಲೆಸುವೆ ನೀನು ನನ್ನ ಪರಮ ಭಕ್ತನಾಗಬೇಕೆಂದು ಹೇಳುತ್ತಾಳೆ.

ಅಹಂಕಾರಿಯಾದ ಒರಂಗಲ್ಲಿನ ರಾಜ ಸಕಲದೇವತೆಗಳಿಂದ ಸೇವೆ ಮಾಡಿಸಿಕೊಳ್ಳುತ್ತಿರುತ್ತಾನೆ. ಜೊತೆಗೆ ದೇವಿಯಾದ ಯಲ್ಲಮ್ಮನನ್ನು ಮೋಹಿಸುತ್ತಾನೆ. ಇವನು ಉದ್ಯಾನವನದಲ್ಲಿಂದ ಯಲ್ಲಮ್ಮನನ್ನು ಎಳೆದು ತರಲು ಹೇಳುತ್ತಾನೆ. ಇಂತಹ ರಾಜನ ಅಹಂಕಾರವನ್ನು ಮುರಿಯಲು ಯಲ್ಲಮ್ಮ ಉರಿಯ ಭಂಡಾರ ಎಂಬ ರೋಗ ಬರುವ ಹಾಗೆ ಮಾಡುತ್ತಾಳೆ. ರೋಗ ನಿವಾರಣೆಗೆ ಕಣಿ ಕೇಳಲು ಹೊರಟಾಗ ಅವನ ತಪ್ಪಿನ ಅರಿವು ಮಾಡಿಸಲು ತಾನೇ ಕೊರವಂಜಿ ವೇಷ ಧರಿಸಿ ಬರುತ್ತಾಳೆ. ಸಾವಿಲ್ಲದ ವರ ಪಡೆದ ನಿನಗೆ ಹುಣ್ಣು ರೋಗಕ್ಕೆ ಬೇರೆ ಕಾರಣವೆ ಇದೆ ಎಂದು

"ಅವಳು ಉತ್ತರ ದೇಶದ ಹೆಣ್ಣಂತೆ
ಮಣಿಗಾಳಿಟ್ಟು ಸಾರುತ ಬಂದಳಂತೆ

ಅವಳು ಭಂಡಾರದ ದೇವಿಯಂತೆ
ಅವಳನ್ನು ನೀನು ಮೋಹಿಸಿದಿಯಂತೆ
ಉತ್ತರ ದೇಶದವಳಂತೆ
ಎಲ್ಲಿ ಎಂದು ಅವಳ ಹೆಸರಂತೆ
ಅವಳ ಎಳೆತನ್ನಿ ಎಂದು ಹೇಳಿದಿಯಲ್ಲ"[೬೪]

ಎಂದು ಅವನ ರೋಗದ ಕಾರಣ ತಿಳಿಸುತ್ತಾಳೆ. ಕೈಮುಗಿದು ಪರಿಹಾರ ಕೇಳಿದ ರಾಜನಿಗೆ ಪರಿಹಾರ ತಿಳಿಸಿ ಅವನ ಅಹಂಕಾರ, ರೋಗ ಎರಡನ್ನು ಕಳೆದು ಅವನನ್ನು ತನ್ನ ಒಕ್ಕಲನ್ನಾಗಿ ಮಾಡಿಕೊಳ್ಳುತ್ತಾಳೆ.

ಈ ಕಾವ್ಯದಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳ ಸಂಘರ್ಷವಿದೆ. ರಾಜ ಹುಟ್ಟಿದ್ದು

"ಅಂಗೈಯಲ್ಲಿ ಆರುಕೋಟಿ ಲಿಂಗ
ಮುಂಗೈಲಿ ಮೂರು ಕೋಟಿ ಲಿಂಗ
ನೆತ್ತಿ ಮೇಲೆ ಶತಕೋಟಿ ಲಿಂಗ"[೬೫]

ಹೊತ್ತು. ಶಿವ ಕೊಟ್ಟ ಬೂದುಗುಂಬಳ ಬೀಜದಿಂದ ಸಹಸ್ರಲಿಂಗದ ಆ ಶಿಶು ಪರಮಾತ್ಮನೇ ಆಗಿ ಬೆಳೆಯುತ್ತಾನೆ. ತಾನು ಶಿವಪೂಜೆಗೆ ಕುಳಿತಾಗ ನೊಣ ಬಂದು ಹಾರಾಡಿದರೆ ವೃತ ಕೆಡುವದೆಂದು ಅವುಗಳಿಗೂ ಸಹ ಶಿವದಾರ ಹಾಕಿಸಿದವ, ಪಟ್ಟಣದಲ್ಲಿ ಮೃಗಜಾತಿ ವಾಸಮಾಡುತ್ತವೆಂದು "ನಾಯಿಯ ಕೊರಳಿಗೆ ಲಿಂಗಧಾರಣೆ ಬೆಕ್ಕಿನ ಕೊರಳಿಗೆ ಲಿಂಗಧಾರಣೆ"[೬೬] ಮಾಡಿಸಿದಾತ

ಇಂತಹ ಶಿವಭಕ್ತನ ಭಕ್ತಿಯನ್ನು ನಾಶಮಾಡಲು ನಾರಾಯಣ ಯಲ್ಲಮ್ಮನೇ ನಿನಗೆ ಸೂಕ್ತ ಹೆಣ್ಣು ಎಂದು ಹೇಳಿ ಯಲ್ಲಮ್ಮನಿಗೆ ಇವನ ಮುಖಾಂತರ ಓಲೆ ಬರೆಯಿಸಿ ಅವಳು ಅವನ ನಾಶ ಮಾಡಲು ಬರುವ ಹಾಗೆ ಮಾಡುತ್ತಾನೆ. ಅವನಿಗೆ ರೋಗ ತಂದಿತ್ತ ಯಲ್ಲಮ್ಮ ಕೊರವಂಜಿಯಾಗಿ ಅವನಿಗೆ ಪರಿಹಾರ ಹೇಳುವಾಗ

"ಏನೊಂದು ಬೇಕಾಗಿಲ್ಲ ನಿನ್ನ ಶತಕೋಟಿ ಲಿಂಗವನ್ನು ತೆಗೆಯಬೇಕಂತೆ
ಪ್ರಪಂಚಕೆ ಬಿಡಬೇಕಂತೆ, ಪ್ರಪಂಚಕ್ಕೆ ಯಾವ ಮೃಗವಾದರೂ
ತೆಗೆದುಕೊಂಡು ಹೋಗಲಿ ಮುಂದೆ ಲಿಂಗಧಾರಣೆ ಬಿಡಬೇಕು.
ಸಮುದ್ರಕೆ ತೇಲಿಬಿಡಬೇಕು
ಮಂಗಳವಾರನಾದರೂ ಸಂಚಾರಿಣಿ ಭಿಕ್ಷೆ ಮಾಡಬೇಕು
ಸುರಿಗಡಿಗೆ ತಲಿಮೇಲೆ ಹೊರಬೇಕು
ಭಕ್ತರು ಕೊಟ್ಟ ಪದಾರ್ಥ ನೈವೇದ್ಯ ಮಾಡಬೇಕು"[೬೭]

ಇಷ್ಟು ಮಾಡಿದರೆ ನಿನ್ನ ರೋಗ ಪರಿಹಾರವಾಗುತ್ತದೆ ಎನ್ನುತ್ತಾಳೆ. ಇಲ್ಲಿ ಅವಳು ಹೇಳುವುದು ಅವನು ಆಚರಿಸುವ ಶೈವಧರ್ಮವನ್ನು ತೊರೆಯಲು. ಶೈವ ಮತ್ತು ವೈಷ್ಣವ ಧರ್ಮಗಳ ಸಂಘರ್ಷದ

ಕಾಲದಲ್ಲಿ ಈ ಹಾಡು ಹುಟ್ಟಿರಬಹುದು. ಒರಂಗಲ್ಲ ರಾಜ ನೊಣ, ನಾಯಿಗಳಿಗೂ ಶಿವದಾರ, ಲಿಂಗಧಾರಣೆ ಮಾಡಿಸುವ ಶಿವಭಕ್ತ. ಅವನಿಂದ ಇಡೀ ಪ್ರದೇಶವೇ ಶಿವಮಯವಾಗಿರುತ್ತದೆ. ಆದರೆ ಇಂತಹ ಶಿವಭಕ್ತನನ್ನು ನಾಶಮಾಡಲು ಸಂಚುಮಾಡಿದವ ವಿಷ್ಣು. ಶೈವಮತವನ್ನು ನಾಶಗೊಳಿಸಿ ವೈಷ್ಣವ ಮತವನ್ನು ಪ್ರಸಿದ್ಧಿಗೊಳಿಸುವ ತಂತ್ರ ನಾರಾಯಣನದು

**೩.೨.೧೦. ಉತ್ತಮರ ಕೇರಿಗೆ ಬಂದವಳೆ ಕೊರವಿ**

ಕ.ರಾ.ಕೃ ಸಂಪಾದಿಸಿದ 'ಜನಪ್ರಿಯ ಜಾನಪದ ಗೀತೆಗಳು' ಕೃತಿಯಲ್ಲಿ ಈ ಗೀತೆ ಇದೆ. ಕೊರವ ಕೊರವಿಯನ್ನು ಹುಡುಕುವ, ಕೊರವಿ ತನ್ನ ವ್ಯಾಪಾರ ಮಾಡುವ ಪ್ರಸಂಗ ಇಲ್ಲಿದೆ.

ಒಬ್ಬ ಹೆಣ್ಣುಮಗಳು ಕೊರವಿಯನ್ನು ನಾಳೆ ನಮ್ಮ ಪುರದಾಗಿರು ಕೊರವಿ ಎಂದಾಗ, ನಾನು ಹಾಗಿದ್ದರೆ ನನ್ನ ಕೊರಳಿಗೆ ಸರ್ಪ ಸುತ್ತುತ್ತಾರೆ, ಬಗಸೆಯಲ್ಲಿ ಕೆಂಡ ಹಾಯಿಸುತ್ತಾರೆ, ಎಂದು ಅಲ್ಲಿಂದ ತೆರಳುತ್ತಾಳೆ. ಹೀಗೆ ಬಂದ ಕೊರವಿ ನೆಲುವು ಮತ್ತು ಗಿಲಕಿಗಳನ್ನು ಮಾರುತ್ತಾ ಉತ್ತಮರ ಕೇರಿಗೆ ಬರುತ್ತಾಳೆ. ಅವಳನ್ನು ಹುಡುಕುತ್ತ ಕೊರವ ಕಳ್ಳ ಕೊರಮಿ, ಮುಳ್ಳ ಕೊರಮಿ, ಬಜಾರಿ ಕೊರಮಿಯನ್ನು ಕಂಡಿರಾ ಎಂದು ಕೇಳುತ್ತಾ ಬರುತ್ತಾನೆ.

"ಸರಪ ನನ್ನ ಸುತ್ತಲು ನಮ್ಮ ಕೊರಳಿಗೆ
ಕೆಂಡ ಹುಸ್ಯಾರು ನಮ್ಮ ಬಗಸಿಗೆ"[೬೮]

ಎಂಬ ಮಾತುಗಳು ಇವರು ಸಹ ಪಾತಿವ್ರತ್ಯದ ಪ್ರಶ್ನೆ ಬಂದಾಗ ದಿವ್ಯಗಳಿಗೆ ಈಡಾಗುತ್ತಿದ್ದುದನ್ನು ತಿಳಿಸುತ್ತದೆ.

"ನೆಲುಗಳ ತಗಂತೀರ ನೆಲುಗಳ
ನಿಮ್ಮನಿಗೆ ತಕ್ಕಾದ ನಿಲುವಮ್ಮ
ನಿಮ್ಮ ಬಾಲಯ್ಯ ಆಡೋ ಗಿಲಿಕವೆ"[೬೯]

ಬಂಧನಗಳ ನಡುವೆಯೂ ತನ್ನ ವೃತ್ತಿಯನ್ನು ಮಾಡುತ್ತಾ ಕುಟುಂಬ ಸಲಹುವ ಚಾಣಾಕ್ಷತೆ ಜವಾಬ್ದಾರಿಯನ್ನು ನಿರ್ವಹಿಸುವ ಅವಳ ತಾಳ್ಮೆ, ಶಕ್ತಿಯನ್ನು ಕಾಣಬಹುದು.

**೩.೨.೧೧. ನಾಗರಕನ್ಯೆ**

ಎಚ್.ಎಲ್. ನಾಗೇಗೌಡ ಸಂಪಾದಿಸಿದ 'ಸೋಬಾನೆ ಚಿಕ್ಕಮ್ಮನ ಪದಗಳು' ಕೃತಿಯಲ್ಲಿ 'ನಾಗರಕನ್ಯೆ' ಕಾವ್ಯವಿದೆ. ನಾಗರಕನ್ಯೆ ಬಿಡಿಸಿಕೊಂಡು ಬರಲು ಮಗ ಕೊರವಂಜಿ ವೇಷ ಹಾಕುತ್ತಾನೆ.

ದ್ವಾರಾವತಿ ಪಟ್ಟಣದ ಮುದ್ದವ್ವ ದೊರೆಸಾನಿಗೆ ೭ ಜನ ಗಂಡುಮಕ್ಕಳು. ನಾಗರಕನ್ಯೆ ಸೊಸೆ. ಅವರು ಬೇಟೆಗಾಗಿ ಹೋದಾಗ ಹೇಮಗಿರಿ ಜೋಗಿ ಭಿಕ್ಷೆಯ ನೆಪದಲ್ಲಿ ಪಟ್ಟಣಕ್ಕೆ ಬಂದು ನಾಗರಕನ್ಯೆ ಮನೆಮುಂದೆ ಮಂಡಲ ಬರೆದು ಭಿಕ್ಷೆ ಕೇಳುತ್ತಾನೆ. ತೊಟ್ಟಿಲಲ್ಲಿ ೩ ತಿಂಗಳ ಮಗು ಹಾಕಿ ಭಿಕ್ಷೆ ನೀಡಲು ನಾಗರಕನ್ಯೆ ಬಂದಾಗ, ಅವಳನ್ನು ೭ ಮಂಡಲ ದಾಟಿಸಿ ಜೂಲನಾಯಿ ಮಾಡಿ

ಅಪಹರಿಸಿಕೊಂಡು ಹೋಗುತ್ತಾನೆ. ಬೇಟೆಯಿಂದ ಮರಳಿ ಬಂದ ಸೋದರರು ನಾಗರಕನ್ಯೆ ಇಲ್ಲದ್ದು ತಿಳಿದು, ಹೇಮಗಿರಿ ಜೋಗಿ ಮಾತ್ರ ಪಟ್ಟಣಕ್ಕೆ ಬಂದದ್ದು ತಿಳಿದು ಅವನನ್ನು ಬೆನ್ನತ್ತಿ ಹೋಗುತ್ತಾರೆ. ಆತ ತನ್ನ ಮಾಂತ್ರಿಕ ವಿದ್ಯೆಯಿಂದ ಅವರನ್ನು ಕಲ್ಲುಗಳನ್ನಾಗಿ, ಅವರ ಕುದುರೆಯನ್ನು ಗುಡ್ಡ, ಕತ್ತಿಯನ್ನು ಕಡ್ಡಿ ಮಾಡಿ ಹೋಗುತ್ತಾನೆ. ನಾಗರಕನ್ಯೆಯನ್ನು ಜೋಗಿ ಮುಟ್ಟಲೂ ಹೋದಾಗ ಆಕೆ 'ನನಗೆ ೧೨ ವರ್ಷದ ನೋಂಪಿ' ಅಲ್ಲಿಯವರೆಗೆ ನನ್ನ ಮುಟ್ಟಬೇಡ ಎನ್ನುತ್ತಾಳೆ.

ನಾಗರಕನ್ಯೆ ಮಗು ಬೆಳೆದು ೧೨ ವರ್ಷದವನಾಗಿ ಆಟವಾಡುತ್ತಿರುವಾಗ ನಿನ್ನ ತಾಯಿ ಜೋಗಿ ಹಿಂದೆ ಹೋದಳೆಂದು ಊರವರು ಹೇಳುವುದನ್ನು ಕೇಳಿ, ಮನೆಗೆ ಬಂದು ಅಜ್ಜಿಯಿಂದ ವಿಷಯ ತಿಳಿದು ತಂದೆ ತಾಯಿ ಕರೆತರುವೆನೆಂದು ಹೋಗುತ್ತಾನೆ. ಜೋಗಿ ಇರುವಲ್ಲಿಗೆ ಹೋಗಿ ನೀರಿಗೆ ಬಂದ ಮುದುಕಿ ಮುಖಾಂತರ ತನ್ನ ತಾಯಿ ಜೋಗಿಯ ವಶವಾಗಿಲ್ಲದನ್ನು ತಿಳಿದು ಅವಳ ಮುಖಾಂತರ ತಾಯಿಯನ್ನು ಭೇಟಿಯಾಗುತ್ತಾನೆ. ಜೋಗಿಯ ಪ್ರಾಣ ೭ ಸಮುದ್ರದ ಆಚೆಯಿರುವ ಬೆಟ್ಟದ ಮೇಲಿನ ಗಿಣಿಯಲ್ಲಿರುವುದನ್ನು ಜೋಗಿಯಬಾಯಿಂದ ಬಿಡಿಸಿಸಿ, ತಾಯಿಯಿಂದ ತಿಳಿದು ಸಮುದ್ರ ದಾಟಿ ಹೋಗಿ ಗಿಳಿಯನ್ನು ತರುತ್ತಾನೆ. ಗಿಳಿ ಇವನ ವಶವಾದಾಗ ಜೋಗಿ ಹಾಸಿಗೆ ಹಿಡಿಯುತ್ತಾನೆ. ನಾನು ಕೊರವಂಜಿಯಾಗಿ ಬರುವೆ ನನ್ನ ಕರೆ ಎಂದು ತನ್ನ ತಾಯಿಗೆ ತಿಳಿಸಿ ತಾನು ಕೊರವಂಜಿಯಾಗಿ ಹೋಗಿ 'ನಾಗರಕನ್ಯೆ ಬಂಧನ, ೭ ಜನ ಸೋದರರ ಕಲ್ಲುಗಳಾಗಿದ್ದೆ ನಿನ್ನ ರೋಗಿಗೆ ಕಾರಣ' ಎಂದು ಹೇಳಿ 'ಪರಿಹಾರವಾಗಬೇಕಾದರೆ ಅವರನ್ನು ಬಿಡಿಸಬೇಕು' ಎನ್ನುತ್ತಾನೆ. ಜೋಗಿ ಅವರನ್ನು ಬಿಡುಗಡೆ ಮಾಡುತ್ತಿದಂತೆಯೇ ಗಿಳಿ ಕೊರಳು ಹಿಸುಕಿ ಸಾಯಿಸುತ್ತಾನೆ. ನಂತರ ತಾಯಿ ತಂದೆಯಂದಿರನ್ನು ದ್ವಾರಾವತಿಗೆ ಕರೆತಂದು ತಾಯಿಯಿಂದ ದಿವ್ಯಮಾಡಿಸಿ ಅವಳು ಪತಿವೃತಿಯೆಂದು ಸಾರುತ್ತಾನೆ.

ಇಲ್ಲಿ ಮೋಸಗಾರ ಜೋಗಿಯಿಂದ ತಾಯಿ ತಂದೆಯರನ್ನು ರಕ್ಷಿಸಲು ಮಗ ಕೊರವಂಜಿಯಾಗುತ್ತಾನೆ. ೧೨ ವರ್ಷದ ನೋಂಪಿಮಾಡಿ ಪತಿವ್ರತೆಯಾಗಿದ್ದ ತಾಯಿಯನ್ನು ರಕ್ಷಿಸಲು, ರಾಕ್ಷಸನ ಬಾಯಿಂದ ಅವನ ಪ್ರಾಣದ ಸ್ಥಳ ತಿಳಿದ ರಾಮಣ್ಣ ಕಷ್ಟಪಟ್ಟು ಅವನ ಪ್ರಾಣಪಕ್ಷಿಯನ್ನು ತರುತ್ತಾನೆ. ಅವನನ್ನು ಕೊಂದರೆ ತಾಯಿ ಮಾತ್ರ ಅವನಿಂದ ಬಿಡುಗಡೆ ಪಡೆಯಬಹುದು. ಆದರೆ ತಂದೆಯವರ ಜೀವ ಬರೆಸಲು ಜೋಗಿಯ ಸಹಾಯಬೇಕೆಂದರಿತು ಕೊರವಂಜಿ ವೇಷ ತಾಳುತ್ತಾನೆ. ನಾಗರಕನ್ಯೆ ಕೊರವಂಜಿ ಹತ್ತಿರ ಕಣಿ ಕೇಳಿದಾಗ

"ದ್ವಾರಾವತಿ ಪಟ್ಟಣದ ಏಳುಮಂದಿ ದೊರಿಗಳ
ಏಳುಮಂದಿ ದೊರೆಗಳ ಏಳಕಲ್ಲ ಮಾಡ್ಯವರೆ
ಏಳುಮಂದಿ ಕತ್ತಿಯ ಏಳುಕಡ್ಡಿ ಮಾಡ್ಯವರೆ
ಏಳುಮಂದಿ ಕುದುರೆಯ ಏಳುಗುಡ್ಡ ಮಾಡ್ಯವರೆ
ಅವರೇಳು ಮಂದಿ ದೊರೆಗಳು ಜೀವವ ಪಡೆದರೆ
ಸಳಜರ ಬಿಟ್ಟೇಯ ಹೊಯ್ತುವೆ ಕಾಣಮ್ಮಾ"[೨೦]

ಎಂದು ಅವನ ರೋಗದ ಕಾರಣ ಮತ್ತು ಪರಿಹಾರ ತಿಳಿಸಿ ಆ ಮೂಲಕ ಕಲ್ಲಾಗಿದ್ದ ತಂದೆಯವರಿಗೆ ಮರುಜನ್ಮ ಪಡೆಯುವ ಹಾಗೆ ಮಾಡುತ್ತಾನೆ. ಇಲ್ಲಿ ಕೊರವಂಜಿ ಮೋಸ ಮಾಡಿದ ರಾಕ್ಷಸನಿಂದ ತನ್ನ ತಂದೆ ತಾಯಿಯನ್ನು ಉಪಾಯದಿಂದ ಬಿಡಿಸಿ ಮೋಸಗಾರನ ಪ್ರಾಣ ತೆಗೆಯುತ್ತಾನೆ.

### ೩.೨.೧೨. ಬಂಡು ಮಾಡ್ಯಾನೆ ನಮ್ಮ ಕೊರಮ

ಮರುಳಸಿದ್ದಪ್ಪ ಅವರು ಸಂಪಾದಿಸಿದ ಲಾವಣಿಗಳು ಕೃತಿಯಲ್ಲಿ 'ಬಂಡು ಮಾಡ್ಯಾನೆ ನಮ್ಮ ಕೊರಮ' ಎಂಬ ಪದ್ಯವಿದೆ. ಸೂಳೆಹೋದ ಗಂಡನನ್ನು ನೋಡಿ ಬರುವೆ ಎಂದು ಹೆಣ್ಣುಮಗಳು ಅತ್ತೆಗೆ ಹೇಳಿ ನೆಲುವನ್ನು ಹೆಣೆದು 'ಹತ್ತುಕಾಲಿನ ನೆಲುವಿದೆ ಬಾಲಯ್ಯರಾಡೋ ಗೀಲಕಿದೆ' ಎಂದು ಮಾರುತ್ತಾ ಉತ್ತಮರ ಕೇರಿಗೆ ಬರುತ್ತಾಳೆ. ಮಗು ಹಸಿದಿದೆ, ದೋಸೆ ರೊಟ್ಟಿ ಕೊಡು ಎಂದಾಗ ಸೂಳೆ ಸಿಡಿಮಿಡಿಗೊಳ್ಳುತ್ತಾ ದೋಸೆ, ರೊಟ್ಟಿ ಕೊಡುತ್ತಾಳೆ. ಇಂದು ನಮ್ಮಲ್ಲಿಯೇ ಇರು ಎಂದಾಗ ನಮ್ಮ ಕೊರಮ ಬಂಡು ಮಾಡುತ್ತಾನೆ. ಸವತಿಯರ ಮುಂದೆ ಕೊರಳಿಗೆ ಹಾವು ಸುತ್ತಿಸುತ್ತಾನೆ. ಬೊಗಸೆಯಲ್ಲಿ ಕೆಂಡ ಹಾಕಿಸುತ್ತಾನೆ ಎನ್ನುತ್ತಾಳೆ. ನೀನೆ ಇಂಥವಳಿದ್ದಾಗ ನಿನ್ನ ಗಂಡ ಎಂಥವನು ಎಂದಾಗ,

"ಕೈಯ್ಯಾಗ ಕುಡಗೋಲು ಮುಕಳ್ಯಾಗೆ ಲಂಗೋಟಿ,
ಗುಡ್ಲು ಮುಂದೆ ಗೂಡೆ ಎಣಿತಾನೆ ಎಣಿತಾನೆ"[೮೧]

ಎಂದು ತನ್ನ ಗಂಡನ ಬಗ್ಗೆ ಹೇಳುತ್ತಾಳೆ. ಈ ಪದ್ಯ ಅವಳ ಗಂಡ ಬುಟ್ಟಿ, ನೆಲು ಹೆಣಿಯುವ ಮತ್ತು ಅವಳು ಅವನ್ನು ವ್ಯಾಪಾರ ಮಾಡುವ ಬಗೆಯನ್ನು ತಿಳಿಸುತ್ತವೆ.

### ೩.೨.೧೩. ಚಾಮುಂಡಿ ದೇವೇರಿ ನಂಜುಂಡ

ಅರ್ಚಕ ಬಿ. ರಂಗಸ್ವಾಮಿ ಅವರು ಸಂಪಾದಿಸಿದ 'ಹುಟ್ಟಿದಹಳ್ಳಿ' ಕೃತಿಯಲ್ಲಿ ಚಾಮುಂಡಿ ದೇವೇರಿ ನಂಜುಂಡರ ಕಥೆಯಿದೆ. ಇಲ್ಲಿ ಚಾಮುಂಡಿ ಕೊರಮ ಹೆಣ್ಣಾಗಿದ್ದಾಳೆ.

ನಂಜನಗೂಡು ನಂಜುಂಡ ಬೆಟ್ಟದ ಚಾಮುಂಡಿ ಹತ್ತಿರ ಹೋಗಿ ಎತ್ತು ತರಲು ಹತ್ತು ರಾಜ್ಯ, ಹೋರಿ ತರಲು ಆರು ರಾಜ್ಯ ತಿರುಗಾಡಿ ಹೊತ್ತಾಯಿತು ಕದ ತೆಗೆ ಎನ್ನುತ್ತಾನೆ. ಚಾಮುಂಡಿ ಯಾರೆಂದು ಕೇಳಿದಾಗ ನಂಜುಂಡ ಎನ್ನುತ್ತಾನೆ. ಮಂಕಿನ ಬೂದಿ, ಹೊದ್ದಾ ದೇವಾಂಗ, ಶಿವದಾರ ನಿನ್ನ ಹತ್ತಿರ ಇರುವಾಗ ಕದ ತೆರೆಯೋದಿಲ್ಲ ಎನ್ನುತ್ತಾಳೆ. ಶಿವ ಅವನೆಲ್ಲ ತೆಗೆದಿಟ್ಟಾಗ ಬೆಳ್ಳಿಯ ಉಡದಾರ ಹಾಕಿ ಒಳ ಕರೆದುಕೊಳ್ಳುತ್ತಾಳೆ. ನಂಜುಂಡ, ಚಾಮುಂಡಿ ಪಗಡೆಯಾಟವಾಡಿ ನಂಜುಂಡ ಸೋಲುತ್ತಾನೆ. ನಂತರ ಅವಳೊಂದಿಗೆ ಮಂಚದಲ್ಲಿ ಮಲಗಿರುವಾಗ ಶಿವ ಬೆಚ್ಚಿ ಬೀಳುತ್ತಾನೆ. ಕಾರಣ ಕೇಳಿದಾಗ ಕನಸಲ್ಲಿ ದೇವೇರಿ ಬಂದದನ್ನು ಹೇಳಿ ಹೊರಡಲು ತಯಾರಾಗುತ್ತಾನೆ. ಚಾಮುಂಡಿ ಇದ್ದು ಹೋಗಿ ಎಂದಾಗ ಮತ್ತೆ ಬರುವೆ ನಿನಗೆ ಚಿನ್ನದ ಕಿರೀಟ, ನಿಲುವಂಗಿ ಕಳಿಸುತ್ತೇನೆಂದು ಹೇಳಿ ತೆರಳುತ್ತಾನೆ. ಅಷ್ಟೊತ್ತಿಗಾಗಲೇ ಅವನ ದಾರಿ ಕಾಯ್ದು ದೇವೇರಿ ಈರಣ್ಣ,

ಬಸವಣ್ಣರನ್ನು ನಂಜುಂಡ ಎಲ್ಲಿ ಎಂದು ಕೇಳಿದಾಗ ಮಲ್ಲಿಗೆ ವನಕ್ಕೆ, ಸಂಪಿಗೆ ವನಕ್ಕೆ ಹೋಗಿದ್ದಾರೆ ನಿನಗೆ ಮಲ್ಲಿಗೆ, ಸಂಪಿಗೆ ತರುತ್ತಾರೆ ಎನ್ನುತ್ತಾರೆ. ಆದರೆ ಕೊಂಡ್ಕಾರ ಚೆನ್ನಬಸವಯ್ಯ ದೇವೇರಿಗೆ ನಂಜುಂಡ ಚಾಮುಂಡಿ ಹತ್ತಿರ ಹೋದ ವಿಷಯ ತಿಳಿಸುತ್ತಾನೆ. ನಂಜುಂಡ ಬಂದಾಗ ಕೊರವಂಜಿ ಮನೆಗೆ ಹೋಗಿದ್ದೆ ಎಂದು ಅವನನ್ನು ನಿಂದಿಸುತ್ತಾಳೆ. ಆಗ ಅವಳಿಗೆ ಕೊಂಡ್ಕಾರ ಚೆನ್ನ ಬಸವಣ್ಣ ವಿಷಯ ಹೇಳಿದ್ದು ತಿಳಿದು ಶಿವ ಅವನ ಮುಂದಿನ ಮೂರುಹಲ್ಲು ಮುರಿಸಿ, ಒಣರಾಗಿ ಕಡ್ಡೀ ಹಾಕಿ, ಕಡೆಯ ಬಾಗಿಲಲ್ಲಿ ಕಟ್ಟಿಸುತ್ತಾನೆ. ಆದರೆ ವಿಷಯ ಹೇಳಿದಕ್ಕೆ ದೇವೇರಿ ಅವನಿಗೆ ಬಸವಣ್ಣ ಹುಟ್ಟಿ ಹೊಸಕೋಟಿ ಕಟ್ಟಲಿ ಎಂದು ಹಾರೈಸುತ್ತಾಳೆ.

ಮೇಲ್ಜಾತಿಯ ಶಿವ ಕೆಳಜಾತಿ ಚಾಮುಂಡಿಯನ್ನು ಸೇರುತ್ತಾನೆ. ಮೇಲ್ಜಾತಿಯವರು ತಮಗೆ ಅವಕಾಶಸಿಕ್ಕಾಗಲೆಲ್ಲ ಕೆಳಜಾತಿಯ ಹೆಣ್ಣುಮಕ್ಕಳನ್ನು ಬಳಸಿಕೊಳ್ಳುವುದು ಸಮಾಜ ವ್ಯವಸ್ಥೆಯಲ್ಲಿದೆ. ಅದು ಇಲ್ಲಿ ದೈವದ ವಿಷಯದಲ್ಲಿಯೂ ನಿಜವಾಗಿದೆ. ಹಾಗೇ ಗಂಡ ಮತ್ತೊಬ್ಬಳ ಸಂಗ ಮಾಡಿದಾಗ ಅವನ ಬಗ್ಗೆ ಮುನಿಸಿಕೊಳ್ಳುವ ಸ್ತ್ರೀಸಹಜ ಗುಣವನ್ನು ಇಲ್ಲಿ ಪಾರ್ವತಿಯಲ್ಲಿಯೂ ಕಾಣುತ್ತೇವೆ.

ಜೊತೆಗೆ ಇಲ್ಲಿ ಜಾತಿಯ ಸಂಘರ್ಷವಿದೆ. ಕೆಳಜಾತಿಯ ಚಾಮುಂಡಿ ನಂಜುಂಡನನ್ನು ಸ್ವೀಕರಿಸುವುದು ಅವನು ತನ್ನ ಜಾತಿಯ ಕುರುಹುಗಳನ್ನು ಮೀರಿ ಬಂದಾಗ

“ಮಂಕಿನಾ ಬೂದೀ ನಿಂಕೈಲಿ ಇರುವಾಗ
ಚಾಮುಂಡಿ ಕದವಾ ತೆಗಿಬಲ್ಲೆ”[೭೨]
ಎಂದು ಕದ ತೆರಿಯದ ಚಾಮುಂಡಿ
“ಶಿವದಾರ್ಕರ್ಡೇ ಕೊಳ್ಳೆ ಬೆಳ್ಳಿ ಉಡ್ದಾರ್ರೊಕ್ಳೆ”[೭೩]

ಎಂದು ಶಿವದಾರ, ದೇವಾಂಗ, ವಿಭೂತಿ ತೆಗೆದು ತನ್ನ ಪೂರ್ವಾಶ್ರಮ ಮೀರಿ ಬಂದಾಗ ಅವನನ್ನು ಸ್ವೀಕರಿಸುತ್ತಾಳೆ. ಕೆಳಜಾತಿಯವಳಾದರೂ ಸ್ವೀಕರಿಸಲು ತನ್ನಂತ ವ್ಯಕ್ತಿಬೇಕು. ತನ್ನ ಹಿಂದಿನ ಧರ್ಮ ಕುರುಹು ತೆಗೆದು ಬಂದಾಗ ಅವನನ್ನು ಸ್ವೀಕರಿಸುತ್ತಾಳೆ.

ದೇವೇರಿಯಲ್ಲಿಯೂ ಜಾತಿಯ ಬಗ್ಗೆ ಇದೇ ಭಾವನೆ ಇದೆ. ತನ್ನ ಗಂಡ ಕೀಳುಜಾತಿಯವನ ಸಂಗಮಾಡಿದ್ದು ಅವಳಿಗೆ ಮುಜುಗರ ತಂದಿದ್ದೆ ಅದಕ್ಕೆ

‘ಕೋಳಿಯ ತಿನ್ನೋ ಕೋರ್ಮತೀ ಮನೆಗ್ಹೋಗಿ
ಕಂದಣ್ಣನಾಣೆ ಇಡಬಹುದೇ’[೭೪] ಎಂದು ಕೇಳಿದ ದೇವೇರಿ
‘ಕೋಳಿ ಸಾಕವ್ಳೆ ಕೋರ್ಮರಿಗೆ ಕೊಟ್ಟವ್ಳೇ
ಕಡೆಯಾ ಮನೆಯಲ್ಲಿ ವರಿಗೀರಿ’[೭೫]

ಎಂದು ಅವನ ಬಗ್ಗೆ ಕೀಳಾಗಿ ಮಾತನಾಡುತ್ತಾಳೆ. ಹಂದಿ, ಕೋಳಿ ಸಾಕುವ ತಿನ್ನುವ ಚಾಮುಂಡಿ ಇವಳ ದೃಷ್ಟಿಯಲ್ಲಿ ಕೀಳು ಹೆಣ್ಣು. ದೇವೇರಿಗೆ ಚಾಮುಂಡಿ ಜಾತಿ ಬಗ್ಗೆ ಕೀಳರಿಮೆ ಇದ್ದರೆ, ಚಾಮುಂಡಿಗೆ ಶಿವನ ಜಾತಿಯ ಬಗ್ಗೆ ಕೀಳರಿಮೆ ಇದೆ.

### ೩.೨.೧೪. ಜುಂಜಪ್ಪನ ಕಾವ್ಯ

ಡಾ. ಚೆಲುವರಾಜು ಸಂಪಾದಿಸಿದ ಜುಂಜಪ್ಪನ ಮಹಾಕಾವ್ಯದಲ್ಲಿ ಕೊರವಂಜಿ ಪ್ರಸಂಗಬರುತ್ತದೆ. ಜುಂಜಪ್ಪನ ಕಾವ್ಯದಲ್ಲಿ ಗೌರಸಂದ್ರದ ಮಾರಮ್ಮ ಅನೇಕ ಬಾರಿ ಬಂದು ಕಣಿ ಹೇಳುತ್ತಾಳೆ.

ಜುಂಜಪ್ಪನ ಮುತ್ತಜ್ಜಂದಿರಾದ ಕರಿಯಲ್ಲಿ ಕೆಂಪೆಲ್ಲಿ ಸೋದರರಲ್ಲಿ ಕೆಂಪೆಲ್ಲಿಯ ಆರು ಜನ ಸೋದರರ ಮದುವೆಯಾಗಿ, ಕರಿಯಲ್ಲಿ ಮಗ ಮಾರಮುತ್ತಣ್ಣನನ್ನು ಮಾತ್ರ ಕಾಡಲ್ಲಿ ದನ ಕಾಯಲು ಬಿಟ್ಟಿರುತ್ತಾರೆ. ಆರು ಜನ ಸೋದರರಿಗೆ ಮಕ್ಕಳಾಗದಾಗ ಕಣಿ ಕೇಳಲು ಹೋದಾಗ ಗೌರಸಂದ್ರದ ಮಾರಮ್ಮ ಬಂದು ಮಾರಮುತ್ತಣ್ಣಗೆ ಮದುವೆ ಮಾಡಿದರೆ ವಂಶ ಬೆಳೆಯುವದೆಂದು ಹೇಳುತ್ತಾಳೆ. ಮಾರಮುತ್ತಣ್ಣ ಮದುವೆ ಒಲ್ಲೆ ಎಂದಾಗ ಅವನನ್ನು ಒಪ್ಪಿಸಿ ಅವನ ಬಾಕಿನೊಂದಿಗೆ ಸಾತಮ್ಮನ ಮದುವೆ ಮಾಡುತ್ತಾರೆ. ೧೨ ವರ್ಷವಾದರೂ ಗಂಡ ಬರದೆ ಹುಡುಕುತ್ತಾ ಬಂದ ಸಾತಮ್ಮಗೆ ಮಾರಮ್ಮ ಕೊರವಂಜಿಯಾಗಿ ಬಂದು ಕಣಿ ಹೇಳುತ್ತಾಳೆ.

ತಾವು ಆರು ಜನ ಸಹೋದರರು ಮಾತ್ರ ಮದುವೆಯಾಗಿ ಒಬ್ಬನೇ ಇರುವ ಮಾರಿಮುತ್ತಣ್ಣಗೆ ಮದುವೆ ಮಾಡದೆ ಮಾರಮ್ಮ

"ಕರಿಯಲ್ಲಿ ಎಂಬ ಅಜ್ಜನ ಮಗನಿಗೆ
ಮಾರುಮುತ್ತಣ್ಣನಿಗೆ
ಮದುವೆ ಮಾಡಿದುರೆ
ನಿಮ್ಮವಂಶ ಬೆಳಿತೈತೆಂದು"[೬೬]

ಹೇಳಿ ನ್ಯಾಯ ಸರಿದೂಗಿಸುವ ಪ್ರಯತ್ನ ಮಾಡುತ್ತಾಳೆ. ಬಾಕುವಿನೊಂದಿಗೆ ಮದುವೆಯಾದ ಸಾತಮ್ಮ ಗಂಡನನ್ನ ಅರಸುತ್ತಾ ಬಂದಾಗ ಮಾರಮ್ಮ ಪ್ರತ್ಯಕ್ಷಳಾಗಿ ಕಣಿ ಹೇಳುತ್ತಾಳೆ.

"ಕೇಳೇಯರಿ ಮುಂಡೆ ಸಾತಮ್ಮ ನನ್ನನ್ನೇ
ಗಂಡನಿಗೆ ಏಳುಜನ
ಹೆಣತೇರು ಕೇಳಮ್ಮಾ,
ನನ್ನಗಂಡ ಕೊರಮನಮ್ಮ
ನನ್ನ ಆರು ಜನ ವಾರಗಿತ್ತೇರು
ಮುಂದುಗಡೆ ಹೋದರು ತಾಯಿ
ಹಿಂದುಲಿಂದ ನಾನೋದರೆ
ಇಷ್ಟೊತ್ತಾದರೂ ಬರಲಿಲ್ಲ
ನೀನು ಏನು ಮಾಡುತ್ತಿದ್ದೆ ಅಂದು,
ಆರುಜನ ವಾರುಗಿತ್ತೇರು ತಾವಮ್ಮ
ಕತ್ತೆಕಟ್ಟುವಂತೆ ಗೂಟಕೆ ಕಟ್ಟಿ

ನನ್ನ ಹೊಡೆಸಿಬಿಡುತಾನೆ ಸಾತಮ್ಮ
ನಿನಗು ಕಣಿ ಹೇಳ್ಕಂಡು ಕೂತ್ಕಂಡರೆ
ಟೈಮಾಗುತ್ತೈತೆಮ್ಮ"[೭೭]

ಎಂದು ಮಾರಮ್ಮ ಕೊರವರ ಬದುಕಿನ ಚಿತ್ರಣ ಬಿಚ್ಚಿಡುತ್ತಾಳೆ. ಇಲ್ಲಿ ಅವಳು ಕೊರವರ ಬದುಕನ್ನು ವಿವರಿಸುವುದರ ಜೊತೆಗೆ ಆರುಜನ ವಾರಗಿತ್ತಿಯರಿಂದ ಕಷ್ಟಪಡುತ್ತಿದ್ದ ಸಾತಮ್ಮನಿಗೆ ಈ ಕಷ್ಟ ನಿನಗೆ ಮಾತ್ರವಲ್ಲ ನಿನ್ನಂತೆ ನನಗೂ ಇದೇ ಎಂದು, ನನ್ನಂತೆ ನೀನು ಸಹಿಸುವ ಶಕ್ತಿ ಪಡೆದುಕೋ ಎಂದು ಅವಳಲ್ಲಿ ಧೈರ್ಯ ತುಂಬುತ್ತಾಳೆ. ತನ್ನ ಕಷ್ಟದ ನಡುವೆಯೂ ನಿಂತು ಗಂಡನನ್ನು ಹುಡುಕುವ ಮಾರ್ಗ ತಿಳಿಸುತ್ತಾಳೆ. ಜುಂಜಪ್ಪನ ತಾಯಿ ಸಿನ್ನಮ್ಮ ಮದುವೆಯಾಗಿ ಬಂದು ವರ್ಷವಾದರೂ ಗಂಡ ಬರದೆ ತಾಯಿಯಾಗದಾಗ ಅತ್ತಿಗೆಯರು, ಜೋಗಿ, ಊರಜನ ಬಂಜೆ ಎಂದು ಕರೆದಾಗ ಸಾಯಲು ಹೋಗುತ್ತಾಳೆ. ಆಗ ಪ್ರತ್ಯಕ್ಷಳಾದ ಮಾರಮ್ಮ 'ನಿನಗೆ ಮಕ್ಕಳ ಫಲವಿಲ್ಲೆಂದು' ಕಣಿ ಹೇಳುತ್ತಾಳೆ. ಅವಳ ಎದುರಿಗೆ ಸಿನ್ನಮ್ಮ ಸಾಯಲು ಸಿದ್ಧಳಾದಾಗ

"ಇದೇ ಜಾಗದಲ್ಲಿ ಕುಂತುಗಂಡು
ಈಶ್ವರನ ತ್ರಬಸು ಮಾಡಮ್ಮ
ಮಾಡಿದುರೆ ಶಂಕರನೇ,
ಶಿವನು ಪಾರ್ವತಿನು ಬಂದು
ವರವ ಕೊಡುತಾರೂ ಸಿನ್ನಮ್ಮೋ"[೭೮]

ಎಂದು ಹೇಳಿ ಮಕ್ಕಳ ಫಲವಿಲ್ಲದ ಅವಳಿಗೆ ಶಿವನನ್ನು ಒಲಿಸಿಕೊಂಡು ಮಕ್ಕಳನ್ನು ಪಡೆಯಲು ಮಾರ್ಗ ಸೂಚಿಸಿ ಜೊತೆಗೆ ತಪ್ಪಸ್ಸು ಮಾಡುವ ಅವಳ ಕಾವಲಿಗೂ ನಿಲ್ಲುತ್ತಾಳೆ.

ಜುಂಜಪ್ಪನ ಮಾತಿನಂತೆ ಅಜ್ಜ ಹೊನ್ನಾಲೆಗೌಡ ಸುಲುಕಾ ಊರಿಗೆ ಹೋಗಿ ಮೇದಾರ ಚೆನ್ನಯ್ಯನಿಂದ ತೊಟ್ಟಿಲು ಮಾಡಿಸಲು ಹೋದಾಗ ಅವನು ಮಡಿಯಿಂದ ತೊಟ್ಟಿಲು ಮಾಡದೆ ಇದ್ದಾಗ ಆತನ ಕಣ್ಣು ಹೋಗುತ್ತವೆ. ಆಗ ಮಾರಕ್ಕ ಹೋಗಿ ಮಡಿಯಿಂದ ತೊಟ್ಟಲು ಮಾಡಿದರೆ ನಿನ್ನ ಕಣ್ಣು ಬರುತ್ತವೆಂದು ಮೇದಾರ ಚನ್ನಯ್ಯಗೆ ಕಣಿ ಹೇಳುತ್ತಾಳೆ. ದೇವರಿಗೆ ಸಲ್ಲುವದು ಮಡಿಯಿಂದಿರಬೇಕೆಂಬ ಭಾವ ಅವಳದು.

ಜುಂಜಪ್ಪನ ತಾಯಿಗೆ ಜನಿಗೆ ಹಾಕಲು ಅಜ್ಜ ಗೌಡ, ಪೂಜಾರಿ ಹತ್ತಿರ ಕೇಳಲು ಹೋದಾಗ ಅವಳು ಪತಿವ್ರತೆಯಲ್ಲ ನಾವು ಜನಿಗೆ ಹಾಕಲ್ಲ ಎನ್ನುತ್ತಾರೆ. ಕೋಪಗೊಂಡ ಜುಂಜಪ್ಪ ಮಾರಿಯರನ್ನು ಕರೆದಾಗ ವಾಂತಿಭೇದಿಯಿಂದ ಜನರು ಸಾಯುತ್ತಾರೆ. ಆಗ ಗೌಡ, ಪೂಜಾರಿ ಕಣಿ ಕೇಳಲು ದೇವ ನಿಮ್ಮನಂದಗೋಕುಲದ ಹೆಚ್ಚಿನ ದೇವರು ಸಿನ್ನಮ್ಮನ ಹೊಟ್ಟೆಯಲ್ಲಿ ಹುಟ್ಟಿದಾನೆ ನೀವು ಅವಮಾನ ಮಾಡಿದಕ್ಕೆ ಹೀಗಾಯ್ತು. ಜನಿಗೆ ಹೊಯ್ದು ನಾಮಕರಣ ಮಾಡಿದರೆ ಪರಿಹಾರ ಎನ್ನುತ್ತಾಳೆ. ಈ ಮೂಲಕ ಸಿನ್ನಮ್ಮ ಪತಿವ್ರತೆ ಎಂದು ಸಾಬೀತು ಮಾಡುತ್ತಾಳೆ.

ಹಾಗೆಯೇ ಜುಂಜಪ್ಪ ಹುಲಿಕುಂಟೆ ತಮ್ಮಣ್ಣನನ್ನು ನಾಶಮಾಡಲು ಹೊರಟಾಗ ಗೌರಸಂದ್ರದ ಮಾರಿ ಕೊರವಂಜಿಯಾಗಿ ಬಂದು ಹೋಗದಿರೆಂದು ಭವಿಷ್ಯ ನುಡಿಯುತ್ತಾಳೆ.

### ೩.೨.೧೫. ಕೃಷ್ಣಗೊಲ್ಲರ ಕಥನ ಕಾವ್ಯ

ಡಾ. ಕೆ.ಎಂ. ಮೈತ್ರಿ ಸಂಪಾದಿಸಿರುವ ಕೃಷ್ಣಗೊಲ್ಲರ ಕಾವ್ಯದಲ್ಲಿ ಬರುವ ನಿಂಗಣ್ಣನ ಕಾವ್ಯದಲ್ಲಿ ಕೊರವಂಜಿ ಪ್ರಸಂಗ ಬರುತ್ತಿದೆ. ಗೌರಸಂದ್ರದ ಮಾರಿ ಕೊರವಂಜಿ ವೇಷಧರಿಸಿ ಬರುತ್ತಾಳೆ.

ನಿಂಗಣ್ಣ ಚಿಕ್ಕಸಂದ್ರದಲ್ಲಿ ವಾಸವಿದ್ದು ೩ ತಿಂಗಳ ವ್ರತ ಕೈಗೊಂಡಿರುವಾಗ ಅಲ್ಲಿಯ ಹಟ್ಟಿಮೇಲೆ ದಾಳಿ ಮಾಡಿದ ಚಿತ್ರದುರ್ಗದ ಭರಮಪ್ಪನಾಯಕ ನಿಂಗಣ್ಣನ ಭಕ್ತ ಕರಿಯಪ್ಪನನ್ನು ಸಾಯಿಸಿ ನಿಂಗಣ್ಣನನ್ನು ಸೆರೆಯಲ್ಲಿಡುತ್ತಾನೆ. ಭರಮಪ್ಪನ ದಬ್ಬಾಳಿಕೆಯನ್ನು ಕೊನೆಗಾಣಿಸಲು ನಿಂಗಣ್ಣ ಜೋಗಿಯಾಗಿ ಬಂದು ಗೌರಸಂದ್ರದ ಮಾರಮ್ಮಗೆ ಉರಿಗಣ್ಣು ಬಿಡುತ್ತಾನೆ. ಅಣ್ಣನ ಬಿಡಿಸಲು ಮಾರಿ ದಂಡಿ ದಾಳಿ ತಂದು ದುರ್ಗ ನಾಶಮಾಡುತ್ತಾಳೆ. ದುರ್ಗದ ನಾಶ ಕಣ್ಣಾರೆ ಕಂಡ ಭರಮಪ್ಪನಾಯಕರು ಕಣಿ ಕೇಳಲು ಹೊರಡುತ್ತಾನೆ. ಕೊರವಂಜಿ ವೇಷ ಧರಿಸಿದ ಮಾರಮ್ಮ 'ನಿಂಗಣ್ಣನಿಗೆ ಸೆರೆಯಿಂದ ಬಿಟ್ಟರೆ ರಾಜಕೋಶ ಮರಳಿ ಲಭಿಸುವದೆಂದು ಪ್ರಾಯಶ್ಚಿತವಾಗಿ ಹಣ ಮುಡಿಪು ಕಟ್ಟಬೇಕು' ಎನ್ನುತ್ತಾಳೆ. ಭರಮಪ್ಪ ಅವನನ್ನು ಸೆರೆಯಿಂದ ಬಿಡುತ್ತಾನೆ.

"ತಪ್ದಂದು ತಪ್ದಂದು ತಪ್ದಂದು ಅಡ್ಡಬೀಳು
ಇಪ್ಪತ್ತೇ ಹೊನ್ನು ಮುಡಿಪು ಕಟ್ಟು"[೮೦]
ಎಂದು ತಪ್ದಂಡ ಕಟ್ಟಲು ಹೇಳುತ್ತಾಳೆ.
"ಮುತ್ತಿನ್ಹಂತ ದೇವರುನ ಮುಟ್ಟುದಲ್ಲ ಭರಮಪ್ಪ
ಪಟ್ಟದ್ಹೆಂಡತಿಗೆ ಉಳಿವಿಲ್ಲ । ಈ ದೇವರನ
ಬಿಟ್ಟು ಬನ್ನಿರಿ ಅವರ ಹಿರಿಯರಿಗೆ
ಕೆಂಡದ್ಹಂತ ದೇವರುನ ತಂದಲ್ಲ ಭರಮಪ್ಪ
ಹೆಂಡರು ಮಕ್ಕಳಿಗೆ ಉಳಿವಿಲ್ಲ । ಈ ದೇವರುನ
ತೋರಿ ಬನ್ನಿರಿ ಅವರ ಹಿರಿಯರಿಗೆ"[೮೧]

ಎಂದು ನಿಂಗಣ್ಣನ ಮಹಿಮೆ ಹೇಳುತ್ತಾಳೆ. ಈ ಮೂಲಕ ದಬ್ಬಾಳಿಕೆಯ ಆಡಳಿತ ಮಾಡುತ್ತ ಅಹಂಕಾರದಿಂದ ಮೆರೆಯುತ್ತಿದ್ದ ಭರಮಪ್ಪನ ಅಹಂಕಾರವನ್ನು ಅಡಗಿಸುತ್ತಾಳೆ ಕೊರವಂಜಿ.

### ೩.೨.೧೬. ಸ್ಯಾಸಿ ಚಿನ್ನಮ್ಮನ ಕಾವ್ಯ

ಡಾ. ಸ.ಚಿ. ರಮೇಶ ಸಂಪಾದಿಸಿದ ಸ್ಯಾಸಿ ಚಿನ್ನಮ್ಮನ ಕಾವ್ಯದಲ್ಲಿ ಕೊರವಂಜಿ ಪಾತ್ರಬರುತ್ತದೆ. ಶೈವ ಮತದ ಆರಾಧಕಿ ಗೌಡನಾಗಮ್ಮ ತಿರುಪತಿಗೆ ಬರದಾದಾಗ, ತಿರುಪತಿ ವೆಂಕಟೇಶ 'ಕೊರವಂಜಿ'ಯಾಗಿ ಬಂದು ಕಣಿ ಹೇಳಿ ಅವಳು ತಿರುಪತಿಗೆ ಬರುವಂತೆ ಮಾಡುತ್ತಾನೆ.

ಕದ್ರಿಗುಡ್ಡದ ನರಸಿಂಹಗೌಡ ಮತ್ತು ಶೀಲಮ್ಮ ದಂಪತಿಗೆ ೭ಜನ ಗಂಡುಮಕ್ಕಳಿದ್ದು, ಹೆಣ್ಣುಮಗುವಿಗಾಗಿ ತಿಮ್ಮಪ್ಪನನ್ನು ಪ್ರಾರ್ಥಿಸುತ್ತಾರೆ. ಅವಳ ಜನನದಿಂದ ಕಷ್ಟಗಳು ಬರುವವೆಂದು ತಿಮ್ಮಪ್ಪ ತಿಳಿಸಿದರೂ, ಹೆಣ್ಣು ಮಗಳ ಕೊಟ್ಟರೆ ೭ಬಾರಿ ದಾಸಿಂಗ ಕೋಡುವೆನೆಂದು ಹರಕೆ ಹೊತ್ತು ಹೆಣ್ಣುಮಗಳ ಪಡೆಯುತ್ತಾರೆ. ನಾಮಕರಣಕ್ಕೆ ಬಂದ ಶೈವಾರಾಧಕಿ ಅತ್ತೆ ಗೌಡನಾಗಮ್ಮ, ಇಬ್ಬರೂ ವಿರುದ್ಧ ದೈವಗಳ ಆರಾಧಕರು ಬೇಡವೆಂದರೂ ಕೇಳದೆ ಅಣ್ಣನ ಮಗಳನ್ನು ತನ್ನ ಮಗನಿಗೆ ಕೊಡಬೇಕೆಂದು ಅಣ್ಣನಿಂದ ಭಾಷೆ ಪಡೆದು ಸೊಸೆಗೆ 'ಸ್ಯಾಸಿಲು ಚಿನ್ನಮ್ಮ' ಎಂದು ನಾಮಕರಣ ಮಾಡಿ ಬರುತ್ತಾಳೆ. ಮಗಳಿಗೆ ೩ ವರ್ಷ ತುಂಬಿ ಅಣ್ಣ ಕೂದಲು ತೆಗೆಸಲು ತಿರುಪತಿಗೆ ಹೋದಾಗ ತನಗೆ ಕೆಲಸವಿದೆ, ಮಕ್ಕಳು ಜೋಳಕೊಯ್ಯುತ್ತಿದ್ದಾರೆಂದು ನಾಗಮ್ಮ ತಿರುಪತಿಗೆ ಹೋಗುವುದರಿಂದ ತಪ್ಪಿಸಿಕೊಳ್ಳುತ್ತಾಳೆ. ಚಿನ್ನಮ್ಮ ವಿದ್ಯೆ ಕಲಿತು ವಯಸ್ಸಿಗೆ ಬಂದಾಗ ನಾಗಮ್ಮ ತನ್ನ ಮಗ ಯಂಗಳರೆಡ್ಡಿಗೆ ಮದುವೆ ಮಾಡುತ್ತೇನೆಂದಾಗ ನಿನ್ನ ಮನೆಯ ಹತ್ತಿರವೇ ಮಾಡು ಎನ್ನುತ್ತಾಳೆ. ದೇವರಿಗೆ ಮುಡಿಪು ಸಲ್ಲಿಸಲು ಹೊರಟಾಗ ಮದುವೆ ನಂತರ ಸಲ್ಲಿಸೆಂದು ಹೇಳಿ ಮುಡಿಪು ಎಂಜಲಾಗುವಂತೆ ಮಾಡುತ್ತಾಳೆ. ಎಂಜಲು ಮುಡಿಪನ್ನು ಸಲ್ಲಿಸಿದ್ದಕ್ಕೆ ನಿನ್ನ ಮಗಳಿಗೆ ಕಷ್ಟಗಳು ಬರುತ್ತವೆಂದು ತಿಮ್ಮಪ್ಪ ಹೇಳುತ್ತಾನೆ.

ಚಿನ್ನಮ್ಮನನ್ನು ಮನೆತುಂಬಿಸಿಕೊಂಡ ನಾಗಮ್ಮ ವೆಂಕಟರಮನನ ಪೂಜೆ ಬಿಡು ಲಿಂಗಧಾರಣೆ ಮಾಡು, ಮದುವೆಯಾದ ಮೇಲೆ ಗಂಡನ ಮನೆ ದೇವರನ್ನು ಪೂಜಿಸಬೇಕು ಎನ್ನುತ್ತಾಳೆ. ಚಿನ್ನಮ್ಮ ನಿರಾಕರಿಸುತ್ತಾಳೆ. ಮಾತು ಕೇಳದ ಸೊಸೆಯನ್ನು ಸ್ಮಶಾನದ ಹತ್ತಿರವಿರುವ ತಾಳನ ಗುಡಿಸಿಲಿನಲ್ಲಿ ಇರಿಸುತ್ತಾಳೆ. ಹತ್ತು ಖಂಡುಗ ನವಣೆ ಕುಟ್ಟುವ, ರಾಗಿ ಬೀಸುವ ಕೆಲಸ ಹಚ್ಚಿ ಊಟ, ತಿಂಡಿ ಕೊಡಿಸದೆ ಗಂಡನಿಂದ ದೂರ ಇಡಿಸುತ್ತಾಳೆ. ಅವಳು ಕಷ್ಟದಿಂದ ತಂದೆ, ತಾಯಿ ದೇವರನ್ನು ಕರೆದಾಗ ತಿಮ್ಮಪ್ಪ ದಾಸಪ್ಪನ ವೇಷದಲ್ಲಿ ಬಂದು ಅವಳ ಕಷ್ಟ ಪರಿಹರಿಸುತ್ತಾನೆ.

೫೦ ಸೇರು ರಾಗಿ ಅಂಬಲಿಯ ಗಡಗಿ ಮಾಡಿ ಚಿನ್ನಮ್ಮ ಭಾವಂದಿರಿಗಾಗಿ ಹೊಲಕ್ಕೆ ಒಯ್ದಾಗ, ಮಧ್ಯ ಬಂದ ದಾಸಪ್ಪ ಅಂಬಲಿ ಕುಡಿದು ಖಾಲಿಮಾಡಿದ್ದರಿಂದ, ಅವರು ಬಾರಕೋಲಿನಿಂದ ಅವಳನ್ನು ಥಳಿಸಿ, ಮನೆಗೆ ಬರುವಾಗ ತಿಮ್ಮಪ್ಪ ಹಾದಿಯ ಹಳ್ಳದಲ್ಲಿ ಅವರನ್ನು ಮುಳುಗಿಸುತ್ತಾನೆ. ಅವರು ಶಿವನಿಗೆ ಕರೆದರೂ ಬರದಾಗ, ದಾಸಪ್ಪ ಬಂದು ನೀವು ತಿರುಪತಿಗೆ ಬಂದರೆ ತಲೆ ಬೋಳಿಸಿ ಏಳುಸಾರಿ ದಾಸಿಂಗ ಮಾಡಿದರೆ ಉಳಿಸುತ್ತೇನೆಂದು ಹೇಳಿ, ಅವರು ಒಪ್ಪಿದಾಗ ಅವರನ್ನು ಉಳಿಸುತ್ತಾನೆ.

ಗರುಡಗಂಬದೊಂದಿಗೆ ಮನೆಗೆ ಬಂದ ದಾಸಪ್ಪನಿಗೆ ಕಸಗುಡಿಸಲು ಹೇಳಿ ಥಳಿಸಲು ಹೋದಾಗ ಗರುಡಗಂಭ ಜಾರಿ ಬೆಂಕಿಹತ್ತಿ ನಾಗಮ್ಮನ ಸೀರೆಗೆ ಹತ್ತುತ್ತದೆ. ದಾಸಪ್ಪ ಗೋವಿಂದ ಎಂದರೆ, ತಿಮ್ಮಪ್ಪನಿಗೆ ಬಂದರೆ, ತಲೆ ಬೋಳಿಸಿದರೆ, ದಾಸಿಂಗ ಮಾಡಿಸಿದರೆ ನಿನ್ನ ಉಳಿಸುವೆನೆಂದು ಹೇಳಿ ಒಪ್ಪಿದಾಗ ಅವಳನ್ನು ಬೆಂಕಿಯಿಂದ ರಕ್ಷಿಸುತ್ತಾನೆ. ದಾಸಪ್ಪನ ಅಣತಿ ಮೇರೆಗೆ ಸ್ವಾಮಿ ಸನ್ನಿಧಾನಕ್ಕೆ ಸೊಸೆಯನ್ನು ಬಿಟ್ಟು ಹೊರಟಾಗ ಬಂಡಿ, ಎತ್ತಿನ ಕಾಲು ಮುರಿಯುತ್ತವೆ. ಶಿವನ

ಕೋಪದಿಂದ ಹೀಗಾಗುತ್ತಿದೆ ಎಂದು ತುಂಬಿದ ಅನ್ನ ಬಾವಿಗೆ ಸುರಿದು ತಿಮ್ಮಪ್ಪನಿಗೆ ಹೋಗುವುದನ್ನು ಬಿಡುತ್ತಾಳೆ. ಆಗ ವೆಂಕಟೇಶ ಕೊರವಂಜಿ ವೇಷದಲ್ಲಿ ನಾಗಮ್ಮನ ಬಳಿ ಬರುತ್ತಾನೆ. ನಾಗಮ್ಮ ನನ್ನ ಸೊಸೆ ನನ್ನ ಮಾತು ಕೇಳುವುದಿಲ್ಲ ಶಾಸ್ತ್ರಹೇಳು ಎಂದಾಗ, ನನಗೆ ಬೆಕ್ಕಿನ ಮಾಂಸ ಬೇಕು ಎನ್ನುತ್ತಾಳೆ. ತಂದುಕೊಡಲು ನಾಗಮ್ಮ ನಿರಾಕರಿಸಿದಾಗ ಶಾಸ್ತ್ರಹೇಳುವುದಿಲ್ಲ ಎನ್ನುತ್ತಾಳೆ. ಅನಿವಾರ್ಯವಾಗಿ ನಾಗಮ್ಮ ಅವಳ ಆಸೆ ತೀರಿಸುತ್ತಾಳೆ.

ಸೊಸೆ ನಿಮ್ಮ ಮಾತನ್ನು ಕೇಳಬೇಕಾದರೆ ಗಿಳಿಬಂಡಿ ತಯಾರಿಸಿ ಸೊಸೆಯಿಂದ ಪಗಡವನ್ನು, ಶೀಲಮ್ಮನಿಂದ ಕಲಶವನ್ನು ಹೊರಿಸಿ ಸ್ವಾಮಿಯ ಸನ್ನಿಧಾನಕ್ಕೆ ಮಡಿಯಿಂದ ಹೋಗಬೇಕು ಅವರ ಹಿಂದೆ ನೀವು ಹೋಗಬೇಕು ಎನ್ನುತ್ತಾಳೆ. ಅಂತೆಯೇ ಎಲ್ಲರೂ ಸನ್ನಿಧಾನಕ್ಕೆ ಪಡಗ ಒಯ್ದು, ತಲೆಬೋಳಿಸಿ, ದಾಸಿಂಗ ಸಲ್ಲಿಸುತ್ತಾರೆ. ಅತ್ತೆಯ ಬೋಳು ತಲೆಯ ಮೇಲೆ ಹಣತಿಯಿಟ್ಟು ದೀಪ ಉರಿಸುತ್ತಾರೆ. ಸ್ವಾಮಿ ನಾಗಮ್ಮನನ್ನು ಗರುಡಗಂಭವನ್ನಾಗಿ, ಅವಳ ಗಂಡ ಮಕ್ಕಳನ್ನು ತಲೆಬೋಳಿಸುವವರನ್ನಾಗಿ ಮಾಡಿ ಚೆನ್ನಮ್ಮನನ್ನು ತನ್ನಲ್ಲಿ ಐಕ್ಯ ಮಾಡಿಕೊಳ್ಳುತ್ತಾನೆ.

ಈ ಕಾವ್ಯ ಎರಡು ಮತಗಳ ನಡುವಿನ ಸಂಘರ್ಷ ಹಾಗೂ ಮತದ ವಿಸ್ತಾರದ ಸಂಗತಿಗಳನ್ನು ತಿಳಿಸುತ್ತದೆ. ತನ್ನ ಶೈವಮತವನ್ನು ವಿಸ್ತರಿಸುವ ಆಸೆ ಗೌಡನಾಗಮ್ಮನದಾದರೆ, ಅವಳು ಮಾಡುವ ತಂತ್ರ ಹತ್ತಿಕ್ಕಿ ಅವಳನ್ನು ತನ್ನ ಮತಕ್ಕೆ ಮತಾಂತರ ಮಾಡಿಕೊಳ್ಳುವುದು ತಿಮ್ಮಪ್ಪನ ಧ್ಯೇಯ. ನಾಗಮ್ಮ ಅಣ್ಣನ ಮಗಳನ್ನು ಮಗನಿಗೆ ತಂದುಕೊಂಡದ್ದು ಅವರ ಕುಟುಂಬವನ್ನು ಶಿವಭಕ್ತರನ್ನಾಗಿ ಮಾಡುವ ಆಸೆಯಿಂದಲೇ. ಸೊಸೆ ಮನೆಗೆ ಬಂದ ದಿನವೇ ಅವಳನ್ನು ಶಿವಭಕ್ತಳನ್ನಾಗಿ ಮಾಡಲು ನಿರ್ಧರಿಸಿ

“ಗಂಡನ ದೇವ್ರು ನಡೆಯಮ್ಮ
ಅಚ್ಚವಮ್ಮ ಶಿವವಿಬೂತಿ ನೀನು
ಎಮ್ಮಾ ಆಕವಮ್ಮ ಶಿವಲಿಂಗ ತಾಯಿ
ಕೊಳ್ಳಾಗ ಲಿಂಗ ಹಾಕು”[೮೨]

ಎಂದು ತನ್ನ ಧರ್ಮದ ಕಟ್ಟಳೆಗಳನ್ನು ಸೊಸೆಗೆ ಹೆಳಿ ಅವಳು ಶೈವ ಮತದ ಅನುಸರಣೆ ಮಾಡುವ ಹಾಗೆ ಮಾಡಿ ತನ್ನ ಮತ ವಿಸ್ತರಿಸಲು ಹಾತೊರೆಯುತ್ತಾಳೆ. ಆದರೆ ಚೆನ್ನಮ್ಮ

“ಜಲ್ಮ ಹೋಗಲಿ ನಾನು ಮರೋದಿಲ್ಲೋ
ಎಮ್ಮಾ ನಾರಾಯಣೆಂಬೊದು ಬಿಡಿಯೋದಿಲ್ಲ
ಜೀವ ಹೋದ್ರು ಬಿಡೋದಿಲ್ಲ
ಜಲ್ಮ ಹೋದರೆ ಮರೆಯೋದಿಲ್ಲೊ
ಜಲ್ಮ ಹೋದರೆ ಮರೆಲಾರೆ
ಶಿವಶಿವ ಅಂಬದ ನಡೆಸೋದಿಲ್ಲೊ
ನನ್ನ ಜೀವ ಹೋಗಲಿ ಲಿಂಗ್ಹಾಕದಿಲ್ಲ

ಲಿಂಗ್ಹಾಕದಿಲ್ಲ ಜಲ್ಮ ಹೋದರೆ ಲಿಂಗ್ಹಾಕದಿಲ್ಲ
ಶಿವಲಿಂಗ ಪೂಜೆ ಮಾಡಂಗಿಲ್ಲ"[೮೩]

ಎಂದು ಅತ್ತೆಯ ಮಾತಿಗೆ ವಿರುದ್ಧವಾಗಿ ತನ್ನ ಮತ ಪಾಲಿಸಲು ಮುಂದಾಗುತ್ತಾಳೆ. ಒಂದೇ ಮನೆಯಲ್ಲಿ ಎರಡು ಮತಗಳ ಆಚರಣೆಗೆ ನಾಂದಿಯಾಗುತ್ತದೆ. ಮೊದಲೇ ಅತ್ತೆ ಸೊಸೆ ಎಂದರೆ ಪರಮವೈರಿಗಳು. ಜೊತೆಗೆ ವಿರುದ್ಧ ಮತಗಳ ಆಚರಣೆ ಈ ವೈರತ್ವ ಹೆಚ್ಚಿ ನಾಗಮ್ಮ ಸೊಸೆಗೆ ಕಾಟಗಳನ್ನು ಕೊಡಲು ಕಾರಣವಾಗುತ್ತದೆ. ಸೊಸೆ ತನಗೆ ಬಂದ ಎಲ್ಲ ಕಷ್ಟಗಳನ್ನು ತಿಮ್ಮಪ್ಪನ ಸಹಾಯದಿಂದ ನಿವಾರಿಸಿಕೊಳ್ಳುತ್ತಾಳೆ.

ಚೆನ್ನಮ್ಮನ ಕಷ್ಟ ನಿವಾರಿಸುವ ತಿಮ್ಮಪ್ಪ ತನ್ನ ಭಕ್ತೆಗೆ ಕಾಟಕೊಟ್ಟದಕ್ಕೆ ಮತ್ತು ಅವಳನ್ನು ತನ್ನ ಮತಕ್ಕೆ ಮತಾಂತರ ಮಾಡುವ ಉದ್ದೇಶದಿಂದ ನಾಗಮ್ಮನಿಗೆ ಮತ್ತು ಅವಳ ಗಂಡ ಮಕ್ಕಳಿಗೆ ಸಂಕಷ್ಟಗಳನ್ನು ತಂದೊಡ್ಡುತ್ತಾನೆ. ಅವುಗಳಿಂದ ಅವಳು ಪಾರಾಗಬೇಕಾದರೆ ಅವಳು ಮತಾಂತರ ಹೊಂದುವದು ಅನಿವಾರ್ಯ ಎಂಬ ಸ್ಥಿತಿ ತಂದೊಡ್ಡುತ್ತಾನೆ. ಕಷ್ಟ ಪರಿಹಾರಕ್ಕೆ ಅರ್ಧಮನಸ್ಸಿನಿಂದ ತಿಮ್ಮಪ್ಪಗೆ ಹೊರಟು, ಕೊನೆಗೆ ಮನಸ್ಸು ಬದಲಾಯಿಸಿದಾಗ ಕೊರವಂಜಿಯಾಗಿ ಬಂದ ವೆಂಕಟೇಶ ಅವಳ ಕಷ್ಟ ನಿವಾರಣೆಗೆ ಅವಳು ತಿಮ್ಮಪ್ಪನ ದರ್ಶನ ಮಾಡಲೇಬೇಕು ಎನ್ನುತ್ತಾಳೆ. ಇನ್ನು ಕೊರವಂಜಿ ವೇಷದ ವೆಂಕಟೇಶ ಅವಳಿಗೆ ಹೇಳುವುದು ಅವಳ ಮತಕ್ಕೆ ವಿರುದ್ಧವಾದ ಕಾರ್ಯಗಳನ್ನು ಮಾಡಲು ಕೊರವಂಜಿ ಬೆಕ್ಕಿನ ಮಾಂಸ, ಮಂಗಿಲಿನಾಗಿ ನನಗಿಡಬೇಕು ಎಂದಾಗ, ನಾಗಮ್ಮ ನಾವು ಲಿಂಗಾಯತರು ನಾವು ಅದನ್ನು ಹಿಡಿಯಲ್ಲ ಅದರ ಸುದ್ಧಿ ಕೇಳಿಲ್ಲ ಎನ್ನುತ್ತಾಳೆ. ಆಗ ಕೊರವಿ

"ಏ ಮ್ಯಾಗಳಲಿಂಗ ಒಳಗಡೆವೆಲ್ಲಾ ಕೆಟ್ಹೋಗ್ಯೆತಮ್ಮಾ ಕೆಟ್ಹೋಗ್ಯೆತಮ್ಮಾ
ಇನ್ನಾ ಹೊರಗಳಲಿಂಗವಮ್ಮಾ ಕೆಟ್ಟೈತೆ ಲಿಂಗಾ"[೮೪]

ಎಂದು ನಾಗಮ್ಮನ ಮತವನ್ನೆ ಅಪಮಾನ ಮಾಡುತ್ತಾಳೆ. ಕರಿಕೋಳಿ ಶಾಸ್ತ್ರಹೇಳಲು ಕೇಳಿದಾಗ ನಾವು ಮಾಂಸ ಮುಟ್ಟುವುದಿಲ್ಲವೆಂದಾಗ ಬದನೆಕಾಯಿ ಬೆಂಡೆಕಾಯಿಯಲ್ಲಿರುವ ಹುಳು, ನೊಣ, ಇರುವೆ ದೇಹದಲ್ಲಿ ಹೊಕ್ಕಿಲ್ಲವೇ ಎಂದು ಪ್ರಶ್ನಿಸುತ್ತಾಳೆ. 'ನಿನಗೆ ಸೊಸೆ ಎದುರಾದುದಲ್ಲ ತಿರುಪತಿ ಸ್ವಾಮಿ ನಿನಗೆ ಎದುರಾಗಾನೇ' ಎಂದು ಶಾಸ್ತ್ರ ಹೇಳುತ್ತಾಳೆ.

"ನೀನು ಶಿವ ಶಿವಾ ಅಂತ ವೆಂಕಟರಮಣ ಅಂದರೆ ಆಹಾ
ಆತ ಈ ಲೋಕದಲ್ಲಿ ದೇಶದಾಗ ಇರೋನು
ದೇಶ ಹುಟ್ಟಿತಲ್ಲಿಗೆ ದೇಶ ಮುಣಿಗರತಲ್ಲಿಗೆ ಆಹಾ
ಆತನ ಕೂಟ ಈತ ಶಿವಾ ಗೆದ್ದುತಾನ ಎನಮ್ಮಾ ಆಹಾ
ದೊಡ್ಡೋನು ದಡ್ಡಾ ಅಂದಿಯಲ್ಲಾ ಈ ಶಿವ ದಡ್ಡ ಇದ್ದಂಗಾ ಆಹಾ"[೮೫]

ಎಂದು ಶಿವನನ್ನು ಹೀಯಾಳಿಸಿ ವೆಂಕಟೇಶನೇ ಶ್ರೇಷ್ಠ ಎನ್ನುತ್ತಾಳೆ. ನೀನು ಈ ದೇವರ ಎದುರು ಹಾಕಿಕೊಳ್ಳದೆ ತಿಮ್ಮಪ್ಪನಿಗೆ ನಡೆದುಕೊಂಡರೆ ನಿನ್ನ ಕಷ್ಟ ಪರಿಹಾರ ಎಂದು ತಿಳಿಸುತ್ತಾಳೆ.

ಇಡೀ ಕಾವ್ಯದುದ್ದಕ್ಕೂ ಮತಗಳ ಸಂಘರ್ಷ ನಡೆಯುತ್ತದೆ. ವೈಷ್ಣವ ಮತದ ತಿಮ್ಮಪ್ಪ ತನ್ನ ಭಕ್ತರ ರಕ್ಷಿಸಲು, ಭಕ್ತರಿಗೆ ಕಷ್ಟ ಕೊಟ್ಟವರ ಶಿಕ್ಷಿಸಲು ದಾಸಪ್ಪ, ಕೊರವಂಜಿಯಾಗಿ ಪದೇ ಪದೇ ಕಾಣಿಸಿಕೊಳ್ಳುತ್ತಾನೆ. ಆದರೆ ಶೈವ ಮತದ ಶಿವ ಮಾತ್ರ ಭಕ್ತರು ಎಷ್ಟೇ ಕೂಗಿದರು ಓಗೊಡನು. ಅವನು ಭಕ್ತರಕ್ಷಕನಲ್ಲ ಎಂದು ಕಾವ್ಯ ಬಿಂಬಿಸುತ್ತದೆ. ಹಾಗೇ ಕೊರವಂಜಿ ರೂಪದ ತಿಮ್ಮಪ್ಪ ಅವನನ್ನು 'ದಡ್ಡಶಿವ ತಿಮ್ಮಪ್ಪನ ಜೊತೆ ಆತ ಗೆಲ್ಲಲು ಸಾಧ್ಯವಿಲ್ಲ' ಎನ್ನುತ್ತಾನೆ. ಕಾವ್ಯ ಶೈವಮತವನ್ನು ತುಚ್ಛೀಕರಿಸಿ ವೈಷ್ಣವ ಮತದ ಮಹತ್ವ ತಿಳಿಸಿ ಆ ಮತವನ್ನು ವಿಸ್ತರಿಸುವ ಧ್ಯೇಯ ಹೊಂದಿದೆ.

**೩.೨.೧೭. ಇದ್ದಳು ಅಲ್ಲೊಬ್ಬ ಸತ್ಯಭಾಮೆ**

ಜನಪದ ಜಗತ್ತು ಸಂ–೨ರಲ್ಲಿ 'ಇದ್ದಳು ಅಲ್ಲೊಬ್ಬ ಸತ್ಯಭಾಮೆ' ಎಂಬ ಕಾವ್ಯದ ಬಗ್ಗೆ ವಿವರಣೆ ಬರುತ್ತದೆ. ಇಲ್ಲಿ ಕೋಳಿ ಕದ್ದು ತಿಂದು ಹೊಟ್ಟೆನೋವಿನಿಂದ ನರಳುವ ಸತ್ಯಭಾಮೆಗೆ ಕೊರವಂಜಿ ಕಣಿ ಹೇಳುತ್ತಾಳೆ.

ಸತ್ಯಭಾಮೆ ತಿಪ್ಪೆಯಲ್ಲಿ ಅಡ್ಡಾಡುತ್ತಿದ್ದ ಕೋಳಿಯನ್ನು ಕದ್ದು ತಂದು ಅಡುಗೆ ಮಾಡಿ ಗಂಡನಿಗೂ ಬಡಿಸಿ, ತಾನು ಊಟ ಮಾಡುತ್ತಾಳೆ. ಕದ್ದು ತಿಂದ ಪರಿಣಾಮ ಹೊಟ್ಟೆನೋವು ಬರುತ್ತದೆ. ಹೊಟ್ಟೆನೋವಿಗೆ ಕಾರಣ ಕೇಳಲು ಸತ್ಯಭಾಮ ಕೊರವಂಜಿ ಹತ್ತಿರ ಹೋಗುತ್ತಾಳೆ. ಇವಳ ಹೊಟ್ಟೆನೋವಿಗೆ ಕಾರಣ ತಿಳಿದ ಕೊರವಂಜಿ ಒಂದು ಕೋಳಿಗೆ ಎರಡು ಕೋಳಿ ಕೊಟ್ಟರೆ ಹೊಟ್ಟೆ ನೋವು ಹೋಗುತ್ತದೆ ಎಂದು ಪರಿಹಾರ ಸೂಚಿಸುತ್ತಾಳೆ.

ಇಲ್ಲಿ ಕದ್ದು ತಪ್ಪುಮಾಡಿದ ಸತ್ಯಭಾಮೆಗೆ ಕೊರವಂಜಿ ನ್ಯಾಯದ ಪರಿಹಾರ ಹೇಳುತ್ತಾಳೆ ಅವಳು ತನಗಾಗಿ ಏನನ್ನು ಬಯಸುವುದಿಲ್ಲ. ಆದರೆ ಕೋಳಿ ಕಳೆದುಕೊಂಡು ನಷ್ಟ ಹೊಂದಿದವರಿಗೆ ಕೋಳಿ ಮರಳಿ ನಿಡುವ ಹಾಗೆ ಮಾಡುತ್ತಾಳೆ. ಕೊರವಂಜಿ ನ್ಯಾಯನೀತಿಗೆ ಬೆಲೆ ಕೊಡುವಳೆಂದು ಈ ಕಥನ ಕಾವ್ಯ ತಿಳಿಸುತ್ತದೆ.

**೩.೨.೧೮. ಹನಮಂತ ಕೊರವಂಜಿ ವೇಷ**

ಜನಪದ ೩ರಲ್ಲಿ ಒಂದು ಜನಪದ ಕಾವ್ಯದಲ್ಲಿ ಹನಮಂತ ಕೊರವಂಜಿ ವೇಷ ಹಾಕಿದ್ದರ ಬಗ್ಗೆ ಪ್ರಸ್ತಾಪ ಮಾಡುತ್ತಾರೆ. ಸಂಕಷ್ಟದಲ್ಲಿರುವ ಸೀತೆಗೆ ಸಮಾಧಾನ ಮಾಡುವುದಕ್ಕಾಗಿ ಹನಮಂತ ಕೊರವಂಜಿ ವೇಷ ಧರಿಸಿ ಅವಳನ್ನು ಸಮಾಧಾನ ಪಡಿಸಿ ಬರುತ್ತಾನೆ.

ಹೀಗೆ ಕೊರವಂಜಿ ಕನ್ನಡದ ಅನೇಕ ಕೃತಿಗಳಲ್ಲಿ ಮರುಹುಟ್ಟು ಪಡೆದಿದ್ದಾಳೆ. ಒಂದೊಂದು ಕೃತಿಯಲ್ಲಿಯೂ ಒಂದೊಂದು ರೀತಿಯಲ್ಲಿ ಪಾತ್ರನಿರ್ವಹಿಸಿದ್ದಾಳೆ. ಸಮಾಜಜೀವಿಯಾದ ಕೊರವಂಜಿ ಸಮಾಜದಲ್ಲಿ ನಿರ್ವಹಿಸುವ ಕಾರ್ಯಗಳಿಂದಲೇ ಸಾಹಿತ್ಯದಲ್ಲಿ ಇಂತಹ ಸ್ಥಾನವನ್ನು ಪಡೆದಿದ್ದಾಳೆ. ಜನಮನಸೂರೆಗೊಂಡ ಅವಳ ಕಾರ್ಯವೇ ಸಾಹಿತ್ಯ ಪ್ರವೇಶಕ್ಕೆ ಕಾರಣವಾಗಿರಬಹುದು.

**ಕೊನೆಟಿಪ್ಪಣಿ**

೧. ಉಧೃತ, ಡಾ. ರಾಮಯ್ಯ ಬಿ.ಪಿ., ದಕ್ಷಿಣ ಕರ್ನಾಟಕದ ಕೊರಮರು ಒಂದು ಸಾಂಸ್ಕೃತಿಕ ಅಧ್ಯಯನ, ಪುಟ–೪೨, ೨೦೦೨

೨. ಉಧೃತ, ರಾಧಮ್ಮ, ಕೊರವ ಸಮುದಾಯದ ಮಹಿಳೆ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಪುಟ–೧೫೩, ೨೦೦೯

೩. ನಾಗರಾಜಯ್ಯ ಹಂ.ಪ.(ಸಂ.), ಕರ್ಣಪಾರ್ಯ ವಿರಚಿತ ನೇಮಿನಾಥ ಪುರಾಣಂ, ಸಂ–೨, ಪುಟ–೨೪, ೧೯೮೧

೪. ನಾಗರಾಜಯ್ಯ ಹಂ.ಪ.(ಸಂ.), ಕರ್ಣಪಾರ್ಯ ವಿರಚಿತ ನೇಮಿನಾಥ ಪುರಾಣಂ, ಸಂ–೨, ಪುಟ–೨೦, ೧೯೮೧

೫. ನಾಗರಾಜಯ್ಯ ಹಂ.ಪ.(ಸಂ.), ಕರ್ಣಪಾರ್ಯ ವಿರಚಿತ ನೇಮಿನಾಥ ಪುರಾಣಂ, ಸಂ–೨, ಪುಟ–೨೩, ೧೯೮೧

೬. ಉಧೃತ, ಡಾ. ರಾಮಯ್ಯ ಬಿ.ಪಿ. ದಕ್ಷಿಣ ಕರ್ನಾಟಕದ ಕೊರಮರು ಒಂದು ಸಾಂಸ್ಕೃತಿಕ ಅಧ್ಯಯನ, ಪುಟ–೪೩, ೨೦೦೨

೭. ಡಾ. ವೀರಣ್ಣ ರಾಜೂರ, ಕೊಂಚಿ ಕೊರವರು(ಲೇಖನ), ಜನಪದ ಸಾಹಿತ್ಯ ದರ್ಶನ–೭ ಪುಟ–೧೯೭, ೧೯೯೩

೮. ಡಾ. ಕಲಬುರ್ಗಿ ಎಂ.ಎಂ.(ಸಂ.), ಬಸವಣ್ಣನವರ ವಚನ ಸಂಪುಟ, ಪುಟ–೨೯, ೧೯೯೩

೯. ಡಾ. ರವೀಂದ್ರನಾಥ ಕೆ., ಬಸವಯುಗದ ವಚನೇತರ ಸಾಹಿತ್ಯ, ಪುಟ–೪೪೮, ೨೦೦೦

೧೦. ಡಾ. ರವೀಂದ್ರನಾಥ ಕೆ., ಬಸವಯುಗದ ವಚನೇತರ ಸಾಹಿತ್ಯ, ಪುಟ–೪೫೧, ೨೦೦೦

೧೧. ಡಾ. ರವೀಂದ್ರನಾಥ ಕೆ., ಬಸವಯುಗದ ವಚನೇತರ ಸಾಹಿತ್ಯ, ಪುಟ–೪೫೪, ೨೦೦೦

೧೨. ಲೀಲಾವತಿ ಎಸ್.ರಾವ್.(ಸಂ), ಸಮಗ್ರದಾಸ ಸಾಹಿತ್ಯ ಸಂಪುಟ–೧೮, ಭಾಗ–೧, ಪುಟ–೨೨೯, ೨೦೦೩

೧೩. ಲೀಲಾವತಿ ಎಸ್.ರಾವ್.(ಸಂ), ಸಮಗ್ರದಾಸ ಸಾಹಿತ್ಯ ಸಂಪುಟ–೧೮, ಭಾಗ–೧, ಪುಟ–೨೩೦, ೨೦೦೩

೧೪. ಲೀಲಾವತಿ ಎಸ್.ರಾವ್.(ಸಂ), ಸಮಗ್ರದಾಸ ಸಾಹಿತ್ಯ ಸಂಪುಟ–೧೮, ಭಾಗ–೧, ಪುಟ–೨೩೫, ೨೦೦೩

೧೫. ಲೀಲಾವತಿ ಎಸ್.ರಾವ್.(ಸಂ), ಸಮಗ್ರದಾಸ ಸಾಹಿತ್ಯ ಸಂಪುಟ–೧೮, ಭಾಗ–೧, ಪುಟ–೨೨೯, ೨೦೦೩

೧೬. ಇಂದುಬಾಯಿ ಟಿ.ಕೆ(ಸಂ), ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪುಟ–೧೩೦, ೧೯೮೭

೧೭. ಇಂದುಬಾಯಿ ಟಿ.ಕೆ(ಸಂ), ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪುಟ-೧೩೮, ೧೯೮೭

೧೮. ಇಂದುಬಾಯಿ ಟಿ.ಕೆ(ಸಂ), ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪುಟ-೧೪೧, ೧೯೮೭

೧೯. ಇಂದುಬಾಯಿ ಟಿ.ಕೆ(ಸಂ), ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪುಟ-೧೩೮, ೧೯೮೭

೨೦. ಇಂದುಬಾಯಿ ಟಿ.ಕೆ(ಸಂ), ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪುಟ-೧೪೨, ೧೯೮೭

೨೧. ದೇವುಡು ನರಸಿಂಹಶಾಸ್ತ್ರೀ, ಕರ್ನಾಟಕ ಸಂಸ್ಕೃತಿ(ತೃತೀಯ ಮುದ್ರಣ), ಪುಟ-೧೦೭, ೧೯೮೮

೨೨. ಅದೇ, ಪುಟ-೧೦೭

೨೩. ದೇವುಡು ನರಸಿಂಹಶಾಸ್ತ್ರೀ, ಕರ್ನಾಟಕ ಸಂಸ್ಕೃತಿ(ತೃತೀಯ ಮುದ್ರಣ), ಪುಟ-೧೦೫, ೧೯೮೮

೨೪. ಶ್ರೀನಿವಾಸಮೂರ್ತಿ ಹೆಚ್.ಎಸ್., ಸಮಗ್ರ ದಾಸಸಾಹಿತ್ಯ ಸಂಪುಟ-೧೫, ಪುಟ-೨೭೭, ೨೦೦೩

೨೫. ಶ್ರೀನಿವಾಸಮೂರ್ತಿ ಹೆಚ್.ಎಸ್., ಸಮಗ್ರದಾಸಸಾಹಿತ್ಯ ಸಂ-೧೫, ಪುಟ-೨೭೭-೨೭೮, ೨೦೦೩

೨೬. ಇಂದುಬಾಯಿ ಟಿ.ಕೆ.(ಸಂ), ಸಮಗ್ರದಾಸ ಸಾಹಿತ್ಯ, ಸಂಪುಟ-೮, ಪುಟ-೪೭೧, ೨೦೦೩

೨೭. ಇಂದುಬಾಯಿ ಟಿ.ಕೆ.(ಸಂ), ಸಮಗ್ರದಾಸ ಸಾಹಿತ್ಯ, ಸಂಪುಟ-೮, ಪುಟ-೪೭೫, ೨೦೦೩

೨೮. ಅದೇ, ಪುಟ-೪೭೫

೨೯. ಇಂದುಬಾಯಿ ಟಿ.ಕೆ.(ಸಂ), ಸಮಗ್ರದಾಸ ಸಾಹಿತ್ಯ, ಸಂಪುಟ-೮, ಪುಟ-೪೭೭, ೨೦೦೩

೩೦. ಡಾ. ನಾಗರತ್ನ ಟಿ.ಎಸ್.(ಸಂ), ಸಮಗ್ರದಾಸ ಸಾಹಿತ್ಯ, ಸಂಪುಟ ೨, ಪುಟ-೩೯೬, ೨೦೦೩

೩೧. ಅದೇ, ಪುಟ-೩೯೬

೩೨. ಬಸವರಾಜ ಸಬರದ (ಸಂ), ಸಮಗ್ರದಾಸ ಸಾಹಿತ್ಯ ಸಂ-೨೯, ಭಾಗ-೧, ಪುಟ-೫೯, ೨೦೦೩

೩೩. ಅದೇ, ಪುಟ-೫೯

೩೪. ಬಸವರಾಜ ಸಬರದ (ಸಂ), ಸಮಗ್ರದಾಸ ಸಾಹಿತ್ಯ ಸಂ-೨೯, ಭಾಗ-೧, ಪುಟ-೭೮, ೨೦೦೩

೩೫. ನಾಗರಾಜಯ್ಯ ಹಂಪ (ಸಂ), ಚಂದ್ರಸಾಗರವರ್ಣಿಯ ಕೃತಿಗಳು, ಪುಟ-೨೮, ೧೯೮೭

೩೬. ನಾಗರಾಜಯ್ಯ ಹಂಪ (ಸಂ), ಚಂದ್ರಸಾಗರವರ್ಣಿಯ ಕೃತಿಗಳು, ಪುಟ-೨೯, ೧೯೮೭

೩೭. ಡಾ. ಕೃಷ್ಣಾ ಕಟ್ಟಿ, (ಸಂ), ಶ್ರೀಕೃಷ್ಣಪಾರಿಜಾತ, ಪುಟ-೧೨೭, ೧೯೯೭

೩೮. ಡಾ. ಕೃಷ್ಣಾ ಕಟ್ಟಿ, (ಸಂ), ಶ್ರೀಕೃಷ್ಣಪಾರಿಜಾತ, ಪುಟ-೧೧೧, ೧೯೯೭

೩೯. ಡಾ. ಕೃಷ್ಣಾ ಕಟ್ಟಿ, (ಸಂ), ಶ್ರೀಕೃಷ್ಣಪಾರಿಜಾತ, ಪುಟ-೨೭೭, ೧೯೯೭

೪೦. ಬ್ರಹ್ಮಪ್ಪ ಜಿ., ಹಂಪನಾಗರಾಜಯ್ಯ (ಸಂ), ವಿಶ್ವಕವಿ ರತ್ನಾಕರನ ಭರತೇಶ ವೈಭವ, ಪುಟ-೧೨೯, ೧೯೬೭

೪೨. ಶಿವಣ್ಣ ಎಸ್.(ಸಂ), ಶೃಂಗಾರಮ್ಮ ವಿರಚಿತ ಪದ್ಮಿನಿ ಕಲ್ಯಾಣ, ಪುಟ-೯೧, ೧೯೯೫

೪೩. ಶಿವಣ್ಣ ಎಸ್.(ಸಂ), ಶೃಂಗಾರಮ್ಮ ವಿರಚಿತ ಪದ್ಮಿನಿ ಕಲ್ಯಾಣ, ಪುಟ-೯೫, ೧೯೯೫

೪೪. ಶಿವಾನಂದ ಎಸ್. ವಿರಕ್ತಮಠ (ಸಂ), ಕೊಡೆಕಲ್ಲ ವಚನವಾಕ್ಯ ಸಂಪುಟ-೨, ಪುಟ-೯೯, ೨೦೦೦

೪೫. ಶಿವಾನಂದ ಎಸ್. ವಿರಕ್ತಮಠ (ಸಂ), ಕೊಡೆಕಲ್ಲ ವಚನವಾಕ್ಯ ಸಂಪುಟ-೨, ಪುಟ-೯೮, ೨೦೦೦

೪೬. ಶಿವಾನಂದ ಎಸ್. ವಿರಕ್ತಮಠ (ಸಂ), ಕೊಡೆಕಲ್ಲ ವಚನವಾಕ್ಯ ಸಂಪುಟ-೨, ಪುಟ-೨೬೫, ೨೦೦೦

೪೭. ಶಿವಾನಂದ ಎಸ್. ವಿರಕ್ತಮಠ (ಸಂ), ಕೊಡೆಕಲ್ಲ ವಚನವಾಕ್ಯ ಸಂಪುಟ-೨, ಪುಟ-೩೦೫, ೨೦೦೦

೪೮. ಡಾ. ಭಾಸ್ಕರ ಟಿ.ಎಂ.(ಸಂ), ಆಯ್ದ ತತ್ವಪದಗಳು, ಪುಟ-೩೫, ೨೦೦೭

೪೯. ನೀಲಗಾರ ಎ.ಜಿ.(ಸಂ), ಜಾನಪದ ಝೇಂಕಾರ, ಪುಟ-೧೮, ೧೯೭೯

೫೦. ಪರಮಶಿವಯ್ಯ ಜಿ.ಶಂ.(ಸಂ), ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪುರಾಣಗಳು, ಪುಟ-೨೯೬, ೧೯೭೯

೫೧. ಅದೇ, ಪುಟ-೨೯೬

೫೨. ಕೃಷ್ಣಸ್ವಾಮಿ ಕೆ.ಆರ್., ಹಾಡುಚೆಲ್ಲ್ಯಾವೆ ನಾಡಿಗೆ, ಪುಟ-೨೨೭, ೧೯೯೫

೫೩. ಅದೇ, ಪುಟ-೨೨೭

೫೪. ಕೃಷ್ಣಸ್ವಾಮಿ ಕೆ.ಆರ್., ಹಾಡುಚೆಲ್ಲ್ಯಾವೆ ನಾಡಿಗೆ, ಪುಟ-೨೨೮-೨೨೯, ೧೯೯೫

೫೫. ಕಾಪಸೆ ರೇವಪ್ಪ(ಸಂ), ಮಲ್ಲಿಗೆದಂಡೆ, ಪುಟ-೩೨, ೧೯೯೦

೫೬. ಅದೇ, ಪುಟ-೩೨

೫೭. ಕಾಪಸೆ ರೇವಪ್ಪ(ಸಂ), ಮಲ್ಲಿಗೆದಂಡೆ, ಪುಟ-೩೩, ೧೯೯೦

೫೮. ಕಾಪಸೆ ರೇವಪ್ಪ(ಸಂ), ಮಲ್ಲಿಗೆದಂಡೆ, ಪುಟ-೩೪, ೧೯೯೦

೫೯. ಕೃಷ್ಣಮೂರ್ತಿ ಹನೂರು(ಸಂ), ಜನಪದ ಮತ್ತು ಬುಡಕಟ್ಟು ಗೀತೆಗಳು, ಪುಟ-೧೪೦, ೧೯೯೮

೬೦. ಅದೇ, ಪುಟ-೧೪೦

೬೧. ಕೃಷ್ಣಮೂರ್ತಿ ಹನೂರು(ಸಂ), ಜನಪದ ಮತ್ತು ಬುಡಕಟ್ಟು ಗೀತೆಗಳು, ಪುಟ-೧೪೦,೧೪೧ ೧೯೯೮

೬೨. ಕಾಳೇಗೌಡ ನಾಗವಾರ (ಸಂ), ಸಾಲು ಸಂಪಿಗೆಯ ನೆರಳು, ಪುಟ-೧೨೭, ೨೦೦೦

೬೩. ಅದೇ, ಪುಟ-೧೨೭

೬೪. ಪರಮಶಿವಯ್ಯ ಜಿ.ಶಂ.(ಸಂ), ಕರುಣೆ ಕಣ್ಣುತೆರೆಯೆ, ಪುಟ-೫೭, ೧೯೭೪

೬೫. ಪರಮಶಿವಯ್ಯ ಜಿ.ಶಂ.(ಸಂ), ಕರುಣೆ ಕಣ್ಣುತೆರೆಯೆ, ಪುಟ-೧೮, ೧೯೭೪

೬೬. ಪರಮಶಿವಯ್ಯ ಜಿ.ಶಂ.(ಸಂ), ಕರುಣೆ ಕಣ್ಣುತೆರೆಯೆ, ಪುಟ-೨೦, ೧೯೭೪

೬೭. ಪರಮಶಿವಯ್ಯ ಜಿ.ಶಂ.(ಸಂ), ಕರುಣೆ ಕಣ್ಣುತೆರೆಯೆ, ಪುಟ-೫೮, ೧೯೭೪

೬೮. ಕ.ರಾ.ಕೃ, ಜನಪ್ರಿಯ ಜಾನಪದ ಗೀತೆಗಳು, ಪುಟ-೩೭, ೧೯೮೩

೬೯. ಅದೇ, ಪುಟ-೩೭

೭೦. ನಾಗೇಗೌಡ ಎಚ್.ಎಲ್.(ಸಂ), ಸೋಬಾನೆ ಚಿಕ್ಕಮ್ಮನ ಪದಗಳು, ಪುಟ–೨೨೪(ದಿ.ಮು), ೧೯೯೭

೭೧. ಮರುಳಸಿದ್ದಪ್ಪ (ಸಂ), ಲಾವಣಿಗಳು, ಪುಟ–೧೭೫, ೧೯೭೩

೭೨. ಅರ್ಚಕ ಬಿ.ರಂಗಸ್ವಾಮಿ (ಸಂ), ಹುಟ್ಟಿದ ಹಳ್ಳಿ, ಪುಟ–೧೦೫, ೨೦೦೧

೭೩. ಅದೇ, ಪುಟ–೧೦೫

೭೪. ಅರ್ಚಕ ಬಿ.ರಂಗಸ್ವಾಮಿ (ಸಂ), ಹುಟ್ಟಿದ ಹಳ್ಳಿ, ಪುಟ–೧೦೮, ೨೦೦೧

೭೫. ಅದೇ, ಪುಟ–೧೦೮

೭೬. ಚಲುವರಾಜು (ಸಂ), ಜುಂಜಪ್ಪ, ಪುಟ–೩೭, ೧೯೯೭

೭೭. ಚಲುವರಾಜು (ಸಂ), ಜುಂಜಪ್ಪ, ಪುಟ–೫೭–೫೮, ೧೯೯೭

೭೮. ಚಲುವರಾಜು (ಸಂ), ಜುಂಜಪ್ಪ, ಪುಟ–೧೩೬, ೧೯೯೭

೭೯. ಜಿ.ಶಂ.ಪರಮಶಿವಯ್ಯ (ಸಂ), ದಕ್ಷಿಣ ಕರ್ನಾಟಕದ ಜಾನಪದ ಕಾವ್ಯ, ಪುಟ–೨೯೬, ೩೦೭, ೧೯೭೯

೮೦. ಡಾ. ಮೈತ್ರಿ ಕೆ.ಎಂ.(ಸಂ), ಕೃಷ್ಣಗೊಲ್ಲರ ಕಥನಗಳು, ಪುಟ–೧೭೦, ೨೦೦೦

೮೧. ಡಾ. ಮೈತ್ರಿ ಕೆ.ಎಂ.(ಸಂ), ಕೃಷ್ಣಗೊಲ್ಲರ ಕಥನಗಳು, ಪುಟ–೧೭೯, ೨೦೦೦

೮೨. ಡಾ. ರಮೇಶ ಸ.ಚಿ.(ಸಂ), ಸ್ಯಾಸಿ ಚಿನ್ನಮ್ಮನ ಕಾವ್ಯ, ಪುಟ–೭೦, ೧೯೯೯

೮೩. ಡಾ. ರಮೇಶ ಸ.ಚಿ.(ಸಂ), ಸ್ಯಾಸಿ ಚಿನ್ನಮ್ಮನ ಕಾವ್ಯ, ಪುಟ–೭೧, ೧೯೯೯

೮೪. ಡಾ. ರಮೇಶ ಸ.ಚಿ.(ಸಂ), ಸ್ಯಾಸಿ ಚಿನ್ನಮ್ಮನ ಕಾವ್ಯ, ಪುಟ–೧೩೮, ೧೯೯೯

೮೫. ಡಾ. ರಮೇಶ ಸ.ಚಿ.(ಸಂ), ಸ್ಯಾಸಿ ಚಿನ್ನಮ್ಮನ ಕಾವ್ಯ, ಪುಟ–೧೪೧, ೧೯೯೯

* * *

ನೆಮ್ಮದಿಯ ಜೀವನ ನಡೆಸಬೇಕೆನ್ನುವದು ಪ್ರತಿಯೊಬ್ಬ ಮನುಷ್ಯನ ಆಸೆ ಮತ್ತು ಕನಸಾಗಿರುತ್ತದೆ. ಅದಕ್ಕಾಗಿ ಪ್ರತಿಯೊಬ್ಬರು ಹಾತೊರೆಯುತ್ತಿರುತ್ತಾರೆ. ಆದರೆ ಜೀವನದಲ್ಲಿ ಕಷ್ಟನಷ್ಟಗಳು ಬರುವದು ಸಹಜ. ಆಗ ಮನುಷ್ಯ ಅವುಗಳಿಂದ ಎದೆಗುಂದದೆ ಸಹನೆ, ತಾಳ್ಮೆಯಿಂದ ಅವುಗಳನ್ನು ಎದುರಿಸಿದರೆ, ಬಯಸಿದ ನೆಮ್ಮದಿಯ ಜೀವನವನ್ನು ಪಡೆಯಬಹುದು. ಸಮಸ್ಯೆಗಳು ಬಂದಾಗ ಅವುಗಳಿಂದ ಪಲಾಯನ ಮಾಡುವವರೇ ಬಹುತೇಕರಾಗಿರುತ್ತಾರೆ. ಆದರೆ ಕೊರವಂಜಿಯಂಥ ಕೆಳವರ್ಗದ ಹೆಣ್ಣುಮಕ್ಕಳು ತಮ್ಮ ಸಹನೆ, ತಾಳ್ಮೆ, ಹೊಂದಾಣಿಕೆ, ವಿಶಾಲ ಮನೋಭಾವ, ದೂರದೃಷ್ಟಿತ್ವದ ಮೂಲಕ ತಮಗೊದಗಿದ ಸಮಸ್ಯೆಯಿಂದ ಬಿಡಿಸಿಕೊಳ್ಳುತ್ತಾರೆ. ಸಮಸ್ಯೆಗಳ ನಡುವೆಯೂ ನೆಮ್ಮದಿಯ ಬದುಕನ್ನು ಕಟ್ಟಿಕೊಳ್ಳುತ್ತಾಳೆ.

ಕೊರವಂಜಿಯಂಥ ಕೆಳವರ್ಗದ ಹೆಣ್ಣುಮಕ್ಕಳು ತಮ್ಮ ನಿತ್ಯ ಬದುಕಿನಲ್ಲಿ ಅನೇಕ ರೀತಿಯ ಸಂಕಷ್ಟಗಳನ್ನು ಎದುರಿಸುತ್ತಾರೆ. ಇವಳು ಕುಟುಂಬದಲ್ಲಿ ಪತಿ, ಅತ್ತೆ, ಮಾವ, ನಾದಿನಿ, ವಾರಗಿತ್ತಿ ಸಂಬಂಧಗಳಿಂದ ಬರುವ ಸಮಸ್ಯೆಗಳು ಒಂದು ರೀತಿಯವಾದರೆ ಹೊರಜಗತ್ತಿನಿಂದ ಬರುವ ಸಮಸ್ಯೆಗಳು ಮತ್ತೊಂದು ರೀತಿಯವು ಹೆಚ್ಚಿನ ಸಂದರ್ಭದಲ್ಲಿ ತನ್ನ ಕುಟುಂಬದ ಜವಾಬ್ದಾರಿ ಹೊತ್ತ ಕೊರವಂಜಿ ಅದಕ್ಕಾಗಿ ದುಡಿಯಲು ಮನೆಯಿಂದ ಹೊರ ಬರಬೇಕಾಗುತ್ತದೆ. ಅಲ್ಲಿಯು ಸಹ ಅನೇಕ ರೀತಿಯ ಸಮಸ್ಯೆಗಳು ಎದುರಾಗುತ್ತವೆ. ಹೀಗೆ ಕುಟುಂಬದ ಒಳಗೆ ಮತ್ತು ಕುಟುಂಬದ ಹೊರಗಿನ ಜನರಿಂದ ಒದಗುವ ಸಮಸ್ಯೆಗಳು ಮತ್ತು ಅದರಿಂದುಂಟಾಗುವ ನೋವು ಸಂಕಟಗಳನ್ನು ಇವರು ಅನುಭವಿಸಬೇಕಾಗುತ್ತದೆ.

ಆಂತರಿಕ ಸಮಸ್ಯೆಗಳಿಂದ ಅನುಭವಿಸುವ ನೋವು, ಸಂಕಟ ಆ ಸಂಕಟವನ್ನು ಅನುಭವಿಸಿದವರಿಗೆ ಮಾತ್ರ ಅರಿಯಲು ಸಾಧ್ಯವಾಗುತ್ತದೆ. ಕೊರವಂಜಿಯರು ಇಂಥ ಆಂತರಿಕ ಮತ್ತು ಬಾಹ್ಯ ಸಮಸ್ಯೆಗಳನ್ನು ನಿತ್ಯವೂ ಅನುಭವಿಸುತ್ತಾರೆ. ಆ ಸಂಕಟಕ್ಕೆ ಕಾರಣವಾದ ಸಮಸ್ಯೆಯತ್ತ ಗಮನಹರಿಸಿ,

ಆ ಸಮಸ್ಯೆ ನಿವಾರಿಸಿ ಆ ಮೂಲಕ ಸಂಕಟಗಳನ್ನು ಪರಿಹರಿಸಿಕೊಳ್ಳುವ ಗುಣ ಅವರಲ್ಲಿ ಕಾಣುತ್ತದೆ. ಇಂತಹ ಕೊರವಂಜಿಯರು ತಮ್ಮ ದಿನನಿತ್ಯದ ಬದುಕಿನಲ್ಲಿ ಹೊರಗೆ ಹಾಗೂ ಒಳಗೆ ಅನುಭವಿಸುವ ಸಂಕಟಗಳು, ಅವುಗಳಿಂದ ಅವರು ಬಿಡಿಸಿಕೊಳ್ಳುವ ರೀತಿಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಸಮಾಜದ ಪ್ರತಿಯೊಂದು ಕುಟುಂಬದಲ್ಲಿಯೂ ಸಮಸ್ಯೆಗಳಿರುವದು ಸಹಜ. ಅದರಲ್ಲಿಯೂ ಕುಟುಂಬದಲ್ಲಿ ಪರಸ್ಪರ ಪ್ರೀತಿ, ವಿಶ್ವಾಸ, ಹೊಂದಾಣಿಕೆಗಳು ಇರದಿದ್ದಾಗ ಕುಟುಂಬ ಎನ್ನುವುದು ಸಮಸ್ಯೆಗಳ ಸುಳಿಯಾಗುತ್ತದೆ. ಆಗ ಸಂಕಟವನ್ನು ಎದುರಿಸುವವರು ಬಹುತೇಕವಾಗಿ ಮಹಿಳೆಯರೇ ಆಗಿರುತ್ತಾರೆ. ಅವಿಭಕ್ತ ಕುಟುಂಬದಲ್ಲಿ ಅತ್ತೆ ಸೊಸೆಯರ, ಅತ್ತಿಗೆ ನಾದಿನಿಯರ, ವಾರಿಗಿತ್ತಿಯರ, ಸವತಿಯರ ಮತ್ಸರ, ಗಂಡಸರ ಚಟಗಳು ಹಾಗೂ ಅವರ ಬೇಜವಾಬ್ದಾರಿತನಗಳು, ಮನೆಯ ಆರ್ಥಿಕ ಪರಿಸ್ಥಿತಿಗಳು, ಕೌಟುಂಬಿಕ ಕಲಹಗಳಿಗೆ ಕಾರಣವಾಗುತ್ತವೆ. ಇವು ಮನೆಯ ಹೆಣ್ಣುಮಕ್ಕಳನ್ನು ಸಂಕಷ್ಟಕ್ಕೀಡುಮಾಡುತ್ತವೆ. ಅಂತಹ ಸಂಕಷ್ಟಗಳನ್ನು ಶ್ರಮಿಕವರ್ಗದ ಕೊರವಂಜಿ ಸಹ ಎದುರಿಸುತ್ತಾಳೆ.

### ೪.೧. ಅನನ್ಯತೆ ಹಾಗೂ ಅಸ್ಮಿತತೆಯ ನೆಲೆಗಳು

ಪ್ರತಿಯೊಬ್ಬ ಹೆಣ್ಣು ಗಂಡ ತನಗೆ ಮಾತ್ರ ನಿಷ್ಠನಾಗಿರಬೇಕೆಂದು ಬಯಸುತ್ತಾಳೆ. ಆತನನ್ನು ಮತ್ತೊಬ್ಬರೊಂದಿಗೆ ಹಂಚಿಕೊಳ್ಳಲು ಬಯಸುವುದಿಲ್ಲ. ಆತ ಮತ್ತೊಂದು ಮದುವೆಯಾದಾಗ ಅವಳು ಆತನಿಂದ ಮೊದಲು ಪಡೆಯುತ್ತಿದ್ದ ಪ್ರೀತಿ, ವಿಶ್ವಾಸ, ಗೌರವಗಳನ್ನು ಮತ್ತೆ ಪಡೆಯಲು ಸಾಧ್ಯವಿಲ್ಲ. ಹಾಗಾಗಿ ಯಾವ ಹೆಣ್ಣುಮಗಳು ಸವತಿ ಆಗಮನವನ್ನು ಸಹಿಸಲಾರಳು. ಇಂಥ ಸಂದರ್ಭಗಳು ಬಂದಾಗ ಮೇಲ್ವರ್ಗದ ಮಧ್ಯಮವರ್ಗದ ಮಹಿಳೆಯರು ಹೊರಗೆ ಹೊಂದಾಣಿಕೆ ಮಾಡಿಕೊಂಡು ಬಾಳಿದಂತೆ ನಟಿಸುತ್ತಾರೆ ಅಥವಾ ವಿಚ್ಛೇದನೆ ಪಡೆಯುತ್ತಾರೆ. ಇಲ್ಲದಿದ್ದರೆ ಈ ಸಂಕಟವನ್ನು ಸಹಿಸದೆ ಮಾನಸಿಕ ಖಿನ್ನತೆಗೆ ಒಳಗಾಗುವ ಅಥವಾ ಆತ್ಮಹತ್ಯೆಯಂತಹ ಕಠಿಣ ನಿರ್ಧಾರಕ್ಕೆ ಬರುವ ಪ್ರಕರಣಗಳೇ ಹೆಚ್ಚು.

ಕೆಳವರ್ಗದಲ್ಲಿ ಗಂಡು ಹೆಣ್ಣುಗಳು ಎಷ್ಟೇ ಸಮಸ್ಯೆ ಇದ್ದರೂ ಒಂದು ರೀತಿಯ ಅಖಂಡ ಜೀವಿಗಳೆಂಬ ನಂಬಿಕೆ ಬೆಳೆದುಕೊಂಡಿದೆ. ಸಂಸಾರದಲ್ಲಿ ಇಬ್ಬರೂ ಸಮಾನರೇ. ಇಬ್ಬರೂ ಸೇರಿಯೇ ಕುಟುಂಬದ ಜವಾಬ್ದಾರಿ ನಿರ್ವಹಣೆ ಮಾಡಬೇಕಾಗುತ್ತದೆ. ಇದೇ ರೀತಿಯ ಭಾವ ಕೊರವ ಜನಾಂಗದಲ್ಲಿಯೂ ಇದೆ. ಆದರೆ ಇಂತಹ ಗಂಡ ಇನ್ನೊಂದು ಮದುವೆಯಾದಾಗ, ಹೆಂಡತಿಯಾದವಳು ಅನುಭವಿಸುವ ಸಂಕಟ ಹೇಳಲಾಗದು. ಆಗ ಅವಳು ಗಂಡನಿಂದ ನಿರ್ಲಕ್ಷ್ಯಕ್ಕೆ ಒಳಗಾಗುವಂತೆ ಕುಟುಂಬ ಹಾಗೂ ಸಮಾಜದಿಂದ ಅಲಕ್ಷ್ಯಕ್ಕೆ ಒಳಗಾಗುವ ಸಾಧ್ಯತೆಗಳೇ ಹೆಚ್ಚು. ಆದರೆ ಅಂಥ ಸಂದರ್ಭದಲ್ಲಿ ಕೊರವ ಮಹಿಳೆಯರು ವಿಚ್ಛೇದನ ಪಡೆಯುವ ಮಾನಸಿಕ ಖಿನ್ನತೆಗೆ ಒಳಗಾಗುವ, ಆತ್ಮಹತ್ಯೆ ಮಾಡಿಕೊಳ್ಳುವ ನಿರ್ಧಾರ ಮಾಡುವುದು ಹೆಚ್ಚಿನ ಸಂದರ್ಭದಲ್ಲಿ ಕಾಣಿಸುವುದಿಲ್ಲ. ಬದಲಾಗಿ ಅವರೊಂದಿಗೆ ಹೊಂದಿಕೊಂಡು ಸಾಮರಸ್ಯದ ಜೀವನವನ್ನು ನಡೆಸುವ ಪ್ರಯತ್ನವನ್ನು ಮಾಡುತ್ತಾಳೆ.

ಮೇಲ್ವರ್ಗದ ಮತ್ತು ಮಧ್ಯಮವರ್ಗದ ಮಹಿಳೆಯರು ಗೌರವದ ಸೆರಗಿನಲ್ಲಿ ಹೆಚ್ಚಾಗಿ ಪರಾವಲಂಬಿ ಜೀವನವನ್ನು ನಡೆಸುತ್ತಿರುತ್ತಾರೆ. ಅವರು ಪತಿಯ ಪ್ರಭಾವಲಯದಲ್ಲಿಯೇ ತಮ್ಮನ್ನು ಗುರುತಿಸಿಕೊಂಡು ಬದುಕುತ್ತಿರುತ್ತಾರೆ. ಆದರೆ ಕೊರವಂಜಿಯರು ಸ್ವಾವಲಂಬಿ ಜೀವಿಗಳು ತಮ್ಮ ಅಸ್ತಿತ್ವವನ್ನು ತಾವೇ ಸ್ಥಾಪಿಸಿಕೊಂಡಿರುತ್ತಾರೆ. ಹೀಗಾಗಿ ಅವರು ತಮ್ಮ ಅಸ್ತಿತ್ವಕ್ಕೆ ಧಕ್ಕೆ ಬಂದಿತೆಂದು ಖಿನ್ನತೆಗೆ ಒಳಗಾಗುವ, ಆತ್ಮಹತ್ಯೆ ಮಾಡಿಕೊಳ್ಳುವ ಪ್ರಯತ್ನವನ್ನು ಮಾಡುವದಿಲ್ಲ. ಹಾಗೆಂದು ಅವರು ಈ ಘಟನೆಯಿಂದ ಸಂಕಟಪಡುವುದಿಲ್ಲವೆಂದು ಅರ್ಥವಲ್ಲ. ಅವರು ಸಹ ಇದರಿಂದ ಆಂತರಿಕ ಸಂಕಟವನ್ನು ಅನುಭವಿಸುತ್ತಾರೆ. ಆದರೆ ಕೇವಲ ಆ ಸಕಂಟದ ಬಗ್ಗೆ ಚಿಂತಿಸುತ್ತಾ ಕೂಡದೇ ಆ ಸಂಕಟಕ್ಕೆ ಕಾರಣವಾದ ಸಮಸ್ಯೆಯನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ತಮ್ಮದೇಯಾದ ಅಸ್ತಿತ್ವ ಸ್ಥಾಪಿಸಿಕೊಂಡು ವಿಶಾಲ ದೃಷ್ಟಿಕೋನ ಬೆಳಸಿಕೊಂಡಿರುವುದರಿಂದ ಇವರು ಒಮ್ಮೊಮ್ಮೆ ಸವತಿಯೊಂದಿಗೂ ಸಹಜೀವನ ನಡೆಸುವುದನ್ನು ಕಾಣುತ್ತದೆ.

ಒಂದು ವೇಳೆ ಅಲ್ಲಿ ಸಾಮರಸ್ಯ ಅಸಾಧ್ಯವೆನಿಸಿದಾಗ ಅವಳು ಅಲ್ಲಿಂದ ಹೊರಬರುತ್ತಾಳೆ. ಹಾಗೇ ಹೊರಬರುವಾಗ ಮೇಲಿನ ಎರಡು ವರ್ಗದ ಮಹಿಳೆಯರಂತೆ ಪತಿಯಿಂದ ಮುಂದಿನ ಜೀವನಕ್ಕಾಗಿ ಪರಿಹಾರ ಧನವನ್ನು ಇವಳು ತರುವದಿಲ್ಲ. ಪತಿಯೇ ಬೇಡವೆಂದಾಗ ಆತನ ಹಣವೇಕೆ ಎಂಬ ಧೋರಣೆ ಇವಳದು. ಹೀಗೆ ಕುಟುಂಬದಿಂದ ಹೊರಬಂದ ಮಹಿಳೆಯನ್ನು ಸಮಾಜ ಅಪಮಾನಿಸುವದು, ಅವಮಾನಿಸುವದು ಸಹಜ. ಆಗ ಇವಳು ಅದೇ ಸಮಾಜವನ್ನೇ ತನ್ನ ಕುಟುಂಬವೆಂಬ ವಿಶಾಲ ಮನೋಭಾವನೆ ಬೆಳಸಿಕೊಳ್ಳುತ್ತಾಳೆ. ಒಬ್ಬಂಟಿತನವನ್ನು ಸಮಾಜದ ಒಡನಾಟದಲ್ಲಿ ಮರೆಯುತ್ತಾಳೆ. ಸಾಮಾಜಿಕ ಸೇವಾಕಾರ್ಯಗಳ ಮೂಲಕ ತನ್ನ ಮಾನಸಿಕ ನೋವು, ಸಂಕಟವನ್ನು ಮರೆಯುತ್ತಾಳೆ. ಸಮಾಜದಲ್ಲಿ ತನ್ನಂತೆ ನೋವು ಅನುಭವಿಸುತ್ತಿರುವವರಿಗೆ ಸಾಂತ್ವನದ ಹಾಗೂ ಭರವಸೆಯ ಮಾತುಗಳನ್ನು ಆಡುವ ಮೂಲಕ ಅವರ ನೋವನ್ನು ಸಹ ನಿವಾರಿಸುತ್ತಾಳೆ. ತನ್ನ ಸಂಕಟವೇ ದೊಡ್ಡದು ಎಂದು ತಿಳಿಯದೇ, ಅದೇ ರೀತಿಯ ಸಂಕಟದಲ್ಲಿರುವವರಿಗೆ ತನ್ನ ಅನುಭವದ ಮೂಲಕ ಸಹಾಯ ಸಾಂತ್ವನ, ಪರಿಹಾರ ನೀಡುತ್ತಾಳೆ. ಯಾವ ಸಮಾಜ ಅವಳನ್ನು ಅನುಮಾನಿಸಿತ್ತೋ, ಅದೇ ಸಮಾಜ ತನ್ನನ್ನು ಪ್ರೀತಿಸುವಂತೆ ಮಾಡುತ್ತಾಳೆ. ಆಗ ಸಮಾಜ ಕುಟುಂಬದಂತೆ ಯಾವ ಕಟ್ಟುಪಾಡುಗಳಿಲ್ಲದೆಯೇ ಅವಳಿಗೆ ಬೇಕಾದ ಸ್ನೇಹ, ಬೆಂಬಲವನ್ನು ನೀಡುತ್ತದೆ. ಒಂದು ಭದ್ರತೆಯ ಭಾವನೆಯನ್ನು ಅವಳಿಗೆ ಕಲ್ಪಿಸುತ್ತದೆ. ತನ್ನ ನಿರಪೇಕ್ಷ ಸೇವೆಯಿಂದ ಸಮಾಜದ ಪ್ರೀತಿ, ಗೌರವಕ್ಕೆ ಇವರು ಪಾತ್ರರಾಗುತ್ತಾರೆ.

ಕೊರವ ಜನಾಂಗದಲ್ಲಿ ಈಗಲೂ ಬಹುಪತ್ನಿತ್ವ ಪದ್ಧತಿ ಅಸ್ತಿತ್ವದಲ್ಲಿದೆ. ಸಾಮಾನ್ಯವಾಗಿ ಹಿರಿಯವಳಿಗೆ ಮಕ್ಕಳಾಗದಾಗ ಮತ್ತೊಂದು ಮದುವೆಯನ್ನು ಮಾಡಿಕೊಳ್ಳುತ್ತಾರೆ. ಅಕ್ಕತಂಗಿಯರನ್ನು ಬೇರೆ ಕಡೆ ಏಕೆ ಕೊಡುವುದು, ಇಬ್ಬರು ಜೊತೆಯಾಗಿಯೆ ಇರಲಿ ಎಂಬ ಕಾರಣಕ್ಕೋ, ಆಸ್ತಿ ಬೇರೆ ಕಡೆ ಹಂಚಿ ಹೋಗಬಾರದೆಂಬ ಕಾರಣಕ್ಕೋ, ಇವರಲ್ಲಿ ದ್ವಿಪತ್ನಿತ್ವ ಪದ್ಧತಿಯನ್ನು ಅನುಸರಿಸುತ್ತಾರೆ.[೧] ಆಗ ಕೊರವ ಮಹಿಳೆಯರು ಕುಟುಂಬ ತೊರೆದು ಹೊರಬರದೆ ಹೊಂದಿಕೊಂಡು ಸಹಬಾಳ್ವೆ ಮಾಡುವುದೇ ಹೆಚ್ಚಾಗಿ ಕಂಡುಬರುತ್ತದೆ. ಕೊರವಂಜಿ ಪದದಲ್ಲಿ ಬರುವಂತೆ

"ಹಿತದವರ್‍ಯಾರಿಲ್ಲ ಎನಗಿಂತ ಹಿರಿಯರು ಸತಿಯರು ಕೊರಮಗುಂಟು
ಮತಿವಂತೆ ನೀ ಎನ್ನ ಮನ್ನಿಸಿ ಕಳುಹವ್ವ ಪತಿಯಾಜ್ಞೆಗಳುಂಟು
ಬಹಳ ಹೊತ್ತಾಯಿತು ಬೈದಾಳು ಸವತಿಯು ಆಳುವ ಕೊರಮ ಹೀನ
ಬಾಲನ ನೆತ್ತಿಗೆ ಎಣ್ಣೆಯನೆರೆಯವ್ವ ವೀಳ್ಯವ ಕೊಡುಯೆನಗೆ"[೨]

ಎಂದು ತನ್ನ ಕೌಟುಂಬಿಕ ಸಮಸ್ಯೆಯನ್ನು ತೋಡಿಕೊಂಡಿದ್ದಾಳೆ. ಆಜ್ಞೆಯನ್ನು ಮಾಡುವ ಹೀನ ಗಂಡ, ಹೊತ್ತಾದರೆ ಬಯ್ಯುವ ಸವತಿಯರು, ತನ್ನ ಹಿತವನ್ನು ಕಾಪಾಡಲು ಯಾರು ಇಲ್ಲಿ ಎಂದು ಕೊರವಿ ತನ್ನ ಸಂಕಟವನ್ನು ತೋಡಿಕೊಳ್ಳುತ್ತಾಳೆ. ಆದರೆ ಇವುಗಳಿಂದ ಬೇಸತ್ತು ಕುಟುಂಬದಿಂದ ಹೊರಬರುವ ಯೋಚನೆ ಅವಳಲ್ಲಿಲ್ಲ. ಅವರ ನಿಯಮಗಳಿಗೆ ಬದ್ಧಳಾಗಿ, ಅವರೊಂದಿಗೆ ಹೊಂದಾಣಿಕೆ ಜೀವನವನ್ನು ನಡೆಸುವುದರಲ್ಲಿಯೇ ಅವಳು ನೆಮ್ಮದಿ ಕಾಣಬಯಸುತ್ತಾಳೆ. ಸಮಸ್ಯೆಗಳ ಸುಳಿಯಲ್ಲಿ ಸಿಕ್ಕು ಸಂಕಟದಲ್ಲಿ ಬೇಯುತ್ತಿದ್ದರೂ, ಅವುಗಳನ್ನು ಎದುರಿಸುತ್ತಲೇ ತನ್ನ ಜೀವನ ರೂಪಿಸಿಕೊಳ್ಳಲು ಪ್ರಯತ್ನಿಸುತ್ತಾಳೆ.

"ಕೇಳೆ ಯರಿ ಮುಂಡೆ ಸಾತಮ್ಮ ನನ್ನ
ಗಂಡನಿಗೆ ಏಳುಜನ
ಹೆಣತೇರು ಕೇಳಮ್ಮ
ನನ್ನ ಗಂಡ ಕೊರಮನಮ್ಮ"[೩]

ಇಲ್ಲಿ ಸಹ ಕೊರವಂಜಿ ತನ್ನ ಗಂಡನಿಗೆ ಏಳುಜನ ಹೆಂಡತಿಯರಿರುವ ವಿಷಯವನ್ನು ತಿಳಿಸುತ್ತಾಳೆ. ಹೀಗಿದ್ದರೂ ಅವಳು ತನ್ನ ಕುಟುಂಬದಿಂದ ಹೊರಬರಲು ಬಯಸುವುದಿಲ್ಲ. ಹೊರಗೆ ಬಂದಾಗ ತಮ್ಮ ಬದುಕನ್ನು ಕಟ್ಟಿಕೊಳ್ಳುವ ಶಕ್ತಿ ಇಲ್ಲದ್ದರಿಂದಲೋ ಅಥವಾ ಇವರಲ್ಲಿ ಮರುವಿವಾಹ, ವಿಧವಾವಿವಾಹಗಳಿಗೆ ಆಸ್ಪದವಿಲ್ಲದ್ದರಿಂದಲೋ ಅವರು ಹೊಂದಾಣಿಕೆ ಜೀವನ ನಡೆಸುತ್ತಾರೆಂದಲ್ಲ. ಅವೆಲ್ಲವಕ್ಕು ಆಸ್ಪದವಿದ್ದರೂ ಅವರು ಹೊಂದಾಣಿಕೆಯಲ್ಲಿಯೇ ನೆಮ್ಮದಿ ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ.

ಆದರೆ ಕುಟುಂಬದಲ್ಲಿ ಹೊಂದಾಣಿಕೆ ಅಸಾಧ್ಯವಾದಾಗ ಅಲ್ಲಿಂದ ಹೊರಬಂದು ಜೀವನವನ್ನು ರೂಪಿಸಿಕೊಳ್ಳುವ ಶಕ್ತಿ ಈ ಹೆಣ್ಣುಮಕ್ಕಳಲ್ಲಿದೆ. ಕುಟುಂಬ ನಿರ್ವಹಣೆಯ ಸಾಮರ್ಥ್ಯವನ್ನು ಕೊರವ ಮಹಿಳೆಯರು ಹೊಂದಿರುವುದರಿಂದ ಕುಟುಂಬದಿಂದ ಹೊರಬಂದ ಮಹಿಳೆಯರಿಗೆ ಇತರ ವರ್ಗದ ಮಹಿಳೆಯರನ್ನು ಕಾಡುವ ಕಟ್ಟುಪಾಡುಗಳು ಕಾಡುವುದಿಲ್ಲ. ಇವರಿಗೆ ಮರುವಿವಾಹ, ವಿಧವಾ ವಿವಾಹಗಳಿಗೆ ಅವಕಾಶಗಳಿವೆ. ಅವರ ದುಡಿಮೆಯ ಸಾಮರ್ಥ್ಯವೇ ಅವರಿಗೆ ಈ ಅವಕಾಶವನ್ನು ನೀಡಿದೆ ಎನ್ನಬಹುದು.

"ಕೊರವರಲ್ಲಿ ಹೆಣ್ಣುಮಕ್ಕಳ ಮರುವಿವಾಹ ಪದ್ಧತಿಯು ಅಸ್ತಿತ್ವದಲ್ಲಿದೆ. ಅಂತಹ ಸಂದರ್ಭದಲ್ಲಿ ಮೊದಲ ಪತಿಯಿಂದ ಪಡೆದಿದ್ದ ತೆರವನ್ನು ಆತನಿಗೆ ಮರಳಿಕೊಟ್ಟು ಮರುವಿವಾಹವಾಗುತ್ತಾರೆ. ಅಂತೆಯೇ ವಿಧವಾ ವಿವಾಹಕ್ಕೂ ಇವರಲ್ಲಿ ನಿರ್ಬಂಧವಿಲ್ಲ. ಕೊರವ ಹೆಣ್ಣು ಮಗಳು ತನ್ನ ಮನಸ್ಸಿಗೆ ಬಂದಷ್ಟು ಸಲ ವಿವಾಹವಾಗುವ ಅವಕಾಶಗಳಿವೆ."[೪]

ಎಂಬ ಮಾತುಗಳು ಕೊರವ ಮಹಿಳೆಯರಿಗಿರುವ ಮರುವಿವಾಹ ಪದ್ಧತಿಗಳ ಅಸ್ತಿತ್ವವನ್ನು ತಿಳಿಸುತ್ತವೆ. ಕೌಟುಂಬಿಕ ಹೊಂದಾಣಿಕೆ ಅಸಾಧ್ಯವಾದಾಗ ಅಲ್ಲಿಂದ ಹೊರಬರುವ ಈ ಕೊರವಂಜಿಯರು ಮತ್ತೆ ವಿವಾಹದ ಮೂಲಕ ತಮ್ಮ ಬದುಕನ್ನು ಕಟ್ಟಿಕೊಳ್ಳುತ್ತಾರೆ. ಆದರೆ ಮೊದಲ ಪತಿಯಿಂದ ವಿಚ್ಛೇದನ ಪರಿಹಾರವನ್ನು ಕೇಳುವುದಿಲ್ಲ. ಬದಲಾಗಿ ಆತ ಕೊಟ್ಟ ತೆರವನ್ನು ಇವರು ಆತನಿಗೆ ಮರಳಿ ನೀಡುತ್ತಾರೆ. ತನಗೆ ಪತಿಯಾಗಿರದವನ ಹಂಗಿನ ಹಣವೇಕೆ ಎಂಬ ಸ್ವಾಭಿಮಾನದ ಜೀವನ ಇವರದು.

ಹೀಗೆ ಮರುಮದುವೆಯಾದ ಹೆಣ್ಣುಮಕ್ಕಳನ್ನು ಇವರ ಸಮಾಜವು ಗೌರವದಿಂದಲೇ ಕಾಣುತ್ತದೆ. "ಒಬ್ಬ ಕೊರವ ಹೆಣ್ಣುಮಗಳು ಗಂಡಸತ್ತೋ ಅಥವಾ ವಿಚ್ಛೇದನ ಕೊಟ್ಟೋ ಏಳು ಬಾರಿ ಮದುವೆಯಾಗಿ ಏಳನೆಯವನು ಸತ್ತೋ ಅಥವಾ ವಿಚ್ಛೇದನ ಕೊಟ್ಟೋ ಅವನಿಂದ ಬೇರೆಯಾದರೆ, ಅವಳನ್ನು ಪೆದ್ದಬೊಯಿಸಾನಿ ಎಂದು ಗೌರವಿಸುವ, ಶುಭ ಸಮಾರಂಭಗಳಲ್ಲಿ ಮುಂದಾಳತ್ವ ವಹಿಸುವ ಪದ್ಧತಿಯು ಕೊರವರಲ್ಲುಂಟು"[೫]

"ಕೆಲವು ಕೊರವರಲ್ಲಿ ಸತ್ತ ವ್ಯಕ್ತಿಯ ಹೆಂಡತಿಯು ಚಿಕ್ಕವಯಸ್ಸಿನವಳಾಗಿದ್ದಲ್ಲಿ ಅದೇ ದಿನ ಅವಳನ್ನು ಯಾರಾದರೂ ಮದುವೆಯಾಗಿ ಶವಸಂಸ್ಕಾರದ ಯಾತ್ರೆಯಲ್ಲಿ ಪ್ರಮುಖ ಪಾತ್ರ ವಹಿಸುವುದು ಸಂಪ್ರದಾಯವಾಗಿ ಬಂದಿದೆ."[೬]

ಶ್ರಮಿಕರಾದ ಇವರು ತಮ್ಮ ಬದುಕನ್ನು ತಾವೇ ರೂಢಿಸಿಕೊಳ್ಳುವ ಶಕ್ತಿ ಹೊಂದಿರುವುದರಿಂದ ಮತ್ತು ದುಡಿಮೆಯಲ್ಲಿ ಪ್ರಮುಖ ಪಾತ್ರ ವಹಿಸುವುದರಿಂದ ಮೇಲಿನ ಎರಡು ವರ್ಗಗಳು ಅನುಸರಿಸುವ ಸಾಮಾಜಿಕ ಕಟ್ಟುಪಾಡುಗಳು ಇವರನ್ನು ಆಕ್ರಮಿಸಿಲ್ಲ. ಹೀಗಾಗಿ ಮರುವಿವಾಹ, ವಿಧವಾ ವಿವಾಹದಂತಹ ಪದ್ಧತಿಗಳು ಇವರಲ್ಲಿ ಅಸ್ತಿತ್ವದಲ್ಲಿವೆ.

ಗಂಡ ಅನ್ಯ ಹೆಂಗಸಿನ, ವೇಶ್ಯೆಯ ಸಹವಾಸ ಮಾಡಿದಾಗಲೂ ಹೆಂಡತಿ ಅನುಭವಿಸುವ ನೋವು ಹೇಳತೀರದು. ಇದರಿಂದ ಅವಳು ಪತಿಯ ಪ್ರೀತಿಯನ್ನು ಕಳೆದುಕೊಳ್ಳುವುದರೊಂದಿಗೆ, ಕುಟುಂಬವು ಆರ್ಥಿಕವಾಗಿ ಹಿನ್ನಡೆಯನ್ನು ಅನುಭವಿಸುತ್ತದೆ. ಸಮಾಜವು ಸಹ ಎಷ್ಟೋ ಸಲ ಹೆಂಡತಿಯರದ್ದೆ ತಪ್ಪು ಎಂಬ ಭಾವನೆಯಿಂದ ತಪ್ಪಿಲ್ಲದಿದ್ದರೂ ಹೆಣ್ಣುಮಗಳನ್ನು ಕೀಳಾಗಿ ಕಾಣುತ್ತದೆ. ಅಂತಹ ಸಂದರ್ಭದಲ್ಲಿ ಬಹುತೇಕ ಮಹಿಳೆಯರು ಆ ನೋವನ್ನು ಸಹಿಸದೆ ಮಾನಸಿಕವಾಗಿ ಜರ್ಜರಿತರಾಗುತ್ತಾರೆ. ಆದರೆ ಮಾನಸಿಕವಾಗಿ ಸಧೃಡವಾದ ಕೊರವಿಯರು ಇಂತಹ ಸಂಕಟವನ್ನು ಅನುಭವಿಸುತ್ತಲೆ ಅದಕ್ಕೆ ಪರಿಹಾರವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡುತ್ತಾರೆ. ಸಮಸ್ಯೆಗೆ ಕಾರಣವಾದ ವೇಶ್ಯೆಯಿಂದ ತನ್ನ ಗಂಡನನ್ನು ಹೊರತಂದು ತಮ್ಮ ಬದುಕನ್ನೇ ಸರಿಪಡಿಸಿಕೊಳ್ಳುತ್ತಾರೆ. ಒಂದು ವೇಳೆ ಅದು ಅಸಾಧ್ಯವಾದಾಗ ಮಾತ್ರ ಅವನಿಂದ ದೂರವಾಗಿ ಸ್ವತಂತ್ರ ಬದುಕನ್ನು ರೂಢಿಸಿಕೊಳ್ಳುತ್ತಾರೆ. ಒಂದು ಕೊರವಂಜಿ ಹಾಡಿನಲ್ಲಿ ಕೊರವಂಜಿ

"ಗಂಡನ ನೋಡಿ ಬರುವೆ ಗಂಡನ
ರಂಡಿಯ ನೋಡಿ ಬರುವೆ"[೭]

ಎಂದು ಸೂಳೆಯ ಸಹವಾಸ ಮಾಡಿದ ಗಂಡನನ್ನು ಅವಳಿಂದ ಬಿಡಿಸಿ ತರುವುದಾಗಿ ಅತ್ತೆಗೆ ಹೇಳಿ ಹೋಗುತ್ತಾಳೆ.

"ದ್ಯಾವರ್ಧೇಳತೇನೋ। ಸುಳ್ಯಾರು
ಮಾಡೇರು ಹೊಡಿತಾರು"೮

ಎನ್ನುವ ಮೂಲಕ ಸೂಳೆಯಿಂದಲೇ ನಿನಗೆ ಸಾವು ಎಂದು ಗಂಡನಿಗೆ ಭವಿಷ್ಯ ನುಡಿಯುತ್ತಾಳೆ. ಆಗ ಅವಳ ಮಾತಿಗೆ ಬೆಲೆ ಕೊಟ್ಟು ಗಂಡ ಸೂಳೆಯನ್ನು ಬಿಟ್ಟು ಬರುತ್ತಿರುವಾಗ ಅವಳು ಅವನನ್ನು ಬೆನ್ನುಹತ್ತಿ ಬರುತ್ತಾಳೆ.

ಹೊಡೆದ್ವಾsಕ್ಹಿಂದರ। ಆಕಿ ತನ್ನ
ಹೊಡಮsಳಿ ಹೊಳ್ಳಿದಂsಗ"೯

ಎಂದು ಗಂಡನ ಮೂಲಕ ತನ್ನಿಂದ ಗಂಡನನ್ನು ಅಗಲಿಸಿದ ಸೂಳೆಯನ್ನು ಹೊಡೆಸುತ್ತಾಳೆ. ಗಂಡನನ್ನು ಕರೆತಂದು ಅತ್ತೆಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳುತ್ತಾಳೆ.

ಗಂಡ ಸೂಳೆ ಹೋಗಿದ್ದರಿಂದ ಹನ್ನೆರಡು ವರ್ಷ ಗಂಡನ ಮುಖ ಕಾಣದೆ ಅವಳು ಅನುಭವಿಸಿದ ನೋವು ಅಪಾರವಾದುದು. ಅವಳ ನೋವು ನೋಡದೆ ಅತ್ತೆ ತವರಿಗೆ ಹೋಗು ಎಂದು ಹೇಳಿದರೂ, ಅವಳು ತವರಿಗೆ ಮರಳುವುದಿಲ್ಲ. ತನ್ನ ಸಂಕಟಕ್ಕೆ ಕಾರಣಳಾದವಳು ಸೂಳೆ ಎಂದರಿತು, ಅವಳನ್ನು ತನ್ನ ಗಂಡನಿಂದ ದೂರ ಮಾಡುವ ಮೂಲಕ ತನ್ನ ಗಂಡನನ್ನು ಮರಳಿ ಪಡೆದು ತನ್ನ ಸಂಕಟವನ್ನು ಪರಿಹರಿಸಿಕೊಳ್ಳುತ್ತಾಳೆ. ತನ್ನ ಕಷ್ಟಕ್ಕೆ ಪರರನ್ನು ಅವಲಂಬಿಸಿದೆ ಸ್ವತಃ ತಾನೇ ಅದನ್ನು ನಿವಾರಿಸಿಕೊಳ್ಳುತ್ತಾಳೆ. ಅತ್ತೆ ಕೊಟ್ಟ ಅನುಮತಿ, ಬೆಂಬಲಗಳು ಅವಳು ಸಮಸ್ಯೆ ಪರಿಹರಿಸಿಕೊಳ್ಳಲು ಸಹಾಯವಾಗುತ್ತವೆ. ಕುಟುಂಬದ ಒಬ್ಬ ಸದಸ್ಯರಿಂದ ಸಂಕಟಬಂದಾಗ ಮತ್ತೊಬ್ಬ ಸದಸ್ಯ ಅಥವಾ ಸಮಾಜದ ಬೆಂಬಲ ಪಡೆದು ಅದನ್ನು ಪರಿಹರಿಸಿಕೊಳ್ಳುವ ಜಾಣ್ಮೆ ಕೊರವಂಜಿಯದು. ತನ್ನ ಕುಟುಂಬದ ಸಮಸ್ಯೆಗಳನ್ನು ತನ್ನ ವ್ಯಾಪ್ತಿಯಲ್ಲೇ ಬಗೆಹರಿಸಿಕೊಳ್ಳುವ ಅವಳ ಧೈರ್ಯ ಅನುಕರಣೀಯವಾದುದು.

**೪.೨. ಕೌಟುಂಬಿಕ ಸಮಸ್ಯೆಗಳು**

ಕುಟುಂಬದಲ್ಲಿ ಅತ್ತೆ, ನಾದಿನಿಯರು, ವಾರಿಗಿತ್ತಿಯರು, ಸವತಿಯರಿಂದಲೂ ಸಮಸ್ಯೆಗಳು ಬರುತ್ತಿರುತ್ತವೆ. ಇವರೆಲ್ಲರಿಂದ ಇವಳು ದಿನನಿತ್ಯ ಸಂಕಟಗಳನ್ನು ಎದುರಿಸಬೇಕಾಗುತ್ತದೆ. ಅದರಿಂದ ಅವರೊಂದಿಗೆ ನಿತ್ಯ ಸಂಘರ್ಷಕ್ಕಿಳಿದರೆ ಕುಟುಂಬದ ಸಾಮರಸ್ಯ ಹಾಳಾಗುತ್ತದೆ. ಇದನ್ನು ತಿಳಿದ ಕೊರವಿ ತನ್ನ ಸಮಸ್ಯೆಗಳಿಗೆ ಕೌಟುಂಬಿಕ ಸಾಮರಸ್ಯ ಇಲ್ಲದಿರುವುದೇ ಕಾರಣ ಎಂದರಿತು ತಾಳ್ಮೆಯಿಂದ ವರ್ತಿಸುತ್ತಾಳೆ. ತಾಳ್ಮೆ, ಸಹನೆಯಂತಹ ಪ್ರಬಲವಾದ ಅಸ್ತ್ರ ಮತ್ತೊಂದಿಲ್ಲ. ಎಂತಹ ಪ್ರಬಲರನ್ನು ಸೋಲಿಸುವ ಶಕ್ತಿ ಇದಕ್ಕಿದೆ. ಇವಳು ಮತ್ತೊಬ್ಬರ ಬಗ್ಗೆ ನಂಬಿಕೆ, ವಿಶ್ವಾಸವಿಟ್ಟು ತನ್ನ ಸಂಕಟಗಳನ್ನು ಅವರೆದುರಿಗೆ ಬಿಚ್ಚಿಡುತ್ತಾಳೆ. ಇದರಿಂದ ಅವರು ಸಹ ಇವಳ ಸಂಕಟಗಳಿಗೆ ಸ್ಪಂದಿಸಿ,

ಅದನ್ನು ಎದುರಿಸಲು ಬೇಕಾದ ಸಲಹೆ ಸಹಕಾರ ನೀಡಿ ಆತ್ಮವಿಶ್ವಾಸ ತುಂಬುತ್ತಾರೆ. ಇದರಿಂದ ಅವಳು ತನ್ನ ಸಂಕಟಗಳನ್ನು ನಿರ್ಭಯದಿಂದ ಎದುರಿಸಲು ಸಾಧ್ಯವಾಗುತ್ತದೆ.

"ಅತ್ತೆಗಳಾಟ ಗಂಡನ ಬ್ಯಾಟ ಸವತಿಯರ ಕಾಟ
ನೆರೆಹೊರೆಯವರ ನೋಟ ಮನೆಯ ಮಾಟ
ಗತರಸದೂಟಕಂಜಿ ನಡುನಡುಗಿ
ಮೂರೂರು ಹಾದಿ ಮೆಟ್ಟಿ ಬಂದು
ಆರೂರರಸಿನ ಮೊರೆ ಹೊಕ್ಕೆನೆಯವ್ವ"[೧೦]

ಹೀಗೆ ಕೊರವಂಜಿ ಅತ್ತೆಯಂದಿರ ದರ್ಪದ ಅಧಿಕಾರ, ಸವತಿಯರು ನೀಡುತ್ತಿರುವ ಕಾಟ, ನೆರೆಹೊರೆಯವರ ಕೀಳು ದೃಷ್ಟಿಕೋನ, ಮನೆಯ ಬಗೆಗಿನ ವ್ಯಾಮೋಹ, ಹಿಂದೆ ಅನುಭವಿಸಿದ ಸಂಸಾರ ಸುಖಕಿಂತ ಭಿನ್ನವಾದ ಇಂದಿನ ಜೀವನದಿಂದ ನಡುಗಿ ಮೂರೂರು ಹಾದಿಯನ್ನು ಬಿಟ್ಟು ಆರೂರು ಹಾದಿಯನ್ನು ಅರಿಸಿಕೊಂಡು ಬಂದೇ ಎನ್ನುತ್ತಾಳೆ. ಇಲ್ಲಿ ಕೊರವಿ ತನ್ನ ಕೌಟುಂಬಿಕ ಸಂಕಟಗಳನ್ನು ಮೀರಿ ತನ್ನ ಅರಿವಿನ ಜ್ಞಾನವನ್ನು ವಿಸ್ತರಿಸಿಕೊಂಡಿದ್ದಾಳೆ. ಊರೂರು ಅಲೆಯುವ ಇವಳು ಮೂರೂರು ಹಾದಿಯನ್ನು ಬಿಟ್ಟು ಆರೂರಿಗೆ ಬಂದೆ ಎಂದು ಸ್ಥಾಪಿತವಾದ ವ್ಯವಸ್ಥೆಯಿಂದ ಹೊರಬಂದು ತಾನು ವಿಸ್ತಾರವಾದುದನ್ನು ಸಮರ್ಥಿಸಿಕೊಳ್ಳುತ್ತಾಳೆ. ಕುಟುಂಬ ನಿರ್ವಹಣೆಗಾಗಿ ವ್ಯಾಪಾರಕ್ಕಾಗಿ ಅಲೆಯುವ ಇವಳು ತಾನು ಸೀಮಿತ ವ್ಯಾಪ್ತಿಯನ್ನು ಮೀರಿ ನಡೆದುದನ್ನು ಹೇಳುತ್ತಾಳೆ. ಹೆಣ್ಣಿನ ಬುದ್ಧಿ ಮೊಳಕಾಲ ಕೆಳಗೆ ಎಂಬ ಸ್ಥಾಪಿತ ತತ್ವಕ್ಕಿಂತ ಭಿನ್ನವಾದ ತಿಳುವಳಿಕೆಯುಳ್ಳ ವ್ಯಕ್ತಿಯಾಗಿ ನಮಗೆ ಕಾಣಿಸುತ್ತಾಳೆ. ಹೆಣ್ಣು ಅಡಿಗೆ ಮನೆಗೆ ಮಾತ್ರ ಸೀಮಿತವೆಂಬ ನಂಬಿಕೆಗೆ ವಿರುದ್ಧವಾಗಿ ತನ್ನೆಲ್ಲ ಕೌಟುಂಬಿಕ ಸಮಸ್ಯೆಗಳ ನಡುವೆಯೇ ಹೊರಪ್ರಪಂಚಕ್ಕೆ ಬಂದು ತನ್ನ ಅರಿವಿನ ಜ್ಞಾನ ವಿಸ್ತರಿಸಿಕೊಂಡು ತನ್ನ ಬದುಕನ್ನು ಕಟ್ಟಿಕೊಳ್ಳುತ್ತಾಳೆ.

"ನೀಡೆಯವ್ವ ಎನ್ನ ಮನೆ ಗಂಡನ ಕಾಟ ಘನ್ನವವ್ವ
ಕ್ಷಣಕ್ಕೈದು ನಡೆಯವನವ್ವ
ಒಮ್ಮಾನ ತೀರಿತಂದರೆ ಇಮ್ಮಾನ ಬೇಡುವನವ್ವ
ಚೆಂಬಣ್ಣ ಕರಿಬಿಳಿಯ ಬಟ್ಟ ನಮ್ಮತ್ತೆಗಳವ್ವ
ಆರುಮಂದಿ ಗಂಡನ ಗೆಳೆಯರವ್ವ"[೧೧]

ಇಲ್ಲಿಯು ಸಹ ಕೊರವಿ ತನ್ನ ಗಂಡ, ಅತ್ತೆ, ಗಂಡನ ಗೆಳೆಯರಿಂದ ಅನುಭವಿಸುವ ಸಂಕಟಗಳ ಪಟ್ಟಿಯನ್ನು ನೀಡುತ್ತಾಳೆ.

ಕಡಿಮೆ ಆದಾಯ, ದೊಡ್ಡ ಕುಟುಂಬ, ಮನೆತುಂಬ ಮಕ್ಕಳಿರುವ ಕೊರವರಿಗೆ ಬಡತನ ಸಾಮಾನ್ಯ. ಹೀಗಾಗಿ ಬಡತನದ ಸಂಕಟಗಳನ್ನು ಸಹ ಕೊರವಂಜಿಯರು ಎದುರಿಸಬೇಕಾಗುತ್ತದೆ. ಆದರೆ ಬಡತನದಿಂದ ಪಲಾಯನ ಮಾಡುವ ಅಥವಾ ಅದನ್ನು ನಿವಾರಿಸಿಕೊಳ್ಳಲು ಶ್ರೀಮಂತರಿಂದ ಕಿತ್ತುಕೊಳ್ಳುವ ಪ್ರಯತ್ನ ಇವರದಲ್ಲ. ಶ್ರಮಕ್ಕೆ ತಕ್ಕ ಪ್ರತಿಫಲ ಪಡೆಯುವ ಧೋರಣೆ ಇವರದು.

ತನ್ನ ಕುಟುಂಬ ನಿರ್ವಹಣೆಗೆ ಕಣಿ ಹೇಳುವುದನ್ನು ಮಾತ್ರ ಅವಲಂಬಿಸದೆ, ಅದರ ಜೊತೆಗೆ ಇನ್ನು ಅನೇಕ ಚಿಕ್ಕಪುಟ್ಟ ಉದ್ಯೋಗಗಳನ್ನು ಇವರು ರೂಢಿಸಿಕೊಂಡಿರುತ್ತಾರೆ. ಕಣಿ ಹೇಳುವುದರೊಂದಿಗೆ ಇವರು ತಾವೇ ತಯಾರಿಸಿದ ನೆಲುವು, ಹಗ್ಗ, ಕಸಬರಿಗೆ, ಸಿಂಬೆ, ಬುಟ್ಟಿ ಮುಂತಾದ ಮನೆ ಮತ್ತು ವ್ಯವಸಾಯದಲ್ಲಿ ದಿನನಿತ್ಯ ಬಳಸುವ ವಸ್ತುಗಳನ್ನು ಮಾರಾಟ ಮಾಡುತ್ತಾರೆ. ಈ ವಸ್ತುಗಳನ್ನು ಇವರು ಸ್ವತಃ ತಾವೇ ತಯಾರಿಸುತ್ತಾರೆ. ಇವುಗಳ ತಯಾರಿಕೆಗೆ ಬೇಕಾದ ಕಚ್ಚಾವಸ್ತುವನ್ನು ತಾನೇ ಸಂಗ್ರಹಿಸಿ ಹದಗೊಳಿಸುತ್ತಾಳೆ. ಅದರಿಂದ ವಸ್ತುಗಳನ್ನು ತಯಾರಿಸಿ ಮಾರಾಟ ಮಾಡುತ್ತಾಳೆ. ಬಂದ ಆದಾಯದಿಂದ ಆಹಾರ ಸಾಮಗ್ರಿ ಸಂಪಾದಿಸುವುದರೊಂದಿಗೆ ಹಣ ಉಳಿಸಿ ಮುಂದಿನ ಭವಿಷ್ಯಕ್ಕೆ ಕೂಡಿಡುವ ಕಾರ್ಯವನ್ನು ಮಾಡುತ್ತಾಳೆ. ಇವಳ ಈ ಗೃಹಕೈಗಾರಿಕೆಯಲ್ಲಿ ಕೈಗಾರಿಕತೆಯ ಅಖಂಡತ್ವವನ್ನೆ ಕಾಣಬಹುದು. ಕಚ್ಚಾ ಸಾಮಗ್ರಿಗಳ ಕ್ರೋಢೀಕರಣ, ಕಚ್ಚಾವಸ್ತುಗಳ ಹದಗೊಳಿಸುವಿಕೆ, ಸಿದ್ಧವಸ್ತುವಿನ ತಯಾರಿಕೆ, ಮಾರಾಟ, ಆಹಾರ ಸಾಮಗ್ರಿಗಳ ಖರೀದಿ, ಉಳಿತಾಯ ಹೀಗೆ ಅನೇಕ ಜನರನ್ನು ಹೊಂದಿರುವ ಒಂದು ಕಾರ್ಖಾನೆ ಮಾಡುವ ಕೆಲಸವನ್ನು ಅವಳೊಬ್ಬಳೆ ಮಾಡುತ್ತಾಳೆ.

"ಎರಿ ಯೇರಿಯಿಂದೆ ವೋದಾಳೆ ಕೊರವಂಜಿ
ಜಾಡಿಸಿ ಮೆದೆವುಲ್ಲ ಸೆಣುದಾಳೆ ಸೆಣುದಾಳೆ
ಜಾಡಿಸಿ ಮೆದೆವುಲ್ಲ ಸೆಣೆದು ಪುಟ್ಟಿಗು ತುಂಬಿ
ಅತ್ತು ಕಾಲು ನೆಲುವ ಎಣುದಾಳೆ
ಅತ್ತುಕಾಲ ನೆಲುವಿಗೆ ಮುತ್ತಿನ ಕುಣಿಕಾಕಿ
ಉತ್ತಮರ ಕೇರಿ ವೊಳಗೆಲ್ಲ
ಉತ್ತಮರಕ್ಕೇರಿ ಯೊಳುಗೆಲ್ಲಕ್ಕಯ್ಯಾ ನಿಮ್ಮ
ಆಲೀಗು ತಕ್ಕಾದ ನೆಲುವೈತೆ
ಆಲೀಗು ತಕ್ಕಾದ ನೆಲುವೈತಕ್ಕಯ್ಯ ನಿಮ್ಮ
ಬಾಲಯ್ಯರಾಡೋ ಗಿಲಿಕೈತೆ ಗಿಲಿಕೈತೆ
ಬಾಲಯ್ಯರಾಡೋ ಗಿಲಿಕೆಯ್ಯ ನಿಮ್ಮ
ತೋಳಿಗು ತಕ್ಕಾದ ಅಸುರೈತಿ"[೧೨]

ಎನ್ನುವಲ್ಲಿ ಕೊರವಂಜಿ ಕಚ್ಚಾವಸ್ತು ಸಂಗ್ರಹ, ಹದಗೊಳಿಸುವಿಕೆ, ಉಪಯುಕ್ತ ವಸ್ತುವಿನ ತಯಾರಿಕೆ, ಮಾರಾಟ ಹೀಗೆ ಇಡೀ ಅವಳ ಕಾರ್ಯನಿರ್ವಹಣೆಯ ರೀತಿಯ ವಿವರಣೆ ಇದೆ. ತನ್ನ ಕ್ರಿಯಾಶೀಲತೆ, ಸೃಜನಶೀಲತೆಯಿಂದ ಅವಳು ಇದೆಲ್ಲವನ್ನು ನಿರ್ವಹಿಸುತ್ತಾಳೆ. ವಿಭಜನೆಗೊಳ್ಳದ ಕೌಟುಂಬಿಕ ಸ್ಥಿತಿಯನ್ನು ಇವಳ ಉದ್ಯೋಗದಲ್ಲಿ ಕಾಣಬಹುದಾಗಿದೆ. ಇವತ್ತಿನ ಉತ್ಪಾದನಾ ವಲಯದಲ್ಲಿ ಸೃಷ್ಟಿಯಾಗಿರುವ ಮಾತಿನ ಕೌಶಲ್ಯ, ವ್ಯವಹಾರ ಕೌಶಲ್ಯ, ಬದುಕಿನ ಕೌಶಲ್ಯ, ಕುಟುಂಬ ನಿರ್ವಹಣೆಯ ಕೌಶಲ್ಯ ಎಲ್ಲವನ್ನು ಕೊರವಂಜಿ ಕಥನ ಸಮರ್ಥಿಸುತ್ತದೆ.

ಅನ್ಯಮೂಲಗಳಿಂದ ತಂದ ವಸ್ತುಗಳನ್ನು ಕೊರವಂಜಿ ಮಾರಾಟ ಮಾಡುತ್ತಾಳಲ್ಲದೇ ಅನೇಕ ಸಣ್ಣಪುಟ್ಟ ರೋಗಗಳ ಚಿಕಿತ್ಸೆಗೆ ಬೇಕಾಗುವ ಕಾಡಿನ ಗಿಡಮೂಲಿಕೆ ಬೇರುಗಳನ್ನು ಸಂಗ್ರಹಿಸಿ ಮಾರುತ್ತಾಳೆ. ಗಿಡಮೂಲಿಕೆಗಳಿಂದ ಚಿಕ್ಕಪುಟ್ಟ ಮದ್ದು ತಯಾರಿಸಿ ನೀಡುತ್ತಾಳೆ. ಕಣ್ಣಲ್ಲಿ ಕಸಕಡ್ಡಿ ಬಿದ್ದಾಗ ಅದನ್ನು ತೆಗೆಯುವ, ಚಿಟಿಕೆ ಹಾಕುವ, ಚಿಕ್ಕಮಕ್ಕಳ ರೋಗಕ್ಕೆ ಚಿಕಿತ್ಸೆ ನೀಡುವ ಕಾರ್ಯವನ್ನು ಮಾಡುತ್ತಾಳೆ. ಗಿಡಮೂಲಿಕೆಗಳಿಂದ ಹಚ್ಚೆ ಹಾಕುವ ಮಸಿ ತಯಾರಿಸಿ ಹೆಣ್ಣು ಮಕ್ಕಳಿಗೆ ಹಚ್ಚೆ ಸಹ ಹಾಕುತ್ತಾಳೆ. ಜೊತೆಗೆ ಅನ್ಯ ಉತ್ಪಾದಿತ ವಸ್ತುಗಳಾದ ಕರಿಮಣಿ, ಗಿಲಗಿಂಚಿ, ಹಣಿಗೆ ಸೂಜಿ ದಬ್ಬಣ, ಉಣ್ಣೆಪುಡಿ ಮುಂತಾದ ವಸ್ತುಗಳನ್ನು ಮಾರಾಟ ಮಾಡುತ್ತಾಳೆ.

ಇವತ್ತು ಅರಣ್ಯನಾಶದಿಂದ ಅರಣ್ಯವನ್ನು ಅವಲಂಬಿಸಿದ ಉದ್ಯೋಗಗಳು ನಶಿಸಿ ಹೋಗುತ್ತಿವೆ. ಇದಕ್ಕಾಗಿ ಇವಳು ಪರ್ಯಾಯ ಉದ್ಯೋಗ ಕಂಡುಕೊಳ್ಳುವದು ಅನಿವಾರ್ಯವಾಗಿದೆ. ವ್ಯಾಪಾರಕ್ಕಾಗಿ ಊರೂರು ಅಲೆಯುವ ಕೊರವಂಜಿ ನಗರೀಕರಣದ ಪ್ರಭಾವಕ್ಕೆ ಒಳಗಾಗಿದ್ದಾಳೆ. ನಗರೀಕರಣದಲ್ಲೆ ಪರ್ಯಾಯ ಉದ್ಯೋಗವನ್ನು ಕಂಡುಕೊಂಡಿದ್ದಾಳೆ. ನಗರದಲ್ಲಿ ದೊರೆಯುವ ಮಹಿಳೆಯರು ಬಳಸುವ ಬಾಚಣಿಕೆ, ಕನ್ನಡಿ, ಕುಂಕುಮ, ಪೌಡರ ಮುಂತಾದ ವಸ್ತುಗಳನ್ನು ತಂದು ಮಾರಾಟ ಮಾಡುತ್ತಾಳೆ. ತನ್ನ ವಸ್ತುಗಳಿಂದ ಜನರನ್ನು ಆಕರ್ಷಿಸಿ ವ್ಯಾಪಾರ ವಿಸ್ತರಿಸಿಕೊಳ್ಳುತ್ತಾಳೆ. ನರೀಕರಣದ ವಸ್ತುಗಳ ಪರಿಚಯವನ್ನು ಗ್ರಾಮೀಣರಿಗೆ ಹಚ್ಚಿಸಿದವಳು ಬಹುಶಃ ಕೊರವಂಜಿಯೇ ಆಗಿರಬಹುದು.

ಕೊರವಂಜಿಯ ಉದ್ಯೋಗ ಋತುಮಾನ ಅವಲಂಬಿತವಾದದ್ದು ಬೇಸಿಗೆ ಕಾಲದಲ್ಲಿ ಅರಣ್ಯದಿಂದ ಬೇಕಾದ ಕಚ್ಚಾವಸ್ತು ಸಂಗ್ರಹಿಸಿ, ಹದಗೊಳಿಸಿ, ಸಿದ್ಧಗೊಳಿಸಿ, ಮಳೆಗಾಲ, ಕೃಷಿ ಚಟುವಟಿಕೆ ಪ್ರಾರಂಭವಾಗುವ ಮುನ್ನ ಅವನ್ನು ಮಾರಾಟ ಮಾಡುತ್ತಾಳೆ. ಮಳೆಗಾಲದಲ್ಲಿ ಕಚ್ಚಾ ಸಾಮಗ್ರಿ ತರುವುದು, ಹದಗೊಳಿಸಿ ಉಪಯುಕ್ತ ವಸ್ತು ತಯಾರಿಸುವುದು ಅಸಾಧ್ಯವಾದ್ದರಿಂದ ಆ ಕಾಲದಲ್ಲಿ ಪೇಟೆಯಲ್ಲಿನ ಉತ್ಪಾದಿತ ವಸ್ತುಗಳನ್ನು ತಂದು ಮಾರಾಟ ಮಾಡುತ್ತಾಳೆ. ನಂತರ ಬರುವ ಸುಗ್ಗಿ ಕಾಲದಲ್ಲಿ ಕಣಿ ಹೇಳಿ ರೈತರಿಂದ ದವಸ ಧಾನ್ಯಗಳನ್ನು ಪಡೆಯುತ್ತಾಳೆ. ಅಗತ್ಯಕ್ಕೆ ತಕ್ಕ ಹಾಗೆ ಮುರಿದು ಕಟ್ಟುವ, ಮರುಹೊಂದಾಣಿಕೆ ಮಾಡಿಕೊಳ್ಳುವ ಸೃಷ್ಟಿಯ ಸಹಜಗುಣ ಸಾಧ್ಯವಾಗುವುದು ಹೆಣ್ಣಿಗೆ ಮಾತ್ರ. ಅಂತಹ ಮರುಹೊಂದಾಣಿಕೆಯ ಗುಣದಿಂದ ಕೊರವಂಜಿ ಕಾಲಕ್ಕೆ ತಕ್ಕ ಹಾಗೆ ತನ್ನ ಉದ್ಯೋಗವನ್ನು ಮರುಹೊಂದಾಣಿಕೆ ಮಾಡಿಕೊಂಡು ಸದಾ ಬಿಡುವಿಲ್ಲದ ವ್ಯಕ್ತಿಯಾಗಿ ತನ್ನ ಬದುಕನ್ನು ಕಟ್ಟಿಕೊಳ್ಳುತ್ತಾಳೆ.

"ವರ್ಷದಲ್ಲಿ ಯಾವ ತಿಂಗಳಿನಲ್ಲಿ, ಯಾವ ಊರುಗಳಲ್ಲಿ ಕೈತುಂಬಾ ಕೆಲಸ ಸಿಗುತ್ತದೆ, ತಮಗೆ ಸಂಪಾದನೆಯಾಗುತ್ತದೆ ಎಂಬ ಜನಮನದ ನಾಡಿಯನ್ನು ಅರಿತವರಾಗಿ ಊರೂರು ಸುತ್ತುತ್ತಿದ್ದರು"[೧೩] ಎಂಬ ಮಾತು ಅವರು ಋತುಮಾನಕ್ಕೆ ತಕ್ಕಂತೆ ತಮ್ಮ ಕುಲಕಸುಬುಗಳಲ್ಲಿ ಬದಲಾವಣೆ ಮಾಡಿಕೊಳ್ಳುವ ಗುಣ ಎದ್ದು ಕಾಣುತ್ತದೆ.

ಹೀಗೆ ಕಣಿ ಹೇಳಿ ತಾವು ತಯಾರಿಸಿದ ವಸ್ತುಗಳನ್ನು ಮಾರಾಟ ಮಾಡಿ ಅದಕ್ಕೆ ತಕ್ಕಂತೆ ಹಣ ಹಾಗೂ ದವಸಧಾನ್ಯಗಳನ್ನು ಪಡೆಯುತ್ತಾರೆ. ಕಣಿ ಹೇಳಿ ತನಗೆ ಅಗತ್ಯ ಎನಿಸಿದ ವಸ್ತುಗಳನ್ನು

ಪ್ರೀತಿಯಿಂದ, ಸ್ನೇಹದಿಂದ ಕೇಳಿ ಪಡೆಯುತ್ತಾಳೆಯೇ ಹೊರತು ಒತ್ತಾಯದಿಂದ ಕಿತ್ತುಕೊಳ್ಳುವುದಿಲ್ಲ. ಕಾಡಿ ಬೇಡುವುದು ಕೊರವಿಯರ ಜಾಯಮಾನವಲ್ಲ.

### ೪.೩. ಅನ್ನ ಹಾಗೂ ಆರೈಕೆಯ ಸಮಸ್ಯೆಗಳು

ಆಲಸಿ ಹಾಗೂ ಚಟಗಳಿಗೆ ದಾಸನಾದ ಗಂಡ, ಅಧಿಕ ಮಕ್ಕಳಿರುವ ಸಂಸಾರವಾದ್ದರಿಂದ ಕೊರವಂಜಿಯರದು ಬಡತನದ ಜೀವನ. ಅಂದಿನ ಅನ್ನವನ್ನು ಅಂದೇ ದುಡಿದು ಸಂಪಾದಿಸುವ ಸ್ಥಿತಿ. ಅದಕ್ಕಾಗಿ ಕಣಿ ಹೇಳಿ, ತಾನೇ ತಯಾರಿಸಿದ ಮತ್ತು ಅನ್ಯರಿಂದ ಖರೀದಿಸಿದ ವಸ್ತುಗಳನ್ನು ಮಾರಿ ಜೀವನ ನಡೆಸುತ್ತಾಳೆ. ಕೆಲವೊಮ್ಮೆ ಅವತ್ತಿನ ಜೀವನ ನಡೆಸಲು ಬೇಕಾದಷ್ಟು ಸಂಪಾದನೆ ಆಗದೆ ಇರಬಹುದು. ಆಗ ತನಗಾಗಿ ಎಷ್ಟೇ ಕಷ್ಟಗಳಾದರೂ ಸಹಿಸುವ ಇವಳಿಗೆ ಮಕ್ಕಳ ಹಸಿವಿನ ಸಂಕಟವನ್ನು ಸಹಿಸಲು ಮಾತ್ರ ಸಾಧ್ಯವಾಗುವುದಿಲ್ಲ. ತಾನು ವ್ಯಾಪಾರಕ್ಕಾಗಿ ತೆರಳುವ ಸಮಾಜದೊಂದಿಗೆ ಉತ್ತಮ ಬಾಂಧವ್ಯ ಹೊಂದಿರುವ ಇವಳು, ಅವರಿಂದ ತನಗೆ ಬೇಕಾದ ಜೀವನಾವಶ್ಯಕ ವಸ್ತುಗಳನ್ನು ಕೇಳಿ ಪಡೆಯುತ್ತಾಳೆ. ಹಾಗೇ ಕೇಳುವಾಗ ದುಬಾರಿ ವಸ್ತುಗಳನ್ನು ಕೇಳಿ ಸಂಗ್ರಹಿಸುವ ಬುದ್ಧಿ ಇವಳದಲ್ಲ. ಜೀವನಾವಶ್ಯಕ ವಸ್ತುಗಳನ್ನು ಮಾತ್ರ ಕೇಳಿ ಪಡೆಯುತ್ತಾಳೆ.

"ಉಣ್ಣಲಿಕ್ಕೆ ಅನ್ನ, ಉಡಲಿಕ್ಕೆ ಬಣ್ಣ
ಸಣ್ಣ ಸೀರೆ ಎನಗೆ ಸಣವಾಗೆ
ಬೆಣ್ಣೆ ಎಣ್ಣೆಯ ಕೊಡಮ್ಮಾ ಹಬ್ಬ ಎನಗೆ
ಈ ಪುಣ್ಯದ ಮಾತೆಲ್ಲ ಘನವಾಯಿತಲ್ಲ"[೧೪]

ಇಲ್ಲಿ ಅವಳು ಕೇಳುವುದು ಉಣ್ಣಲು ಅನ್ನ, ಉಡಲು ಸೀರೆ, ಹಬ್ಬಕ್ಕೆ ಬೇಕಾದ ಬೆಣ್ಣೆ, ಎಣ್ಣೆಯಂತಹ ಜೀವನಾವಶ್ಯಕ ವಸ್ತುಗಳನ್ನು ಹೊರತು ಯಾವ ಬೆಲೆಬಾಳುವ ವಸ್ತುಗಳನಲ್ಲ.

"ಹೊಟ್ಟೆ ಹಸಿಯಿತು ಕೈ ಮುಟ್ಟಿ ಅನ್ನವನಿಕ್ಕೆ
ಕಟ್ಟಾಣಿ ಮುತ್ತೆ ಕಾಮನ ಸಂಪನ್ನು
ಉಟ್ಟಸೀರೆಯ ತಾರೆ ಊರ ಉಂಬಳಿಗಳನು
ಬಿಟ್ಟವಳಲ್ಲ ನಿನಗೆ ಮಗನಾದ ಮೇಲೆ"[೧೫]

ಹೊಟ್ಟೆ ಹಸಿವಿಗೆ ಅನ್ನ ಮತ್ತು ಮಾನ ಮುಚ್ಚಲು ಉಟ್ಟ ಮನೆ ಒಡತಿ ಸೀರೆ ಬೇಡುತ್ತಾಳೆ 'ಸಣ್ಣಸೀರೆ ಎನಗೆ ಸಣ್ಣಮಾಗೆ' 'ಉಟ್ಟಸೀರೆಯ ತಾರೆ' ಎಂದು ಶ್ರೀಮಂತ ಮಧ್ಯಮ ವರ್ಗದ ಹೆಣ್ಣುಮಕ್ಕಳು ಉಟ್ಟಸೀರೆಯನ್ನು ಪ್ರೀತಿಯಿಂದ ಕೇಳಿ ಪಡೆಯುತ್ತಾಳೆ. ಇಲ್ಲಿ ಅವಳು ಅವರಿಂದ ಬಿಕ್ಷೆ ಬೇಡುವುದಿಲ್ಲ. ಖಡ್ಡಾಯವಾಗಿ ಕೊಡಲೇಬೇಕು ಎಂದು ಅವರನ್ನು ಒತ್ತಾಯಿಸುವುದು ಇಲ್ಲ.

ಮಗನಾದ ಮೇಲೆ ನಿನ್ನಿಂದ ಊರ ಉಂಬಳಿಯನ್ನು ಪಡೆಯುತ್ತೇನೆಂದು ಮಕ್ಕಳಿಲ್ಲದೆ ಮಕ್ಕಳಿಗಾಗಿ ಹಂಬಲಿಸಿ ಭವಿಷ್ಯ ಕೇಳುವ ಹೆಣ್ಣುಮಕ್ಕಳಿಗೆ ಹೇಳುತ್ತಾಳೆ. ಮಕ್ಕಳಿಲ್ಲದೆ ಕುಟುಂಬ, ಸಮುದಾಯ, ಸಮಾಜದಿಂದ ತಾತ್ಸಾರಕ್ಕೆ ಒಳಗಾಗಿ, ಮಾನಸಿಕವಾಗಿ ಜರ್ಜರಿತಳಾದ ಹೆಣ್ಣುಮಗಳಿಗೆ

ಮಗುವಾಗುವ ಭರವಸೆ ನೀಡುತ್ತಾಳೆ. ಅವಳ ಕಣಿಯಿಂದ ಮಗುವಾಗದೆ ಹೋಗಬಹುದು. ಆದರೆ ಮಾನಸಿಕವಾಗಿ ನೊಂದಿರುವ, ಜೀವನದ ಬಗ್ಗೆ ಆಸೆ ಕಳೆದುಕೊಂಡಿರುವ ಹೆಣ್ಣುಮಗಳಿಗೆ ಇವಳ ಮಾತು ಜೀವನದ ಬಗ್ಗೆ ಆಸೆಯನ್ನು ಮೂಡಿಸುತ್ತದೆ. ಅವಳನ್ನು ನೋವಿನಿಂದ ವಿಮುಖಳನ್ನಾಗಿ ಮಾಡುತ್ತದೆ. ಇವಳ ಮಾತಿನಿಂದ ನೊಂದ ಹೆಣ್ಣುಮಗಳು ಭವಿಷ್ಯದ ಬಗ್ಗೆ ಕನಸು ಕಟ್ಟಿಕೊಳ್ಳುತ್ತಾಳೆ. ಜೀವನದಲ್ಲಿ ಆಸೆ, ಉತ್ಸಾಹಗಳನ್ನು ತಂದುಕೊಳ್ಳುತ್ತಾಳೆ. ಕೊರವಂಜಿ ತಾನು ಕಷ್ಟದಲ್ಲಿದ್ದರೂ ಜೀವನದಿಂದ ವಿಮುಖಳಾಗದೆ ಭವಿಷ್ಯದ ಬಗ್ಗೆ ಭರವಸೆ ಹೊಂದಿರುವದರೊಂದಿಗೆ ಕಷ್ಟದಲ್ಲಿರುವವರಿಗೂ ಭರವಸೆಯ ಭಾವವನ್ನು ಉಂಟುಮಾಡುತ್ತಾಳೆ. ಮುಂದೆ ಬಂದು ನಿನ್ನಿಂದ ಊರ ಉಂಬಳಿ ಪಡೆಯುತ್ತೆನೆಂದು ಹೇಳುವ ಮಾತು ತನಗೆ ಮಾತ್ರವಲ್ಲ ಕಣಿಯನ್ನು ಕೇಳುವ ಹೆಣ್ಣುಮಗಳಿಗೂ ಭವಿಷ್ಯವಿದೆ ಎಂಬುದನ್ನು ಸೂಚಿಸುತ್ತದೆ. ಕೇವಲ ವ್ಯಾಪಾರಿಭಾವದಿಂದ ಇದನ್ನು ಮಾಡದೆ ಪ್ರೀತಿ, ಅಂತಃಕರಣದಿಂದ ಈ ಕೆಲಸ ಮಾಡುತ್ತಾಳೆ. ಬದುಕಲ್ಲಿ ತಾನುಂಡ ನೋವಿನ ಅನುಭವದಿಂದ ಹೆಣ್ಣುಮಕ್ಕಳ ಮನೋಇಂಗಿತ ಅರ್ಥಮಾಡಿಕೊಂಡು ಅವರಿಗೆ ತೃಪ್ತಿಯಾಗುವಂತೆ ಭವಿಷ್ಯ ನುಡಿಯುತ್ತಾಳೆ. ಅವಳ ನೋವಿಗೆ ಸ್ಪಂದಿಸಿ ಅವಳಿಗೆ ಬದುಕಿನ ಬಗ್ಗೆ ಭರವಸೆ ಹುಟ್ಟಿಸುತ್ತಾಳೆ. ತನ್ನ ಸಂಕಟಗಳಿಗೆ ಪರಿಹಾರ ಕಂಡುಕೊಂಡಿದ್ದರಿಂದಲೇ ಮತ್ತೊಬ್ಬರ ಸಂಕಟಕ್ಕೆ ಸ್ಪಂದಿಸುವ, ಸಂಕಟ ಪರಿಹರಿಸುವ ಪ್ರಯತ್ನ ಅವಳಿಂದ ಸಾಧ್ಯವಾಯಿತು.

ತಮ್ಮ ಆರೈಕೆಯನ್ನು ತಾವೇ ಮಾಡಿಕೊಳ್ಳುವ ಸ್ಥಿತಿ ಕೊರವಂಜಿಯರದು. ಅನಾರೋಗ್ಯದಲ್ಲಿ ಮಾತ್ರವಲ್ಲದೆ, ಗರ್ಭಿಣಿ, ಬಾಣಂತಿತನದ ಸಂದರ್ಭದಲ್ಲಿಯೂ ತಾವೇ ದುಡಿದು ತಮ್ಮ ಆರೈಕೆಯನ್ನು ತಾವೇ ನಿರ್ವಹಿಸಿಕೊಳ್ಳಬೇಕು. ಗರ್ಭಿಣಿಯರು ಹಳ್ಳ ಕೊಳ್ಳಗಳನ್ನು ದಾಟಬಾರದೆಂಬ ನಿಯಮ ಸಮಾಜದಲ್ಲಿದೆ. ಆದರೆ ತಮ್ಮ ಹೊಟ್ಟೆಹೊರೆಯಲು ಕೊರವಂಜಿಯರಿಗೆ ದುಡಿಮೆ ಅನಿವಾರ್ಯವಾದ್ದರಿಂದ ಇವರು ಇಂತಹ ಯಾವ ನಿಯಮಗಳನ್ನು ಪಾಲಿಸದೆ ಮನೆಯಿಂದ ಹೊರಬಂದು ದುಡಿಯುತ್ತಾರೆ. ಬಿಸಿಲು, ಮಳೆ, ಗಾಳಿಯೆನ್ನದೆ ದುಡಿದು ತಮ್ಮ ನಿತ್ಯದ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಾರೆ. ಅಂತೆಯೇ ಬಾಣಂತಿಯರು ೫ ತಿಂಗಳು ಮನೆಬಿಟ್ಟು ಹೊರಬರಬಾರದು, ಮಗು ಹೊಸ್ತಿಲು ದಾಟಬಾರದು, ಬಾಣಂತಿ ಆರೈಕೆ ಮಾಡಿಕೊಳ್ಳಬೇಕೆಂಬ ನಿಯಮಗಳು ಸಮಾಜದಲ್ಲಿವೆ. ಆದರೆ ಕೊರವಂಜಿಯರು ತಮ್ಮ ಅನ್ನವನ್ನು ತಾವೇ ದುಡಿದು ಸಂಪಾದಿಸಿಕೊಳ್ಳಬೇಕಾಗಿರುವುದರಿಂದ ಇವರು ಈ ಯಾವ ನಿಯಮಗಳನ್ನು ಪಾಲಿಸುವುದಿಲ್ಲ. ಮತ್ತೊಬ್ಬರನ್ನು ಅವಲಂಬಿಸಿ ತಮ್ಮ ಆರೈಕೆ ಮಾಡಿಕೊಳ್ಳುವುದಿಲ್ಲ. ಚಳಿಗಾಳಿಗೆ ಹೆದರದೆ ಮಗುವನ್ನು ಎತ್ತಿಕೊಂಡು ಹೊರಹೋಗಿ ದುಡಿದು ಬರುತ್ತಾರೆ. ತಾವೇ ಸಂಪಾದಿಸಿ ತಂದು ತಮ್ಮ ಆರೈಕೆ ಮಾಡಿಕೊಳ್ಳುತ್ತಾರೆ.

ಗರ್ಭಿಣಿಯರು, ಬಾಣಂತಿಯರು ಬಳಸುವ ಸಮೃದ್ಧಿಯ ಸಂಕೇತಗಳಾದ ಎಣ್ಣೆ ಬೆಣ್ಣೆಗಳು ಇವರ ಹತ್ತಿರವಿಲ್ಲ. ಹೀಗಾಗಿ ಇವರು ಅಂತಹ ಸಂದರ್ಭಗಳಲ್ಲಿ ವ್ಯಾಪಾರಕ್ಕಾಗಿ ಹೋದಾಗ ಇರುವಂಥವರಿಂದ ವಿನಯದಿಂದ ಬೇಡಿ ತಂದು ತಮ್ಮ ಮತ್ತು ಮಗುವಿನ ಆರೈಕೆ ಮಾಡಿಕೊಳ್ಳುತ್ತಾರೆ.

"ಅಸುವಿಗೆ ಹಾಲನೆರೆಯವ್ವ
ಶಿಶುವಿಗೆ ನವನೀತ ನೀಡೆಯವ್ವ"[೧೬]

ಎಂದು ತನ್ನ ಮಗು ಮತ್ತು ತನ್ನ ಆರೈಕೆಗೆ ಬೇಕಾದ ಹಾಲು ಮತ್ತು ಬೆಣ್ಣೆಯನ್ನು ಕೇಳಿ ಪಡೆಯುತ್ತಾಳೆ.

"ಬಾಲನ ನೆತ್ತಿಗೆ ಎಣ್ಣೆಯನೆರೆಯವ್ವ ವೀಳ್ಯವ ಕೊಡುಯೆನಗೆ"[೧೭]

ಎಂದು ಮಗುವನ್ನು ಎರೆಯಲು ಅವಶ್ಯಕವಾದ ಎಣ್ಣೆ ಹಾಗೂ ಬಾಣಂತಿ ಬಳಸುವ ವೀಳ್ಯವನ್ನು ಕೇಳಿ ಪಡೆಯುತ್ತಾಳೆ.

### ೪.೪. ನಡತೆ ಹಾಗೂ ನಂಬಿಕೆಯ ಪ್ರಮೇಯಗಳು

ಬದುಕು ನಡೆಸಲು ಕೊರವಂಜಿಗೆ ದುಡಿಮೆ ಅನಿವಾರ್ಯ ಅವಳನ್ನು ದುಡಿಮೆಗೆ ಕಳುಹಿಸುವ ಗಂಡನೇ ಅವಳ ನಡತೆಯ ಬಗ್ಗೆ ಅನುಮಾನ ಪಡುವ ಪ್ರಸಂಗಗಳು ಇಲ್ಲದಿಲ್ಲ. ಕೈಹಿಡಿದ ಗಂಡನೇ ಅವಳ ನಡತೆಯ ಬಗ್ಗೆ ಅನುಮಾನ ಪಟ್ಟಾಗ ಅವಳು ಪಡುವ ನೋವು ಸಂಕಟ ಅಗಾಧವಾದುದು. ಜೊತೆಗೆ ಕುಟುಂಬದ ಇತರ ಸದಸ್ಯರು ಇದೇ ರೀತಿ ಅನುಮಾನ ಪಟ್ಟಾಗ ಅವಳು ಮತ್ತಷ್ಟು ಕುಸಿದು ಹೋಗುತ್ತಾಳೆ. ಬೇರೆವರ್ಗದ ಮಹಿಳೆಯರು ಇಂತಹ ಸಮಸ್ಯೆಗಳು ಬಂದಾಗ ದುಡಿಮೆಯನ್ನು ತೊರೆಯುವ ನಿರ್ಧಾರ ಕೈಗೊಳ್ಳಬಹುದು. ಅವರಿಗೆ ದುಡಿಮೆ ಅನಿವಾರ್ಯವಲ್ಲ. ಆದರೆ ಬಡತನದಲ್ಲಿರುವ ಕೊರವಂಜಿಯರಿಗೆ ದುಡಿಮೆ ಅನಿವಾರ್ಯ. ಬದುಕು ಮತ್ತು ದುಡಿಮೆ ಎರಡನ್ನು ಸಮೀಕರಿಸಿಕೊಂಡವರು ಇವರು. ಹೀಗಾಗಿ ಇಂಥ ಸಂದರ್ಭಗಳು ಬಂದಾಗ ಅನುಮಾನಕ್ಕೆ ಎಡೆಮಾಡಿಕೊಡದೆ ಬದುಕಲು ಪ್ರಯತ್ನಿಸುತ್ತಾಳೆ. ತನ್ನ ಬಗೆಗಿನ ಅನುಮಾನಕ್ಕೆ ಯಾವುದು ಕಾರಣವೋ ಅದನ್ನು ನಿವಾರಿಸಿಕೊಳ್ಳುತ್ತಾಳೆ.

'ಬಂಡು ಮಾಡ್ಯಾನ ನಮ್ಮ ಕೊರಮ' ಎಂಬ ಹಾಡಿನಲ್ಲಿ ಊರಿಗೆ ಬಂದ ಕೊರವಿಗೆ ವೇಶ್ಯೆಯೊಬ್ಬಳು.

"ಇಂದುಳಿಯ ಕೊರವಂಜಿ ಜೋಳಿಗ್ಹೊನ್ನ ನಾ ಕೊಡುವೆ
ಯಾವ್ಯಾವಗುಂಬೋ ನಿದುನಾವ ನಿದುನಾವ
ಯಾವ್ಯಾವಗುಂಬೋ ನಿದುನಾವ ನಾ ಕೊಡುವೆ
ಈಗುಳಿಯೆ ನಮ್ಮ ಪುರದಾಗೆ"[೧೮]

ಎಂದು ತಮ್ಮ ಊರಲ್ಲಿ ಕೊರವಂಜಿಯನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಾಳೆ. ಆದರೆ ಕೊರವಂಜಿ ಅದಕ್ಕೆ ಒಪ್ಪದೆ

"ಈಗಾನೆ ವುಳಿಯಾಕೆ ಗುಳ್ಳುಕಿತ್ತೋಗುತಾವೆ
ಬಂಡು ಮಾಡೇನ ನಮ್ಮ ಕೊರಮ। ಸವ್ತೇರ ಮುಂದೆ
ಕೆಂಡ ಮಾಯ್ಯಾನೆ ಬಗಸೀಗೆ ಬಗಸೇಗೆ"[೨೦]

ಎಂದು ತಾನು ಇಲ್ಲಿ ಉಳಿದರೆ ತನ್ನ ಗಂಡ ತನ್ನ ನಡತೆಯ ಬಗ್ಗೆ ಅನುಮಾನ ಪಟ್ಟು, ಜಗಳ ಮಾಡುವ, ಶಿಕ್ಷೆಕೊಡುವ ವಿಚಾರ ತಿಳಿಸಿ ಅಲ್ಲಿಂದ ತೆರಳುತ್ತಾಳೆ. ಕೊರವಂಜಿಗೆ ಜೋಳಿಗೆ

ಹೊನ್ನು ಎಂದೆಂದಿಗೂ ಕರಗದ ಸಂಪತ್ತಿಗಿಂತ ತನ್ನ ಗಂಡ ತನ್ನ ನಡತೆಯ ಬಗ್ಗೆ ಅನುಮಾನ ಪಡದಂತೆ ನಡೆದುಕೊಳ್ಳುವುದೇ ಮುಖ್ಯವಾಗುತ್ತದೆ. ಗಂಡನ ನಂಬಿಕೆಯನ್ನು ಉಳಿಸಿಕೊಳ್ಳುವ ಪ್ರಯತ್ನವನ್ನು ಅವಳು ಮಾಡುತ್ತಾಳೆ.

ಹೀಗೆ ದುಡಿಮೆಗಾಗಿ ಹೊರಬೀಳುವ ಮಹಿಳೆ ದುಡಿತದ ಅಧಿಕ ಜವಾಬ್ದಾರಿ ಹೊರಬೇಕಾಗುತ್ತದೆ. ದುಡಿತಕ್ಕೆ ಹೋಗುವ ವರೆಗೆ ಮನೆಯ ಕರ್ತವ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ದಿನವಿಡೀ ಮನೆಯಿಂದ ಹೊರಗೆ ಇರುವುದರಿಂದ ಮಕ್ಕಳು ಕಳ್ಳತನ ಕಲಿಯುವ, ದುಷ್ಟರ ಸಹವಾಸಕ್ಕೆ ಬೀಳುವ ಸಾಧ್ಯತೆಗಳು ಇರುತ್ತವೆ. ಮಕ್ಕಳು ದಾರಿ ತಪ್ಪಿದರೆ ಅದರಿಂದ ಸಂಕಟಪಡಬೇಕಾದವಳು ಅವಳೇ ಹೀಗಾಗಿ ಕೊರವಂಜಿಯು ಮನೆಯ ಒಳಗು ಹೊರಗು ಹೀಗೆ ಎರಡು ಕಡೆ ಕೆಲಸದ ಹೊರೆ ಹೊರುವ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ.

ಇನ್ನು ಹೊರಗೆ ದುಡಿಯುವ ಹೆಣ್ಣನ್ನು ಸಮಾಜ ತಾತ್ಸಾರ ಭಾವನೆಯಿಂದ ಕಾಣುತ್ತದೆ. ಹೊಸ್ತಿಲು ದಾಟಿದ ಹೆಣ್ಣು ಗಂಡನ ರಕ್ಷಣೆಯಿಂದ ಹೊರದೂಡಲ್ಪಟ್ಟವಳೇ ಎಂಬ ನಂಬಿಕೆ ಸಮಾಜದಲ್ಲಿರುವುದರಿಂದ ಇಂತಹ ದುಡಿಯುವ ಹೆಣ್ಣು ಮಕ್ಕಳನ್ನು ಸಮಾಜ ಅನುಮಾನದಿಂದಲೇ ನೋಡುತ್ತದೆ. ಜಾರಿದ ಹೆಣ್ಣು ಎಂಬ ಕಳಂಕವನ್ನು ಅವಳಿಗೆ ಅಂಟಿಸುತ್ತದೆ. ತಮ್ಮ ವಿಶಾಲವಾದ ದೃಷ್ಟಿಕೋನದಿಂದ ತಮಗಂಟಿದ ಕಳಂಕವನ್ನು ತೊಡೆದುಕೊಳ್ಳುತ್ತಾರೆ. ತಾವು ವ್ಯವಹರಿಸುವ ಪ್ರತಿಯೊಬ್ಬ ವ್ಯಕ್ತಿಯಲ್ಲಿಯು ತನ್ನ ಕುಟುಂಬವನ್ನು ಕಾಣುತ್ತಾಳೆ. ಅವರೊಂದಿಗೆ ಅದೇ ಭಾವನೆ ಪ್ರೀತಿ, ವಿಶ್ವಾಸದಿಂದ ನಡೆದುಕೊಳ್ಳುತ್ತಾಳೆ. ಭ್ರಾತೃತ್ವ ಭಾವನೆಯನ್ನು ಬೆಳಸಿಕೊಳ್ಳುತ್ತಾಳೆ. ತಾವು ತಮ್ಮತನವನ್ನು ಮೀರಿ ಸಾರ್ವತ್ರಿಕ ವ್ಯಕ್ತಿಯಾಗಿ ಮಾರ್ಪಟ್ಟು ತಮ್ಮ ಸಂಕಟವನ್ನು ಸೃಜನಶೀಲ ಕಲೆಯನ್ನಾಗಿ ಪರಿವರ್ತಿಸಿ ಕೊಳ್ಳುತ್ತಾರೆ. ತಮ್ಮಂತೆ ಸಂಕಟದಲ್ಲಿರುವವರಿಗೆ ಪರಿಹಾರ ನೀಡುವ ಕಲೆಯನ್ನು ಬೆಳಸಿಕೊಳ್ಳುತ್ತಾರೆ. ಆಗ ಇವಳ ನಡುವಳಿಕೆಯನ್ನು ಮೆಚ್ಚಿದ ಸಮಾಜ ಇವಳನ್ನು ತಮ್ಮವಳನ್ನಾಗಿ ಸ್ವೀಕಾರ ಮಾಡುತ್ತದೆ. ಈ ಮೂಲಕ ಕೊರವಂಜಿಯರು ತಮಗಂಟಿದ ಕಳಂಕವನ್ನು ಕಳೆದುಕೊಳ್ಳುತ್ತಾರೆ.

### ೪.೫. ಲೈಂಗಿಕ ಬಿಕ್ಕಟ್ಟುಗಳು

ಹೊರಗೆ ದುಡಿಯುವ ಕೊರವಂಜಿಗೆ ಲೈಂಗಿಕ ಕಿರುಕುಳದಂತಹ ಸಮಸ್ಯೆಗಳು ಎದುರಾಗುತ್ತವೆ. ಆರ್ಥಿಕ ದುರ್ಬಲತೆ, ಒಂಟಿಯಾಗಿರುವಿಕೆಯನ್ನು ಬಳಸಿಕೊಂಡು ಸಮಾಜದ ಕೆಲವರು ಇವರಿಗೆ ಲೈಂಗಿಕ ಕಿರುಕುಳ ನೀಡುವ ಪ್ರಯತ್ನವನ್ನು ಮಾಡುತ್ತಾರೆ. ಲೈಂಗಿಕ ಕಿರುಕುಳದಂತಹ ಸಮಸ್ಯೆಗಳು ಬಂದರೆ ಅವುಗಳನ್ನು ಅವಳೇ ನಿವಾರಿಸಿಕೊಳ್ಳುತ್ತಾಳೆ, ಹೊರತು ಸಹಿಸುವುದಿಲ್ಲ. ಬದುಕಿಗಾಗಿ ಊರುಸುತ್ತುವ ಕೊರವಿಯನ್ನು ಸಮಾಜ ನೋಡುವ ದೃಷ್ಟಿಯೇ ಅವಳನ್ನು ಭೋಗವಸ್ತುವನ್ನಾಗಿಸಿದೆ. ಹಾಗಂತ ಕೊರವಿಯಂತ ಕೆಳವರ್ಗದ ಹೆಣ್ಣು ಬದುಕಿಗಾಗಿ ಪಡುವ ಬವಣೆಯನ್ನು ಲೈಂಗಿಕಾಸಕ್ತಿಯಲ್ಲಿ ಕರಗಿಸಿಕೊಳ್ಳುವುದಿಲ್ಲ. ಕೊರವಿಯಂಥ ವ್ಯಕ್ತಿತ್ವವು ಸಮಾಜವು ಆ ಸಮುದಾಯದ ಹೆಣ್ಣುಗಳ ಬಗ್ಗೆ ಇಟ್ಟಂಥ ಕೆಟ್ಟ ದೃಷ್ಟಿಕೋನಗಳನ್ನು ಪ್ರಶ್ನಿಸುತ್ತದೆ. ಹಾಗೂ ತಾನು ಭೋಗವಸ್ತುವಲ್ಲ ಎನ್ನುವ

ಆತ್ಮವಿಶ್ವಾಸವನ್ನು ತೋರಿಸುತ್ತದೆ. ಹೆಣ್ಣನ್ನು ಸಂಪತ್ತೀಕರಿಸಿ ಅವಳನ್ನು ವಸ್ತುಗಳೊಂದಿಗೆ ಸಮೀಕರಿಸುವ ಮೂಲಕ ಭೋಗವಸ್ತುವಾಗಿಸಿದ ವ್ಯವಸ್ಥೆಗೆ ವಿರುದ್ಧವಾಗಿ ಕೊರವಂಜಿ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳುತ್ತಾಳೆ. ಪರಪುರುಷರ ಕಣ್ಣುಗಳ ಬೆಂಕಿಯಲ್ಲಿ ಕರಗದೆ ಆ ಬೆಂಕಿಯಿಂದಲೇ ಹೊಸರೂಪ ಪಡೆದುಕೊಳ್ಳುವ ಕೊರವಂಜಿ ಹೆಣ್ಣು ಎನ್ನುವ ಕೃತಕ ಜೈವಿಕ ವಿಭಜನೆಯನ್ನು ಮೀರಿ ನಿಲ್ಲುತ್ತಾಳೆ ಅಂಥ ಸಂದಿಗ್ಧದ ಸಂದರ್ಭಗಳು ಬಂದಾಗ ಅವಳು ತೋರುವ ಧೈರ್ಯ ಮತ್ತು ವಿವೇಕ ಕುತೂಹಲಕಾರಿಯಾದಂಥವು.

'ಕೊರಾಚಿಕಂಚಿ' ಕಥೆಯ ಕೊರವಂಜಿಯನ್ನು ಮೇಲ್ವರ್ಗದ ನಾರಾಯಣಸ್ವಾಮಿ ಅಪೇಕ್ಷೆ ಪಟ್ಟಾಗ ತನ್ನ ವಿವೇಕಯುತ ನಡವಳಿಕೆಯಿಂದ ಗಂಡನಿಗೆ ಉಂಬಲಿಕ್ಕೆ ಇಟ್ಟು ಬರುವೆ ಎಂದು ಹೇಳಿ ಹೊರಗೆ ಹೋಗಿ ಮಾಲಕ್ಷ್ಮಿ ಅಮ್ಮೋರನ್ನ ಅಲ್ಲಿಗೆ ಕಳಿಸುತ್ತಾಳೆ. ಬದುಕು ಅವಳಿಗೆ ತಂದುಕೊಟ್ಟ ಧೈರ್ಯ ಅನುಭವಗಳಿಂದ ಅವಳು ತನ್ನ ಮೇಲೆ ನಡೆಯುವ ಲೈಂಗಿಕ ಆಕ್ರಮಣದಿಂದ ತನ್ನನ್ನು ಕಾಪಾಡಿಕೊಳ್ಳುತ್ತಾಳೆ.

ಆಧುನೀಕರಣದಿಂದ ಗ್ರಾಮಗಳು ನಗರಗಳಾಗಿ ಪರಿವರ್ತನೆ ಹೊಂದುತ್ತಿರುವುದರಿಂದ, ಕೆಲವೊಂದು ವರ್ಗಗಳು ಭವಿಷ್ಯ ಹೇಳುವುದನ್ನು ವ್ಯಾಪಾರವನ್ನಾಗಿ ಮಾಡಿಕೊಂಡಿರುವುದರಿಂದ ಜನರ ಬದಲಾದ ಮನಸ್ಥಿತಿಯಿಂದಲೂ ಕೊರವಂಜಿ ನಿತ್ಯ ಸಂಕಟಗಳನ್ನು ಎದುರಿಸುವಂತಾಗಿದೆ.

ವಸಾಹತು ಸಂಸ್ಕೃತಿಯಿಂದ ನಮ್ಮ ಗ್ರಾಮಗಳು ಇಂದು ನಗರಗಳಾಗಿ ಪರಿವರ್ತನೆ ಹೊಂದುತ್ತಿವೆ. ಗ್ರಾಮಸಂಸ್ಕೃತಿಯಲ್ಲಿ ಒಬ್ಬರಿಗೊಬ್ಬರು ಕೊಟ್ಟು ತೆಗೆದುಕೊಳ್ಳುವ ಸಹಬಾಳ್ವೆ, ಒಬ್ಬರ ಕಷ್ಟಕ್ಕೆ ಒಬ್ಬರು ಸ್ಪಂದಿಸುವ ಸಹಕಾರ ಮನೋಭಾವನೆ ಇತ್ತು. ಕೊರವಂಜಿಯರು ಊರೂರು ತಿರುಗಿ ಗ್ರಾಮೀಣರಿಗೆ ಭವಿಷ್ಯ ಹೇಳುತ್ತಿದ್ದರು. ಜೊತೆಗೆ ಕೃಷಿಕರಿಗೆ ದಿನನಿತ್ಯದ ಬಳಕೆಗೆ ಬೇಕಾಗುವಂತಹ ಹಗ್ಗ, ನೆಲವು, ಕಸಬರಿಗೆ ಮುಂತಾದ ವಸ್ತುಗಳನ್ನು ತಯಾರಿಸಿ ಪೂರೈಸುತ್ತಿದ್ದರು. ಪ್ರತಿಯಾಗಿ ಅವರು ಇವರಿಗೆ ಬೇಕಾದಂತಹ ದವಸಧಾನ್ಯಗಳನ್ನು ಅವರು ಬಂದಾಗಲೋ ಅಥವಾ ರಾಶಿ ಸಂದರ್ಭದಲ್ಲಿ ಆಯಗಾರಿಕೆ ರೂಪದಲ್ಲೂ ನೀಡುತ್ತಿದ್ದರು. ಇವತ್ತು ಗ್ರಾಮೀಣ ಪ್ರದೇಶದಲ್ಲಿಯೂ ಸುಧಾರಿತ ಯಂತ್ರಬೇಸಾಯ ಪದ್ಧತಿಗಳನ್ನು ಅಳವಡಿಸಿ ಕೊಂಡಿರುವುದರಿಂದ, ಮಿಕ್ಸರ್, ರಿಪ್ರಿಜರೇಟರನಂತ ವಿದ್ಯುತ್ ಯಂತ್ರಗಳು ಅಡುಗೆ ಮನೆಯನ್ನು ಪ್ರವೇಶಿಸಿರುವದರಿಂದ ಇವರ ಹಗ್ಗ, ನೆಲವುಗಳು ತಮ್ಮ ಬೇಡಿಕೆಯನ್ನು ಕಳೆದುಕೊಂಡಿವೆ. ಜೊತೆಗೆ ನಗರ ಜೀವನದ ಕೊಂಡು ತಿನ್ನುವ ಪದ್ಧತಿಯಿಂದಾಗಿ ಜನರು ಮುಂಚಿನಂತೆ ಧಾರಾಳತನದಿಂದ ದವಸಧಾನ್ಯಗಳನ್ನು ಕೊಡಲು ಸಾಧ್ಯವಾಗುತ್ತಿಲ್ಲ. ಹೀಗಾಗಿ ಇವರ ಉದ್ಯೋಗಕ್ಕೆ ಕತ್ತರಿ ಬಿದ್ದು, ಇವರಿಗೆ ಬರುವ ಆದಾಯವು ಕಡಿಮೆಯಾಗಿದೆ.

ಗ್ರಾಮೀಣರು ಇವರ ಕಣಿಯಲ್ಲಿ ಅಪಾರವಾದ ನಂಬಿಕೆಯನ್ನು ಇಟ್ಟುಕೊಂಡಿದ್ದರು. ಅದಕ್ಕಾಗಿ ಇವರನ್ನು ಗೌರವಿಸುತ್ತಿದ್ದರು. ಆದರೆ ಇಂದು ಜನ ಸುಶಿಕ್ಷಿತರಾಗಿ ಕಣಿ ಕೇಳುವುದು ಮೂಢನಂಬಿಕೆ ಎಂದು ಭಾವಿಸಿ ಕಣಿ ಕೇಳುವದಿಲ್ಲ. ಆದರೆ ಆಧುನಿಕ ಸಮೂಹ ಮಾಧ್ಯಮಗಳು ವ್ಯಾಪಾರಕ್ಕಾಗಿ ಬಿತ್ತರಿಸುವ ಭವಿಷ್ಯವನ್ನು ಅದರಲ್ಲಿ ಹುರುಳಿಲ್ಲದಿದ್ದರು ಅದನ್ನೇ ನೋಡುವ, ಕೇಳುವ ಕಾರ್ಯದಲ್ಲಿ ತೊಡಗುತ್ತಾರೆ. ಭರವಸೆಯನ್ನು ಹುಟ್ಟಿಸುವ, ಸಾಂತ್ವನ ಮಾಡುವ ಕಣಿಗಿಂತ ಭೀತಿಗೊಳಿಸುವ ಹಣ

ಸುಲಿಯುವ ಜ್ಯೋತಿಷ್ಯದತ್ತ ಜನ ಆಕರ್ಷಿತರಾಗುತ್ತಿರುವುದರಿಂದ ಇವರು ಕಣಿ ಹೇಳುವ ಉದ್ಯೋಗವು ನಶಿಸುತ್ತಿದೆ.

ಇನ್ನು ಇವರು ಕೆಲವೊಂದು ದೇವಸ್ಥಾನಗಳಲ್ಲಿ ಕಣಿ ಹೇಳಲು ಕುಳಿತಾಗ ಇದು ಮೋಸದ ವ್ಯವಹಾರ, ಇದನ್ನು ಮಾಡಬೇಡಿ ಎಂದು ಹೇಳುವ ಆರಕ್ಷಕರು ಇವರಿಂದ ಚಂದಾವಸೂಲಿ ಮಾಡುವ ಪ್ರವೃತ್ತಿಯನ್ನು ಬೆಳಸಿಕೊಂಡಿದ್ದಾರೆ. ಮೊದಲೇ ತಮ್ಮ ಉದ್ಯೋಗಕ್ಕೆ ಕುತ್ತು ಬಂದು ಆದಾಯವಿಲ್ಲದೆ ಒದ್ದಾಡುತ್ತಿರುವ ಇವರು ಆರಕ್ಷಕರಿಗೂ ತಮ್ಮ ಉದ್ಯೋಗ ನಡೆಸಲು ಹಣವನ್ನು ಕೊಡಬೇಕಾಗಿದೆ.

ಇದಲ್ಲದೆ ಇವತ್ತು ಸರಕಾರ ಮೂಢನಂಬಿಕೆ ವಿರೋಧಿ ಕಾನೂನನ್ನು ಜಾರಿಗೆ ತರಲು ಹೊರಟಿದೆ. ಯಾವುದು ನಂಬಿಕೆ, ಯಾವುದು ಮೂಢನಂಬಿಕೆ ಎಂಬುದನ್ನು ಸರಿಯಾಗಿ ತೀರ್ಮಾನಿಸದೆ ಕಾನೂನು ಜಾರಿಗೆ ತಂದರೆ ಮೊದಲೇ ತಮ್ಮ ಉದ್ಯೋಗ ನಡೆಸಲು ಪರದಾಡುತ್ತಿರುವ ಇವರು ಮತ್ತಷ್ಟು ಸಂಕಷ್ಟಗಳನ್ನು ಎದುರಿಸಬೇಕಾಗುತ್ತದೆ. ಆದರೂ ಇಂತಹ ಕಾಲಮಾನದ ಬದಲಾವಣೆಯಿಂದ ಬಂದಂತಹ ಸಂಕಷ್ಟಗಳನ್ನು ಇವರು ಎದುರಿಸುತ್ತಾ ನಡೆದಿದ್ದಾರೆ.

ಅಖಂಡವಾದ ಲೋಕದೃಷ್ಟಿ ಹೊಂದಿರುವ ಕೊರವಂಜಿಯರು ಅವಸಾನದ ಕೊನೆಯ ಕ್ಷಣದಲ್ಲಿಯೂ ವಿಶ್ವಾಸವನ್ನು ಕಳೆದುಕೊಳ್ಳದೆ ಮುಂದೆ ಒಳಿತಾಗುತ್ತದೆಂಬ ಸಕಾರಾತ್ಮಕ ಭಾವನೆಯನ್ನು ರೂಢಿಸಿಕೊಂಡಿದ್ದಾರೆ. ಇವರ ಅಖಂಡ ವಿಶ್ವಾಸ, ಬದುಕಿನ ಛಲ, ಸಕಾರಾತ್ಮಕ ಮನೋಭಾವ, ವಿಶಾಲದೃಷ್ಟಿಕೋನ ಇವರನ್ನು ಈ ಎಲ್ಲ ಸಂಕಟಗಳನ್ನು ಮೀರಿ ನಿಲ್ಲುವಂತೆ ಮಾಡಿದೆ. ಹಂಚಿಕೊಳ್ಳುವ ಮನೋಭಾವ, ನಿರಪೇಕ್ಷ ಪ್ರೀತಿ, ಅಹಂಕಾರ ನಿರಸನ, ಲಿಂಗಜಾತಿ ಮೀರಿದ ಸ್ನೇಹ ಇವರು ಸಂಕಟಗಳನ್ನು ಎದುರಿಸುವ ಶಕ್ತಿಯನ್ನು ನೀಡಿದೆ. ತಮ್ಮ ಸಾಂತ್ವನದ ಗುಣ, ತಾಳ್ಮೆ, ಸಹನೆಯಿಂದ ಇವರು ದಿನನಿತ್ಯದ ಸಾವಿರಾರು ಸಂಕಷ್ಟಗಳ ನಡುವೆಯೂ ನೆಮ್ಮದಿಯ ಜೀವನವನ್ನು ನಡೆಸಿದ್ದು ಕಂಡುಬರುತ್ತದೆ. ನಿತ್ಯ ಬದುಕಿನ ಹಲವಾರು ಕಷ್ಟ ಕಾರ್ಪಣ್ಯಗಳಲ್ಲಿ ಕಂಗಾಲಾದರೂ ಎದೆಗುಂದದ ಆತ್ಮವಿಶ್ವಾಸ ಕೊರವಂಜಿಯದು.

**ಕೊನೆಟಿಪ್ಪಣಿ**

೧. ಮಾಹಿತಿ ನೀಡಿದವರು, ಶಾಂತವ್ವ ಕೊರವರ(೪೫) ಸವದತ್ತಿ

೨. ಇಂದುಬಾಯಿ ಟಿ.ಕೆ.(ಸಂ), ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪುಟ.೧೪೧, ೧೯೮೭

೩. ಚೆಲುವರಾಜು (ಸಂ), ಜುಂಜಪ್ಪ, ಪುಟ.೫೭, ೫೮, ೧೯೯೭

೪. ಮಲ್ಲಾಪುರ ಬಿ.ಫ಼ಿ.(ಸಂ), ಕೊರವರು ಕೊರಚರು, ಜನಪದ ಸಾಹಿತ್ಯ ದರ್ಶನ-೬, ಪುಟ.೨೦೬, ೧೯೮೦

೫. ಬರಗೂರು ರಾಮಚಂದ್ರಪ್ಪ(ಪ್ರ.ಸಂ.) ಕೊರವರ ಸಂಸ್ಕೃತಿ(ಉಪಸಂಸ್ಕೃತಿ ಅಧ್ಯಯನ ಮಾಲೆ), ಪುಟ.೧೦೨, ೧೯೯೩

೬. ಬರಗೂರು ರಾಮಚಂದ್ರಪ್ಪ(ಪ್ರ.ಸಂ.) ಕೊರವರ ಸಂಸ್ಕೃತಿ(ಉಪಸಂಸ್ಕೃತಿ ಅಧ್ಯಯನ ಮಾಲೆ), ಪುಟ.೧೧೮, ೧೯೯೩

೭. ಕಾಪಸೆ ರೇವಪ್ಪ(ಸಂ), ಮಲ್ಲಿಗೆ ದಂಡೆ(ಚತುರ್ಥ ಮುದ್ರಣ), ಪುಟ.೩೨, ೧೯೯೦

೮. ಅದೇ ಪುಟ.೩೨

೯. ಕಾಪಸೆ ರೇವಪ್ಪ(ಸಂ), ಮಲ್ಲಿಗೆ ದಂಡೆ(ಚತುರ್ಥ ಮುದ್ರಣ), ಪುಟ.೩೪, ೧೯೯೦

೧೦. ಇಂದುಬಾಯಿ ಟಿ.ಕೆ.(ಸಂ), ಸಮಗ್ರ ದಾಸ ಸಾಹಿತ್ಯ ಸಂಪುಟ–೮: ಪುಟ.೪೭೩, ೨೦೦೩

೧೧. ಇಂದುಬಾಯಿ ಟಿ.ಕೆ.(ಸಂ), ಸಮಗ್ರ ದಾಸ ಸಾಹಿತ್ಯ ಸಂಪುಟ–೮: ಪುಟ.೪೭೨, ೨೦೦೩

೧೨. ಮರುಳಸಿದ್ದಪ್ಪ(ಸಂ), ಲಾವಣಿಗಳು, ಪುಟ.೧೭೩, ೧೯೭೫

೧೩. ಬರಗೂರು ರಾಮಚಂದ್ರಪ್ಪ(ಪ್ರ.ಸಂ.), ಕೊರವರ ಸಂಸ್ಕೃತಿ(ಉಪಸಂಸ್ಕೃತಿ ಅಧ್ಯಯನ ಮಾಲೆ), ಪುಟ.೪೮, ೧೯೯೩

೧೪. ನಾಗರತ್ನ ಟಿ.ಎಸ್.(ಸಂ), ಸಮಗ್ರ ದಾಸಸಾಹಿತ್ಯ ಸಂಪುಟ–೨, ಪುಟ.೪೦೦, ೨೦೦೩

೧೫. ಇಂದುಬಾಯಿ ಟಿ.ಕೆ.(ಸಂ), ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪುಟ.೧೪೦, ೧೯೮೭

೧೬. ಇಂದುಬಾಯಿ ಟಿ.ಕೆ., ಸಮಗ್ರ ದಾಸ ಸಾಹಿತ್ಯ ಸಂಪುಟ–೮, ಪುಟ.೪೭೩, ೨೦೦೩

೧೭. ಇಂದುಬಾಯಿ ಟಿ.ಕೆ.(ಸಂ), ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪುಟ.೧೪೧, ೧೯೮೭

೧೮. ಮರುಳಸಿದ್ಧಪ್ಪ, ಲಾವಣಿಗಳು, ಪುಟ.೧೭೪, ೧೯೭೫

೧೯. ಮರುಳಸಿದ್ಧಪ್ಪ, ಲಾವಣಿಗಳು, ಪುಟ.೧೭೫, ೧೯೭೫

* * *

ಹೆಚ್ಚಿನ ಸಂದರ್ಭಗಳಲ್ಲಿ ಹೆಣ್ಣನ್ನು ತಾಯಿಯಾಗಿ, ಹೆಂಡತಿಯಾಗಿ, ಗೃಹಿಣಿಯಾಗಿ ಲೈಂಗಿಕ ಪಾವಿತ್ರ್ಯದ ಹಿನ್ನೆಲೆಯಲ್ಲಿ ನೋಡಲಾಗಿದೆ. ಆದರೆ ಕೊರವಂಜಿಯಂಥ ಮಹಿಳೆಯನ್ನು ಕೌಟುಂಬಿಕ ನೆಲೆಗಳಲ್ಲಿಟ್ಟಾಗಲೀ ಅಥವಾ ಕುಟುಂಬ ಸಂವಾದಿಯಾಗಿಯಾಗಲೀ ಪರಿಭಾವಿಸಿದ ನಿದರ್ಶನಗಳು ಅಷ್ಟಾಗಿ ಕಾಣುವುದಿಲ್ಲ. ಗಂಡುನಿಷ್ಠ ಅಥವಾ ಪತಿನಿಷ್ಠ ಅತಿರೇಖದ ಸಂಗತಿಗಳು ಕೊರವಂಜಿಯಂಥ ಅನೇಕ ಮಹಿಳಾ ಕಲಾವಿದೆಯರನ್ನು ಬಾಧಿಸಿವೆ. ಪುರುಷ ಪ್ರಧಾನ ಅಧ್ಯಯನಗಳು ಹೋಗಲೀ ಮಹಿಳಾ ಅಧ್ಯಯನಗಳು ಕೂಡ ಇಂಥ ಕೆಳವರ್ಗದ ಮಹಿಳೆಯರನ್ನು ಸಾಂಪ್ರದಾಯಿಕ ಮನೋಧರ್ಮದಲ್ಲೋ, ಕಠಿಣ ಪದಗಳಲ್ಲೋ ಅಥವಾ ಮೌನದಲ್ಲೋ ಮುರಿದಿಟ್ಟಿರುವುದನ್ನು ನೋಡಬಹುದು.

ಹಾಗೆ ನೋಡಿದರೆ ಕೊರವಂಜಿ ತನ್ನ ಕಣಿ ಹೇಳುವ ಕಲೆಯಿಂದಾಗಿ ಲಿಂಗಾತೀತಳು ಹಾಗೂ ಜಾತ್ಯಾತೀತಳು. ಆದರೂ ಅವಳನ್ನು ಹೆಣ್ಣು ಎಂಬ ದೇಹವಾದಿ ಲೈಂಗಿಕ ಪಾವಿತ್ರ್ಯದ ಹಿನ್ನೆಲೆಯಲ್ಲೇ ಪರಿಭಾವಿಸಿದ್ದು ಹೆಚ್ಚು. ಹೊರಗಿನ ಹಾಗೂ ಒಳಗಿನ ದುಡಿಮೆಗಾಗಿ ಒಡ್ಡಿಕೊಳ್ಳುವ ಹೆಣ್ಣಿಗೆ ಸಮಾಜ ನೀಡುವ 'ವಕ್ತಿತ್ವ ಹೀನಳು' ಎನ್ನುವ ಪದ ಇವಳಿಗೂ ಅಂಟಿದೆ. ನಮ್ಮ ಸಮಾಜದಲ್ಲಿ ಹೆಣ್ಣುತನ ಎನ್ನುವುದು ಜೈವಿಕವಾದ ವಿಶಿಷ್ಟ ಸಂಗತಿಯಷ್ಟೇ ಅಲ್ಲ, ಸಾಮಾಜಿಕ ರಚನೆಯೂ ಕೂಡ ಆಗಿದೆ. ಸಾಮಾಜಿಕವಾಗಿ ಹೆಣ್ಣುತನದ ಪಾತ್ರಗಳನ್ನು, ನಿಯೋಗಗಳನ್ನು, ಸ್ವರೂಪವನ್ನು ಅದರ ಕರ್ತವ್ಯಗಳನ್ನು ನಾವು ರಚಿಸಿಕೊಂಡಿದ್ದೇವೆ, ಪೋಷಿಸುತ್ತಿದ್ದೇವೆ ಮತ್ತು ಬೆಳೆಸುತ್ತಿದ್ದೇವೆ. ಅದನ್ನು ಪೋಷಿಸಲು ಹಾಗೂ ಬೆಳೆಸಲು ಮೇಲಿಂದ ಮೇಲೆ ಬೇಕಾದ ಪ್ರಯತ್ನಗಳನ್ನು ಸಾಮಾಜಿಕವಾಗಿ ಮಾಡಲಾಗುತ್ತಿದೆ. ಅದಕ್ಕೆ ಅನುಗುಣವಾಗಿ ಕಾರ್ಯ ನಿರ್ವಹಿಸುವ ಸಾಮಾಜಿಕ ಸಂಸ್ಥೆಗಳಿವೆ. ಅದರಲ್ಲಿ ಶಿಕ್ಷಣ, ಅಧಿಕಾರ, ಕಾನೂನು, ಇಂಥ ಸಂಗತಿಗಳು ಬೇಕಾದಷ್ಟಿವೆ. ಇಂಥ ಸಂಸ್ಥೆಗಳಲ್ಲಿ ಗಂಡಿಗೆ ಯಾವಾಗಲೂ ಕರ್ತೃವಿನ ನೆಲೆ, ಹೆಣ್ಣಿಗೆ ಯಾವಾಗಲೂ ಅನುಭೋಗಿಯ ನೆಲೆ. ಗಂಡು

ಯಾವಾಗಲೂ ಕೊಡುವವನು, ಹೆಣ್ಣು ಯಾವಾಗಲೂ ಪಡೆದುಕೊಳ್ಳುವವಳು ಎನ್ನುವ ಯಥಾಸ್ಥಿತಿವಾದವನ್ನೇ ಪ್ರತಿಪಾದಿಸುತ್ತ ಬರಲಾಗಿದೆ.

ಹೀಗೆ ಗಂಡಿನಿಂದ ಪಡೆದದ್ದನ್ನು ಹೆಣ್ಣು ಕಾಪಿಡುವ ಹಾಗೂ ರಕ್ಷಿಸುವ ಕೆಲಸವನ್ನು ಮಾಡಬೇಕು. ಹಾಗಂತ ಅದನ್ನು ತಾನೇ ಇಟ್ಟುಕೊಳ್ಳುವಂತಿಲ್ಲ. ಅದನ್ನು ಮರು ರೂಪದಲ್ಲಿ ಅವಳು ಮತ್ತೇ ಈ ಸಮಾಜಕ್ಕೆ ಕೊಡಬೇಕು. ಗರ್ಭಧಾರಣೆ ಮತ್ತು ಹೆರಿಗೆ ಇದಕ್ಕೆ ಉತ್ತಮ ಉದಾಹರಣೆಗಳು.

ಕೊರವಂಜಿಯ ದೊಡ್ಡ ಶಕ್ತಿಯೇ ಭಾಷೆಯ ಉತ್ಪಾದನೆ ಹಾಗೂ ಸಮರ್ಥ ಬಳಕೆ. ಅದನ್ನು ಭಾಷಾ ಸೃಜನಶೀಲತೆ ಎಂದೂ ಕರೆಯಬಹುದು. ಅವಳ ಭಾಷೆ ಆಶುನೆಲೆಯದ್ದು ಹಾಗೂ ಸ್ವಯಂಪ್ರೇರಿತವಾದದ್ದು. ಸಂವಹನ ಸಾಮರ್ಥ್ಯ ಉಳ್ಳದ್ದು. ಭಾಷೆಯ ಉತ್ಪಾದನೆ ಹಾಗೂ ಬಳಕೆಯ ನೆಲೆಯಲ್ಲಿ ಹೆಣ್ಣು ಗಂಡು ಎಂಬ ವಿಭಜನೆ ಕಂಡುಬರುತ್ತದೆ. ಗಂಡು ಮೆಟ್ಟಿನ ನೆಲ, ಗಂಡು ಭಾಷೆ ಎಂದು ಹೇಳುವಲ್ಲಿಯೇ ಭಾಷೆ, ಸಾಹಿತ್ಯ ಹಾಗೂ ನೆಲೆಗಳನ್ನು ಲಿಂಗೀಯ ವಿಭಜನೆಯಲ್ಲಿ ನೋಡಲಾಗುತ್ತದೆ. ಈ ವಿಭಜನೆ ಹೆಣ್ಣು ಬಳಸುವ ಭಾಷೆ. ಗಂಡು ಬಳಸುವ ಭಾಷೆಗಳನ್ನು ಪ್ರತ್ಯೇಕವಾಗಿಯೇ ಗುರುತಿಸುತ್ತದೆ. ಇದನ್ನು ಹೆಣ್ಣು ಚಿಂತನಾಕ್ರಮ ಗಂಡು ಚಿಂತನಾಕ್ರಮ ಎಂದೂ ಗುರುತಿಸಲಾಗುತ್ತದೆ. ಸಾದೃಶ್ಯ ಮೂಲವಾಗಿ ವಿಚಾರಮಾಡುವುದು ಗಂಡಿನ ಚಿಂತನಕ್ರಮವೆಂದೂ, ಸಂಬಂಧ ಮೂಲವಾಗಿ ವಿಚಾರ ಮಾಡುವುದು ಹಾಗೂ ಅಭಿವ್ಯಕ್ತಿ ಮಾಡುವುದನ್ನು ಹೆಣ್ಣು ಚಿಂತನಾ ಕ್ರಮವೆಂದು ವ್ಯಾಖ್ಯಾನಿಸಲಾಗುತ್ತಿದೆ. ಗಂಡು ಭಾಷೆ ಅಥವಾ ಆಲೋಚನ ಕ್ರಮವೆಂದರೆ ಅದು ಸವಾಲಿನ ರೂಪದ್ದು ಹಾಗೂ ತನ್ನ ಆಲೋಚನ ಕ್ರಮಗಳನ್ನು ಮತ್ತೊಬ್ಬರ ಮೇಲೆ ಹೇರುವ ಹಾಗೂ ಮತ್ತೊಬ್ಬರ ವಿಚಾರಗಳನ್ನು ನಿರಾಕರಿಸುವ ಮಾದರಿಯದ್ದು. ಹೆಣ್ಣು ಆಲೋಚನೆ ಅಥವಾ ಅಭಿವ್ಯಕ್ತಿ ಕ್ರಮವು ಅದು ಒಳಗೊಳ್ಳುವ, ನಿರೂಪಿಸುವ ಹಾಗೂ ಉತ್ತರಿಸುವ ರೂಪದ್ದು. ಇಂಥ ಚಿಂತನೆಗಳನ್ನು ಭಾಷಾಶಾಸ್ತ್ರಜ್ಞರು ಸ್ತ್ರೀವಾದಿ ಚಿಂತಕರು ರೂಪಿಸುತ್ತಾ ಬಂದಿದ್ದಾರೆ.

ಹಾಗೆ ನೋಡಿದರೆ ಹೆಣ್ಣು ಮತ್ತು ಗಂಡು ಇವೆರಡೂ ವಿರೋಧಿ ನೆಲೆಯ ಸಂಗತಿಗಳಲ್ಲ. ಅವು ಎರಡೂ ಪರಸ್ಪರ ಅವಲಂಬಿಸುವ ಹಾಗೂ ಮುಖಾಮುಖಿಯಾಗುವ ನೆಲೆಗಳು. ಹೊಸದೊಂದು ಸೃಷ್ಟಿಗೆ ಪೂರಕವಾಗುವಂಥವು. ಹೆಣ್ಣು ಗಂಡೆಂಬ ಜೈವಿಕ ಹಾಗೂ ಭಾಷಿಕ ಪ್ರಭೇದಗಳು ಮೇಲು ಕೀಳೆಂಬ ಪ್ರಧಾನ ಹಾಗೂ ಅಧೀನ ಎನ್ನುವ ವ್ಯತ್ಯಾಸಗಳನ್ನು ಸಂರಚಿಸಿ ಬಿಟ್ಟಿವೆ. ಇವು ಹೆಣ್ಣನ್ನು ಮೌನಿಯನ್ನಾಗಿಸುತ್ತವೆ. ಇವನ್ನು ಶೋಷಿತ ಅಥವಾ ದಮನಿತ ನೆಲೆಯ ಸರಳೀಕರಣಗಳನ್ನಾಗಿ ನೋಡದೆ, ಪರಸ್ಪರ ಪೂರಕವೆಂಬಂತೆ ನೋಡಿದಾಗ ಮಾತ್ರ ಕೊರವಂಜಿ ಅಧ್ಯಯನಕ್ಕೆ ಭಿನ್ನ ನೆಲೆ ಪ್ರಾಪ್ತವಾಗುತ್ತದೆ.

ಮಾತಿದ್ದರೂ, ಉತ್ಪತ್ತಿ ಸಾಮರ್ಥ್ಯವಿದ್ದರೂ ಹೆಣ್ಣನ್ನು ಕ್ರಿಯಾಹೀನವಾಗಿ, ಆಕೆಯ ಭಾಷೆಗೆ ಅರ್ಥವಿಲ್ಲದ ಹಾಗೆ ಸಮಾಜವು ಮೌನಗೊಳಿಸುತ್ತ ಬಂದಿದೆ. ಮಾತಿನ ಮಧ್ಯ 'ನೀ ಬಾಯಿ ಮುಚ್ಚು' 'ಸುಮ್ನಕುಂದ್ರ' 'ಅತೀವಾಚಾಳಿ' 'ಮಾತಿನಮಲ್ಲಿ' ಎಂದು ಅವಳ ಮಾತು ಹಾಗೂ

ವ್ಯಕ್ತಿತ್ವಕ್ಕಿರುವ ಅರ್ಥವನ್ನು ಪಲ್ಲಟಗೊಳಿಸುತ್ತಾ ಬರಲಾಗಿದೆ. ಹೆಣ್ಣಿಗೆ ಮಾತಿನ ಸಾಮರ್ಥ್ಯವಿದ್ದರೂ ಅದನ್ನು ಬಳಸಿದಾಗ ಅದರ ಉದ್ದೇಶ ಪೂರ್ಣಗೊಳ್ಳದ ಹಾಗೆ ನಮ್ಮ ಸಾಮಾಜಿಕ ಕಟ್ಟುಪಾಡುಗಳು ಸಂಯೋಜನೆ ಗೊಂಡಿವೆ.

ಬಹಳ ಸಂದರ್ಭದಲ್ಲಿ ಹೆಂಗಸಿನ ಅವಕಾಶ ವಂಚಿತ ಸ್ಥಿತಿಯನ್ನೇ ಕುರಿತು ಮಾತನಾಡಲಾಗುತ್ತದೆ. ಇದರಿಂದ ಪ್ರಯೋಜನ ಕಡಿಮೆ. ಹೆಣ್ಣಿಗೆ ಸಾಮರ್ಥ್ಯವಿದ್ದರೂ ಯಾಕೆ ದಮನಿತಳಾಗಿದ್ದಾಳೆ? ಎನ್ನುವುದು ನನ್ನ ಅಧ್ಯಯನದ ಬಹುಮುಖ್ಯ ಪ್ರಶ್ನೆ. ಅವಳಿಗೆ ತನ್ನ ಮಾತನ್ನು ಬಳಸುವ ಸಾಮರ್ಥ್ಯದ ಕೊರತೆಯೋ ಅಥವಾ ಬಳಕೆಯ ಅವಕಾಶದ ಕೊರತೆಯೋ? ಎಂಬುದು ಮುಖ್ಯ ಚರ್ಚೆಯಾಗಬೇಕಾಗಿದೆ. ಒಂದು ವೇಳೆ ಹೆಣ್ಣು ಮಾತನಾಡಿದರೂ ಅದು ಉದ್ದೇಶಕ್ಕೆ ಅನುಗುಣವಾಗಿ ಇರುವುದಿಲ್ಲ. ಬಳಸುವವರ ಅಪೇಕ್ಷೆಗಳನ್ನು ಪೂರೈಸುವುದಿಲ್ಲ. ಹೆಣ್ಣಿನ ಭಾಷೆ ಹಾಗೂ ಮಾತು ಅಧೀನವು ಹಾಗೂ ಕೆಲವು ಕಟ್ಟುಪಾಡುಗಳಿಗೂ ಒಳಗಾಗಿದ್ದರೆ, ಗಂಡಿನ ಭಾಷೆಯನ್ನು ಸರ್ವತಂತ್ರ ಸ್ವತಂತ್ರ ಎಂದು ಪರಿಗಣಿಸಲಾಗಿದೆ.

ಇಂಥ ಭಾಷೆಯ ಅಥವಾ ಮಾತಿನ ಬಳಕೆಯ ಮಿತಿಗಳ ಅರಿವನ್ನು ಹೊಂದಿದಾಕೆ, ಭಾಷೆ ಬಳಕೆಯ ತಾರತಮ್ಯದ ನೆಲೆಯನ್ನು ಮೀರಿದಾಕೆ ಕೊರವಂಜಿ ಎನ್ನುವುದು ಗಮನಾರ್ಹ. ನಿರ್ದಿಷ್ಟ ಜಾತಿ, ಲಿಂಗ ಹಾಗೂ ಭಾಷಾ ಚಹರೆಯನ್ನು ನಿರಾಕರಿಸಿ ತನ್ನ ಮಾತಿನ ಬಳಕೆಯ ಸಂದರ್ಭಗಳನ್ನು ಅವಕಾಶ ಹಾಗೂ ಮಾತಿನ ಅಧಿಕಾರಗಳನ್ನು ತನ್ನದನ್ನಾಗಿಸಿಕೊಂಡು, ತಾನಾಡುವ ಮಾತುಗಳಿಗೆ ಒಂದು ಅರ್ಥವನ್ನು ಹಾಗೂ ಪ್ರಯೋಜನವನ್ನು ಕಂಡುಕೊಂಡಾಕೆ ಹೊರತು, ಭಾಷಾ ಬಳಕೆಯ ಸಾಮರ್ಥ್ಯ ಹಾಗೂ ಸಂದರ್ಭವನ್ನು ಬೇಡಿ ಪಡೆದಾಕೆ ಅಲ್ಲ. ಕೆಲವೊಂದು ಮಿತಿಗಳ ಹೊರತಾಗಿಯೂ ತನ್ನ ದಯನೀಯ ಸ್ಥಿತಿಯಿಂದ ಮೇಲೆ ಬರಲು ಭಾಷೆಯನ್ನೇ ಕೊರವಂಜಿ ತನ್ನ ಸಂವಹನದ ಮೂಲವಾಗಿಸಿಕೊಳ್ಳುತ್ತಾಳೆ. ಹಾಗೂ ಆ ಮೂಲಕ ಬದುಕು ಕಟ್ಟಿಕೊಳ್ಳುತ್ತಾಳೆ.

ಕೊರವಿಯ ಮಾತು ಕೇವಲ ಮಾತಲ್ಲ ಅದಕ್ಕೊಂದು ನಿರ್ದಿಷ್ಟ ಉದ್ದೇಶವಿರುತ್ತದೆ. ಮಾತಿಗೆ ಅವಕಾಶವಿಲ್ಲದ ಸಮಾಜದಲ್ಲಿ ಹೆಣ್ಣೊಬ್ಬಳು ಭವಿಷ್ಯ ಹೇಳುವುದೆಂದರೆ ಏನು? ಜ್ಯೋತಿಷ್ಯ, ಶಕುನ ಇವೆಲ್ಲ ಗಂಡಸಿನ ಹ್ವಾರೆಗಳು ಹೆಂಗಸರಿಗಲ್ಲ ಎನ್ನುವ ಸಾಂಪ್ರದಾಯಿಕ ನಡೆಗಳು ಹೆಣ್ಣನ್ನು ಅಂಥ ಜ್ಞಾನ ಶಿಸ್ತುಗಳಿಂದ ದೂರ ಇಟ್ಟಿವೆ.

ನಮ್ಮಲ್ಲಿರುವ ಅಜ್ಜಿಕತೆಗಳು ಹೆಂಗಸರ ನಿರೂಪಣೆಗಳು. ಜಾನಪದ ಹಾಡಗಳು, ಕೊರವಂಜಿ ಮಾತುಗಳು ಕೇಳುತ್ತಿರುವ ಸಂದರ್ಭದಲ್ಲಷ್ಟೇ ಅದರ ಪರಿಣಾಮ. ಕೇಳುವ ಸಂದರ್ಭ ಹಾಗೂ ಸಮಯಗಳಾಚೆ ಅದಕ್ಕೆ ಮಹತ್ವವಿಲ್ಲ. ಸಾರ್ವತ್ರಿಕ ಗುಣವಿಲ್ಲ. ಮಾತು, ಮೌನ, ಸ್ವಗತ ಇವು ಹೆಣ್ಣಿನ ಪರಿಭಾಷೆಗಳು ಎಂದು ಹೇಳಲಾಗುತ್ತದೆ. ಅಕ್ಕನ ಪಯಣ ಸ್ವಗತಗಳ ಪಯಣ. ಪುರುಷ ಜಗತ್ತಿನಲ್ಲಿ ಆಕೆ ತನ್ನ ಮೌನ ಹಾಗೂ ಸ್ವಗತಗಳಿಂದ ಗುರುತಿಸಿಕೊಂಡಳು. ಹೆಣ್ಣಿನಲ್ಲಿ ಒಂದು ಪ್ರಕ್ರಿಯೆಯಾಗಿರುವ ಮೌನ ಕೊನೆಗೆ ಸ್ವಗತವಾಗಿ ಕವಿತೆಯ ರೂಪ ಪಡೆಯುತ್ತದೆ. ಇಂಥ ರಚನೆಗಳು ಬರೆಯುವವರ

ಅಂತಸ್ಥ ಜಗತ್ತನ್ನು ಹೇಳುತ್ತಿರುತ್ತವೆ. ಸ್ವಗತವಾದ ರಚನೆಗಳೇ ಸೃಜನಶೀಲ ಬರವಣಿಗೆಯ ಗುಣವನ್ನು ಪಡೆಯುತ್ತವೆ. ಎಷ್ಟೋ ಸಾರಿ ಕೇಳಿಸಿಕೊಳ್ಳಲಾಗದ ಹಾಗೂ ಮೂರ್ತ ಆಕರವಾಗದ ಈ ವಲಯ, ಸಂಶೋಧನೆಗೆ ಎಟುಕುವುದಿಲ್ಲ. "ಹೆಣ್ಣಿಗೊದಗುವ ಸೀಮಿತ ಜಗತ್ತೇ ಹೆಂಗಸಿನ ಸೃಜನಶೀಲ ಜಗತ್ತು" ಎಂದು ಇಂಗ್ಲೆಂಡಿನ ಕಾದಂಬರಿಕಾರ್ತಿ ಜೇನ್ ಆಸ್ಟಿನ್ ಹೇಳುತ್ತಾಳೆ.

'ಭಾಷೆ ಎಂಬುದು ಮನುಷ್ಯರೆಲ್ಲರಿಗೂ ಇರುವ ವಿಶೇಷ ಸಾಮರ್ಥ್ಯ. ಆದರೆ ಸಾಮಾಜಿಕವಾಗಿ ಆ ಸಾಮರ್ಥ್ಯದ ಬಳಕೆಗೆ ಕೆಲವು ತಾರತಮ್ಯಗಳನ್ನು ತುರುಕಲಾಗಿದೆ. ಹೆಣ್ಣುಮಕ್ಕಳು ಮನೆಯಲ್ಲಿ ಹೆಚ್ಚು ಮಾತನಾಡದಂತೆ ತಡೆಯಲಾಗುತ್ತದೆ. ಭಾಷೆ ಹಾಗೂ ಮಾತಿಗೆ ಸಂಬಂಧಿಸಿದಂತೆ ಎರಡು ನೆಲೆಗಳಿವೆ. ಒಂದು ಭಾಷಾ ಸಾಮರ್ಥ್ಯವನ್ನು ಪಡೆದುಕೊಳ್ಳುವುದು, ಮತ್ತೊಂದು ಭಾಷೆ ಎಂಬ ಸಾಮರ್ಥ್ಯವನ್ನು ಬಳಸುವುದು'[೧] ಇವೆರಡರ ನಡುವೆ ಒಂದು ಆಂತರಿಕ ಸಂಬಂಧವಿದೆ.

ಕೊರವಂಜಿ ಅನೌಪಚಾರಿಕ ಕಲಿಕಾ ಹಂತದಿಂದ ಬಂದವಳು ಹೀಗಾಗಿ ಪ್ರಮಾಣೀಕೃತ ಕಲಿಕಾ ಮಾದರಿಗಳು ಅಲ್ಲಿರುವುದಿಲ್ಲ. ಯಾಕೆಂದರೆ ಔಪಚಾರಿಕ ಕಲಿಕೆಯಲ್ಲಿ ನಿರ್ದಿಷ್ಟತೆಯಿರುತ್ತದೆ. ಕಲಿಕೆ ಹಾಗೂ ಭಾಷಾ ಬಳಕೆ ಪುರುಷಕೇಂದ್ರಿತವಾಗಿರುತ್ತದೆ. ಹೀಗಾಗಿ ಹೆಣ್ಣುಮಕ್ಕಳು ಕಲಿಯುವಾಗ ತಮ್ಮದಲ್ಲದ ಪುರುಷ ಕೇಂದ್ರೀತ ನೆಲೆಗಳಲ್ಲಿ ಕಲಿಯುತ್ತಿರುತ್ತಾರೆ. ಇದರಿಂದ ತಮಗೆ ಉಪಯುಕ್ತವಲ್ಲದ ಭಾಷಾ ಕಲಿಕಾ ಮಾದರಿಯನ್ನು ರೂಢಿಸಿಕೊಳ್ಳುತ್ತಾರೆ. ಹೀಗೆ ತಮಗೆ ಉಪಯುಕ್ತವಲ್ಲದ ಭಾಷೆ ಕಲಿತು ಯಾವುದನ್ನು ಅವರಿಗೆ ಬಳಸಲಾಗುವುದಿಲ್ಲವೋ ಅಂಥ ಭಾಷಾ ಪ್ರಭೇಧವನ್ನು ಅವರು ಪಡೆದುಕೊಳ್ಳುತ್ತಿರುತ್ತಾರೆ. ಉಪಯುಕ್ತವಲ್ಲದ ಕಲಿಕಾ ಮಾದರಿಗಳಿದ್ದಾಗ್ಯೂ ಅವರು ಗಂಡಿಗಿಂತ ಹೆಚ್ಚು ಭಾಷಾ ಸಾಮರ್ಥ್ಯ ಪಡೆದಿರುತ್ತಾರೆ. ಹೆಂಗಸರು ಸಂಸಾರಸ್ಥರಾದಂತೆ ಇಂಥ ಪಡೆದುಕೊಂಡ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಾ ಮೌನದೆಡೆಗೆ ಹೋಗುತ್ತಾರೆ. ತಮ್ಮ ಸಾಮಥ್ಯವನ್ನು ಸಾಮಾಜಿಕವಾಗಿ ಉಪಯುಕ್ತ ರೀತಿಯಲ್ಲಿ ಬಳಸುವಲ್ಲಿ ವಿಫಲರಾಗುತ್ತಾರೆ. ಮೌನಿಗಳಾಗುತ್ತಾ ಹೋಗುತ್ತಾರೆ. ಆದರೆ ಕೊರವಂಜಿಯಂಥ ಕಲಾವಿದೆಯರದ್ದು ಇದಕ್ಕಿಂತ ಭಿನ್ನಪ್ರಕೃತಿ.

ಕೊರವಂಜಿಯ ಮಾತಿನ ಪ್ರೌಢಿಮೆಯು ನಿರ್ದಿಷ್ಟ ಸಂದರ್ಭಬದ್ಧ ನಿಯಮಗಳಿಗೆ ಒಳಪಟ್ಟಿರುತ್ತದೆ. ಇಲ್ಲಿ ಕೇಳುವವರಿಗೂ ಹೇಳುವವರಿಗೂ ಒಂದು ಬಗೆಯ ಅಂತಃಸಂಬಂಧವಿರುತ್ತದೆ. ಆಚರಣೆಗಳಿರುತ್ತವೆ. ಯಾವಾಗ? ಏಕೆ? ಎಲ್ಲಿ? ಎಂದು ಸಾಮಾಜಿಕವಾಗಿ ನಿರ್ಧರಿತವಾಗಿರುತ್ತದೆ. ತಾನು ಸಾಮಾಜಿಕವಾಗಿ ಪಡೆದ ಭಾಷಾ ಸಾಮರ್ಥ್ಯವನ್ನು ಸಾಮಾಜಿಕ ನಿರೀಕ್ಷೆ ಮತ್ತು ನಿರ್ದೇಶನಕ್ಕೆ ತಕ್ಕಂತೆ ಬಳಸಬೇಕೆನ್ನುವ ಒತ್ತಡವಿರುತ್ತದೆ. ಬಳಕೆಗೆ ನಿಯಂತ್ರಣವಿದ್ದರೂ ಅದರ ಉಲ್ಲಂಘನೆ ಸಾಧ್ಯ ಎಂಬುದನ್ನು ಹಲವು ನಿದರ್ಶನಗಳು ತೋರಿಸಿಕೊಡುತ್ತವೆ.

ಹಂಚಿ ಬಟ್ಟ ಕುರು ಕುರು
ಹೂಂಸು ಬಿಡು ಪುರು ಪುರು

ಇಲ್ಲಿ ಹಂಚಿಬಟ್ಟು ಚುಚ್ಚುವ ಮಹಿಳೆ ಚುಚ್ಚಿಸಿಕೊಳ್ಳುವವರ ನೋವು ನಿವಾರಣೆಗಾಗಿ, ನಗುವ ಹಾಗೂ ಆ ಮೂಲಕ ನೋವು ಮರೆಯುವಂಥ ಹಾಡು ಹಾಡುವುದು ಕುತೂಹಲ ಹಾಗೂ ಅಭ್ಯಾಸಾರ್ಹವಾದುದು. ಇದೊಂದು ಮನಶ್ಯಾಸ್ತ್ರೀಯ ಅಧ್ಯಯನಕ್ಕೆ ವಸ್ತುವಾಗುತ್ತದೆ.

ಸಾಮಾಜಿಕ ಗ್ರಹಿಕೆಯ ಮಟ್ಟಿಗೆ ಭೌತಿಕವಾದ ಇಂಥದೊಂದು ನಿಯಂತ್ರಣ ಹೆಣ್ಣಿಗಿರಬಹುದು. ಆದರೆ ಮಾನಸಿಕವಾಗಿ ಬಿಡುಗಡೆ ಹೊಂದುವ ಅಥವಾ ಬಿಡುಗಡೆಗೆ ಹಂಬಲಿಸುವ ಪ್ರಯತ್ನವಾಗಿ ಇದು ಕಾಣುತ್ತದೆ. ಹೀಗಿದ್ದಾಗಲೂ ಮಾತಿನ ವಿಷಯ ಬಂದಾಗ ಹೆಣ್ಣು ಹೆಚ್ಚು ಮಾತನಾಡುತ್ತಾಳೆ, ವಾಚಾಳಿ, ತಲೆಹರಟೆ ಎಂದು ಹೇಳಲಾಗುತ್ತದೆ. ಇದು ವಿಚಿತ್ರ ಸಂಗತಿ. ನಿಯಂತ್ರಣವಿದ್ದರೂ ಸಾಮಾಜಿಕ ಗ್ರಹಿಕೆಯಲ್ಲಿ ಹೆಂಗಸು ಮತ್ತು ಮಾತಿಗೆ ನಿಕಟವಾದ ಸಂಬಂಧವನ್ನು ಹೆಣೆಯಲಾಗಿದೆ. ಹೆಚ್ಚು ಮಾತನಾಡುವವರು ಹೆಂಗಸರೆಂದೇ ನಂಬಿಸಲಾಗಿದೆ. ಆದರೆ ಇದು ವಾಸ್ತವವಲ್ಲ ಎಂಬುದನ್ನು ಹಲವು ಸಂಶೋಧನೆಗಳು ಸಾಬೀತು ಪಡಿಸಿವೆ.

ಹುಟ್ಟಿನಿಂದಲೇ ಹೆಣ್ಣಿಗೆ ದತ್ತವಾದ ಅಭಿವ್ಯಕ್ತಿಯ ಸಾಧ್ಯತೆಗಳನ್ನು ಇಲ್ಲದ ಹಾಗೆ ಮಾಡಿದ ಕ್ರೌರ್ಯದಿಂದ ಹೊರಬಂದು, ತನಗೆ ಬೇಕಾದ ಹಾಗೂ ಸರಿಯಾದ ದಾರಿಗಳನ್ನು ಹುಡುಕಿಕೊಂಡ ಕಥನವೇ ಕೊರವಂಜಿ. ಅದರ ಸಂಗಡವೇ ಅವಳು ಕಲೆಯ ಮೂಲಕ ಅಂತಹ ಮಾರ್ಗಗಳನ್ನು ಕಂಡುಕೊಂಡಾಗಲೂ ಸಮಾಜವು ಅವಳ ಅಭಿವ್ಯಕ್ತಿಯ ಸ್ವರೂಪವನ್ನು ಉಪೇಕ್ಷಿಸಿದ ಕಥನವೂ ಇದೆ. ಸ್ವತಃ ಸತ್ಯಭಾಮೆ ಕೊರವಂಜಿಯ ಕುಲಾಚಾರಗಳ ಬಗ್ಗೆ ಎತ್ತುವ ಪ್ರಶ್ನೆ ಇಂಥವೆ.

ನಮ್ಮ ಸಮಾಜ ಬೆಳವಣಿಗೆಯ ನಿರ್ದಿಷ್ಟ ಸನ್ನಿವೇಷದಲ್ಲಿ ಗೃಹಿಣಿಗಿಂತ ಅಲೆಮಾರಿ ಮಹಿಳೆಗೆ ಹೆಚ್ಚು ಸ್ವಾತಂತ್ರ್ಯ ಇದೆ ಎಂದು ಕಾಣುತ್ತದೆ. ಆಕೆ ಕೊರವಂಜಿ ಇರಬಹುದು. ಬುಡುಬುಡುಕೆಯವಳಿರಬಹುದು. ದೇವದಾಸಿಯೋ ಮತ್ತಾರೋ ಇರಬಹುದು. ಯಾರಿಗೆ ಗೃಹಸ್ಥ ಜೀವನದ ಬಂಧನಗಳಿಲ್ಲವೋ ಆ ಹೆಣ್ಣು ಮಕ್ಕಳು ಹೆಚ್ಚು ಸ್ವತಂತ್ರವಾಗಿರುತ್ತಾರೆಯೇ? ಎನ್ನುವ ಪ್ರಶ್ನೆಯೂ ಬಹುಮುಖ್ಯವಾದುದು. ಕುಟುಂಬಮುಕ್ತ ಸನ್ನಿವೇಷದಲ್ಲಿನ ಮಹಿಳೆಗೆ ಗೃಹಣಿಗಿಂತ, ಮದುವೆಯಾದ ಮಹಿಳೆಯರಿಗಿಂತ, ಅಭಿವ್ಯಕ್ತಿ ಸ್ವಾತಂತ್ರ್ಯ ಹೆಚ್ಚಿರುತ್ತದೆಯೇ? ಇಂಥ ಹೆಣ್ಣುಮಕ್ಕಳ ಅಭಿವ್ಯಕ್ತಿಯ ಸ್ವರೂಪ ಹೇಗಿರುತ್ತದೆ? ಇಂಥ ಅಭಿವ್ಯಕ್ತಿಯ ರೂಪಗಳು ನಮಗೆ ಯಾವ ಬಗೆಯ ಸತ್ಯಗಳನ್ನು ಬಿಡಿಸಿ ತೋರಿಸುತ್ತವೆ? ಎಂಬುದು ಜಿಜ್ಞಾಸೆಗೆ ಒಡ್ಡಬೇಕಾದ ಸಂಗತಿಯಾಗಿದೆ.

ಕೊರವಂಜಿಯನ್ನು ಹಾಗೂ ಆ ಪಾತ್ರ ಮಾಡುವವಳನ್ನು ಲೈಂಗಿಕ ಶುದ್ಧತೆ ಹಾಗೂ ನಿಷ್ಠೆಯ ನೆಲೆಯಲ್ಲಿಯೇ ಪಾರಿಜಾತದಂಥ ಪ್ರದರ್ಶನಗಳು ನೋಡುತ್ತವೆ. ಅದಕ್ಕೆ ಕೃಷ್ಣನ ಹಂಗನ್ನು ತೊಡಿಸುವ ಮೂಲಕ ಉದಾತ್ತೀಕರಿಸಲು ಪ್ರಯತ್ನಿಸಲಾಗಿದೆ. ತಲೆಯ ಪುಟ್ಟಿ, ಬಗಲ ಜೋಳಿಗೆ, ಕಂಕುಳ ಕೂಸು, ಕೈಯ್ಯ ಕಣಿ ಕೋಲುಗಳು ಕೊರವಂಜಿಯ ಸಾಮಾಜಿಕ ಚಿತ್ರಣವನ್ನು ಎತ್ತಿ ತೋರಿಸುತ್ತವೆ. 'ಕೇರಿ ಕೇರಿಯೊಳಾಡುತಾ ಪಾಡುತಾ ವೈಯ್ಯಾರದಿ ಮನೆ ಮನೆ ತಿರುಗುತಾ ನಾರಿಮಣಿಯರಿಗೆ ಶಕುನವಾ ಹೇಳುತಾ' ಎನ್ನುವುದರ ಜೊತೆಗೆ 'ಗಂಡನೆನಗಿಲ್ಲವೆ ಹೆಂಡಿರನಾಳುವೆ', 'ಗಾಡಿಗಾರ್ತಿ ಕೊರವಂಜಿ ನಾನು', 'ಸ್ಥಿರವಾಗಿ ಒಂದು ಕಡೆ ಇರುವವಳು ನಾನಲ್ಲ ಏಸು ದೇಶವನೆಲ್ಲ ತಿರುಗಿ ಬಂದೆ ನಾನು', 'ಗಂಡನಿಲ್ಲದ ಗಂಡುಮಗ ನನಗೆ' ಈ ಎಲ್ಲ ಸಾಂಪ್ರದಾಯಿಕ ಸಂಗತಿಗಳು, ಕೊರವಿಯ ಸಂದರ್ಭದಲ್ಲಿ ಪಲ್ಲಟಗೊಳ್ಳುವುದನ್ನು ಕಾಣುತ್ತೇವೆ. ಇಂಥ ಕಾರಣಗಳು ಅವಳನ್ನು ನಡತೆಹೀನಳು ಎಂದು ಕರೆಯಲು ಪ್ರೇರೇಪಿಸಿದಂತೆ ಅಂಥ ನಡೆಯೊಳಗಿಂದಲೇ ಹೊಸರೂಪ ಪಡೆಯುವ ಕೊರವಂಜಿ ಪರಂಪರೆಯ ಭಂಜನವು ನಡೆಯುತ್ತದೆ.

'ತಿರಿದುಂಬೋ ಕೊರವಿ ನಾನಲ್ಲ. ತಿಂಡಿಯಾಸೆಯೆನಗಿಲ್ಲ, ಒರಲೊರಲಿ ಓರ್ವಳನು ವಸ್ತ್ರ ಬೇಡುವಳಲ್ಲ, ಖರಿಯ ಬಂದರೆ ಮಾತು ಕರೆದುಕೊಡು ತೋರಿದ್ದು, ದೊರೆಸಾನಿ ಯಾತರಲಿ ಕೊರತೆಯೆನಗಿಲ್ಲ, ಬಣ್ಣನೆ ಮಾಡುವವಳಲ್ಲ ಬುಟ್ಟಿಯ ಮ್ಯಾಲಾಣೆ, ಏಕಚಿತ್ತದಿಂದ ಕೇಳೆ ಚಿಂತಿಸಿದ್ದೇಳುವೆನು' ಎನ್ನುವ ಮೂಲಕ ಸಾಂಪ್ರದಾಯಿಕ ಸಮಾಜ ಹೆಣ್ಣಿನ ಮೇಲ್ಹೇರಿದ ಎಲ್ಲ ಹಂಗನ್ನು ಹರಿದು ತನ್ನ ವ್ಯಕ್ತಿತ್ವ ಕಟ್ಟಿಕೊಳ್ಳುವ ಕೊರವಂಜಿಯಂಥ ಹೆಣ್ಣು ಹೆಣ್ಣಿನ ಸ್ವಾಬಿಮಾನದ ಪ್ರತೀಕವಾಗಿದ್ದಾಳೆ.

ಕೊರವಂಜಿ ಮುಖ್ಯವಾಗಿ ತನ್ನ ದುಡಿಮೆ, ಮಕ್ಕಳು ಮತ್ತು ಗಂಡನ ಸಂರಕ್ಷಣೆಗಾಗಿ ಊರಾಡುವುದು, ಕಣಿ ಹೇಳುವುದನ್ನು ಮಾಡುವ ಮೂಲಕ ದಿನ ದೂಡುತ್ತಾಳೆ. ವ್ಯಂಗವೆಂದರೆ ಸ್ತ್ರೀವಾದಿಗಳು ಯಾವ ಮೌಲ್ಯಗಳಿಗಾಗಿ ಚಳುವಳಿ ಮಾಡುತ್ತಿರುವರೋ ಯಾವುದನ್ನು ಪಡೆದುಕೊಳ್ಳಬೇಕಾದ ಸ್ವಾತಂತ್ರ್ಯವೆಂದು ಅವರು ಭಾವಿಸಿದ್ದಾರೋ ಅವು ದುಡಿಯುವ ವರ್ಗದ ಕೆಳಸ್ಥರದ ಕೊರವಂಜಿಯಂಥ ಮಹಿಳಾ ಲೋಕದಲ್ಲಿ ಸಹಜವಾಗಿರುವ ಬದುಕಿನ ನೆಲೆಗಳಾಗಿವೆ. ಸ್ತ್ರೀವಾದಿಗಳು ಎತ್ತುವ ಸಮಸ್ಯೆಗಳು ಕೊರವಂಜಿಯಂಥ ಅನೇಕ ಸಮುದಾಯಗಳ ಪಾಲಿಗೆ ನಿಜವಾದ ಸಮಸ್ಯೆಗಳಾಗಿರುವುದಿಲ್ಲ.

ಸಾಮಾಜಿಕವಾಗಿ ಕೆಳಸ್ಥರದ ನೆಲೆಗೆ ಸೇರಿದ್ದರೂ ಅವಳ ಕಣಿ ಹೇಳುವ ಕೌಶಲ್ಯ ಕಾರಣವಾಗಿ ಕೊರವಂಜಿಗೆ ದಕ್ಕುವ ಸ್ಥಾನಮಾನಗಳು ವಿಶೇಷವಾದದ್ದು. ಅದನ್ನು ಶ್ರೀಕೃಷ್ಣ ಪಾರಿಜಾತದ ಕಥೆ ಬಹಳ ಸ್ಪಷ್ಟವಾಗಿ ಕಟ್ಟಿಕೊಡುತ್ತದೆ. ಕೊರವಿಯಿಂದ ಕಣಿ ಕೇಳುವವರು ಅವಳನ್ನು ಗೌರವದಿಂದ ಮನೆಗೆ ಕರೆದು ಸಕಲ ಮರ್ಯಾದೆಗಳನ್ನು ನೀಡಿ ಉನ್ನತಸ್ಥಾನದಲ್ಲಿ ಕೂಡ್ರಿಸಿ, ತಾವು ನೆಲದಲ್ಲಿ ಕುಳಿತು (ಕೊರವಂಜಿ–ಸತ್ಯಭಾಮೆ) ತಮ್ಮ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವ ಬಗೆ, ಕೊರವಿಯನ್ನು ಭಿನ್ನ ಬಗೆಯಲ್ಲಿ ವ್ಯಾಖ್ಯಾನಿಸಲು ಪ್ರೇರೇಪಿಸುತ್ತದೆ.

ಬಿಡಿ ಮುತ್ತು ಮರದಲಿ ತರಿಸೆ ನೀ
ಪಡಸಾಲೆಯೊಳು ರಂಗಭರಿಸೆ – ಏಳು
ತಡವ್ಯಾಕೆ ದೀಪಗಳಿರಿಸೆ– ನೆನ
ಗಡಲಿ ಕಬ್ಬು ತೆಂಗು ಸುರಿಸೇ
ನಿನಗಾವ ಚಿಂತೆ ಬೇಡ
ನಿನ್ನ ಎಲ್ಲ ಕಷ್ಟಗಳ ದೂರಮಾಡುವೆ

ಎಂದಾಗ– ಸತ್ಯಭಾಮೆಯು

ಮುತ್ತಿನ ಪೀಠದೊಳೊತ್ತಿ ಕುಳಿತು– ಬಿಡಿ
ಮುತ್ತು ತುಂಬಿದಾ ಮರ ಕೊರವಿ ಮುಂದಿಟ್ಟು
ಭಕ್ತಿಯಲಿ ಚಿತ್ತ ಜಾಪಿತನ ಸಂಗವ ಹಾರೈಸು, ಮಂಗಳ
ವಾಕ್ಯವ ನೀಡೆಂದು ಕೊರವಿಗೆ ಹೆಂಗಳೆ ದೈನ್ಯವಾ
ಬಟ್ಟಳಾಗ ಮೊಗನೋಡಿ[೨]

ಆಗ ಕೊರವಂಜಿಯು

ಪುಲಿಚರ್ಮದಲಿ ಪದ್ಮಾಸನವನಿಕ್ಕಿ ಕೊರವಂಜಿ
ಬಲಗೈಲಿಂದ ಕಿನ್ನರಿ ಬಾರಿಸುತ್ತ
ಕಲಕಿ ಬಿಡಿಮುತ್ತುಗಳನು ಕೈವಿಡಿಯಲಿ ತೂರುತಾ
ಒಲವಿಂದ ಸ್ವರವೆತ್ತಿದಳು ಶಕ್ತಿಯರಾ[5]

ಎಂದು ಅಷ್ಟದಳ ವರ್ಣಪೀಠದಲ್ಲಿದ್ದ ಪ್ರಸನ್ನ ಮುಕ್ತಿ ಶಕ್ತಿಯರನ್ನು ತನ್ನ ವಚನದ ಸಾಕ್ಷಿಗಾಗಿ ಕರೆಯುತ್ತಾಳೆ. ಹೆಣ್ಣನ್ನು ಅಸ್ಪೃಶ್ಯವಾಗಿ ನೋಡುವ ಸಮುದಾಯದೊಳಗೆ ಹೆಣ್ಣು ತನ್ನ ಕೌಶಲ್ಯತೆಯಿಂದಾಗಿ ಪಡೆದುಕೊಳ್ಳುವ ಗೌರವಾಧರಗಳು ವಿಶಿಷ್ಟವಾದಂಥವು. ಎಂ.ಎಸ್. ಶ್ರೀನಿವಾಸ ಅವರು ಕೆಳ ಸಮುದಾಯಗಳು ಮದುವೆ ಲೈಂಗಿಕತೆ ಹಾಗೂ ಹೆಣ್ಣಿನ ವಿಚಾರದಲ್ಲಿ ಶ್ರೇಷ್ಠ ಎನಿಸಿಕೊಂಡಿರುವ ಬ್ರಾಹ್ಮಣ ಜಾತಿಗಳಿಗಿಂತ ಮಾನವೀಯವೂ, ಪ್ರಗತಿಪರವೂ ಆಗಿವೆ. ಆದರೆ ಅವು ಸಾಮಾಜಿಕ ಚಲನೆಯಲ್ಲಿ ಮೇಲಿನವರನ್ನು ಅನುಕರಿಸುತ್ತಾ ಸಂಸ್ಕೃತೀಕರಣಕ್ಕೆ ಒಳಗಾದಾಗಲೆಲ್ಲ ಹೆಣ್ಣಿನ ವಿಷಯದಲ್ಲಿ ಕ್ರೂರವಾಗಿವೆ ಎಂದು ಹೇಳುತ್ತಾರೆ. ಸಮಾಜವು ಹೆಚ್ಚು ನಾಗರೀಕಗೊಂಡಂತೆ ಹೆಣ್ಣಿನ ವಿಷಯದಲ್ಲಿ ನಿಕೃಷ್ಟಗೊಳ್ಳುತ್ತಿರುವುದು ಒಂದು ವ್ಯಂಗ್ಯವೂ ಆಗಿದೆ.

ಹೆಣ್ಣನ್ನು ನಿರ್ಬಂಧಿಸುವ ಪುರುಷ ಅಹಂಕಾರಗಳು ಸ್ತ್ರೀಪ್ರಧಾನ ಸಮಾಜ ವ್ಯವಸ್ಥೆಯ ಪತನದ ಜತೆಯಲ್ಲಿಯೇ ಹುಟ್ಟಿಕೊಂಡಂಥವು. ನಿಕೃಷ್ಟವಾದಿ ವೈದಿಕ ಚಿಂತನೆಗಳಿಗಿಂತ ಭಿನ್ನವಾದ ಸಾಂಸ್ಕೃತಿಕ ಧಾರೆಗಳ ಶಕ್ತಿಯನ್ನು, ಹೆಣ್ಣನ್ನು ನೋಡುವ ಅವುಗಳ ದೃಷ್ಟಿಕೋನಗಳಲ್ಲಿ ಗುರುತಿಸಬಹುದು.

ಕೊರವಂಜಿಯ ಅಸಾಂಪ್ರದಾಯಿಕ ನಡೆ ಸಾಂಸ್ಕೃತಿಕ ಸಮಸ್ಯೆಗಳ ಪರಿಹಾರವನ್ನು ಆರ್ಥಿಕ ಬದಲಾವಣೆಗಳ ಮೂಲಕ ಕಾಣುವಂಥದ್ದಾಗಿದೆ. ಅಂದರೆ ಹೆಣ್ಣು ಆರ್ಥಿಕವಾಗಿ ಪುರುಷನ ಮೇಲೆ ಅವಲಂಬಿತಳಾಗುವ ಸ್ಥಿತಿಯನ್ನು ತೊಡೆದು ಹಾಕಿ ಸಾರ್ವಜನಿಕ ಬದುಕಿನ ಉತ್ಪಾದನಾ ಕ್ಷೇತ್ರದಲ್ಲಿ ಸ್ವತಃ ಹೆಣ್ಣು ತೊಡಗಿಸಿಕೊಳ್ಳುವ ಮೂಲಕ ಹೆಣ್ಣು ಪಡೆದುಕೊಳ್ಳಬೇಕಾದ ಸಶಕ್ತೀಕರಣದ ನೆಲೆಗಳನ್ನು ಕೊರವಂಜಿ ಪ್ರತೀಕಿಸುತ್ತಾಳೆ. ಮಾತೃಪ್ರಧಾನ ಲಕ್ಷಣಗಳನ್ನು ಉಳಿಸಿಕೊಂಡ ಕೊರವಿಯಂಥ ಹಲವು ಬುಡಕಟ್ಟು ಸಮುದಾಯಗಳು ಇಂದೂ ಜೀವಂತವಾಗಿವೆ. ಹೆಣ್ಣು ಸ್ವತಃ ಉತ್ಪಾದನೆಯಲ್ಲಿ ತೊಡಗಿಸಿ ಕೊಳ್ಳುವುದಕ್ಕೂ ಲೈಂಗಿಕ ಸ್ವಾತಂತ್ರ್ಯ ಹಾಗೂ ಸಮಾನತೆಗಳನ್ನು ಪಡೆದುಕೊಳ್ಳುವುದಕ್ಕೂ ಸಂಬಂಧವಿದೆ. ದುಡಿಮೆ ಅವಳ ಕೀಳುತನವನ್ನು ಕಳೆದು ಹಾಕುತ್ತದೆ. ನಾಗರೀಕ ಅಥವಾ ಸಾಂಪ್ರದಾಯಿಕ ಬದುಕು ಕೊರವಿಯನ್ನು ನೋಡುವುದಕ್ಕೂ, ಕೊರವಿಯ ಅಸಾಂಪ್ರದಾಯಿಕ ಉತ್ಪಾದಕ ಹಾಗೂ ಉತ್ಪತ್ತಿಯ ನಡೆಗಳಿಗೂ ತುಂಬಾ ವ್ಯತ್ಯಾಸವಿರುವುದನ್ನು ಈ ಅಧ್ಯಾಯದಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ.

ಹಾಗೆ ನೋಡಿದರೆ ಕೊರವಂಜಿಯು ಇಂದಿನ ಸಂಗೋಪನಾ ಅರ್ಥಶಾಸ್ತ್ರದ ಪರಿಭಾಷೆಗೆ ಉತ್ತಮ ಉದಾಹರಣೆಯಾಗಿದ್ದಾಳೆ. ಮನೆವಾರ್ತೆ, ಲಾಲನೆ, ಪಾಲನೆ, ಶುಶ್ರುಷೆ, ನೆರೆಹೊರೆಯವರಿಗೆ ಸಹಾಯ, ಆರೈಕೆ, ಪರೋಪಕಾರ, ಮುಂತಾದ ಕ್ರಿಯಾಶೀಲ ಗುಣಗಳನ್ನು ದುಡಿಮೆ ಎಂದು

ಅರ್ಥಶಾಸ್ತ್ರ ಪರಿಭಾಷೆಯಲ್ಲಿ ನಿರ್ವಚಿಸಲಾಗುತ್ತಿದೆ. ಈ ಬಗೆಯ ದುಡಿಮೆಯನ್ನು ಸಂಗೋಪನಾ ಆರ್ಥಿಕತೆ ಎಂದು ಕರೆಯಲಾಗುತ್ತದೆ. ತನ್ನ ಕುಟುಂಬಕ್ಕಾಗಿ ಸಂಗೋಪನೆ ಹಾಗೂ ಸಂಪಾದನೆ ಮಾಡುವುದು ಕೊರವಂಜಿ ಬದುಕಿನ ಮುಖ್ಯ ನೆಲೆ. ಅದಕ್ಕಾಗಿ ಊರಾಡುವುದು, ಕಣಿ ಹೇಳುವುದು, ಕೂದಲ ತುಂಬುವುದು, ಗ್ರಾಮೀಣ ಮಹಿಳೆಯರಿಗೆ ಬೇಕಾದ ಅವಶ್ಯಕ ಸಾಮಗ್ರಿ ತಂದು ಮಾರುವಂಥ ಹಲವು ಬಗೆಯ ಉತ್ಪಾದಕ ಚಟುವಟಿಕೆಯಲ್ಲಿ ಭಾಗವಹಿಸುತ್ತಾಳೆ. ಸಂಪಾದನಾ ದುಡಿಮೆಗೆ ಸಾರ್ವತ್ರಿಕ ಗುಣವಿದ್ದರೆ, ಸಂಗೋಪನ ದುಡಿಮೆಗೆ ಖಾಸಗಿ ಗುಣ ಸ್ವರೂಪವಿದೆ. ಆದರೆ ಕೊರವಂಜಿಯಂಥವಳ ಬದುಕಿನ ಆರ್ಥಿಕತೆಯಲ್ಲಿ ಇವೆರಡರ ಅಂತರ ಬಹಳ ತೆಳುವಾದದ್ದು.

ಸಂಗೋಪನ ಗುಣವು ಒಂದು ಕುಟುಂಬ ಹಾಗೂ ಸಮಾಜವನ್ನು ಸಕ್ರಿಯಗೊಳಿಸಿ ಕಾಪಾಡುವಂಥದ್ದು. ಸಹನಶೀಲತೆಯನ್ನು ಕಲಿಸುವಂಥದ್ದು. ಅಂಥ ಸಹನಶೀಲತೆಯನ್ನು ಕಳೆದುಕೊಂಡಿರುವುದರಿಂದಲೆ ಇಂದಿನ ನಾಗರೀಕ ಸಮಾಜ ಹೆಚ್ಚು ಹಿಂಸಾತ್ಮಕವಾಗುತ್ತಿದೆ. ಅಸಹನೀಯತೆಯನ್ನು ಸ್ಫೋಟಿಸುತ್ತಿದೆ. ಕೊರವಂಜಿ ಅಂಥ ಸಹನಶೀಲ ಸಮಾಜದ ಪ್ರತಿನಿಧಿಯಾಗಿ ಕಾಣುತ್ತಾಳೆ. ಇಂಥ ಉತ್ಪಾದಕ ಗುಣವುಳ್ಳ ಕೊರವಂಜಿಯನ್ನು ಹೊರಗಿನ ಸಮಾಜದಂತೆ ಒಳಗಿನ ಸಮಾಜ ಹಾಗೂ ಕುಟುಂಬ ವ್ಯವಸ್ಥೆ ಪುರುಷಾಧೀನವಾಗಿಯೇ ಭಾವಿಸಿದೆ. ಆ ಮೂಲಕ ಅವಳ ಉತ್ಪಾದನಾ ನೆಲೆಗಳನ್ನು ಅಪಥ್ಯಗೊಳಿಸಲಾಗಿದೆ. ಹಾಗೂ ಸಂಕುಚಿತಗೊಳಿಸಲಾಗಿದೆ. ಮನೆಯ ಒಳಗೆ ಹಾಗೂ ಹೊರಗೆ ದುಡಿದರೂ ವೃತ್ತಿ ಸಂಬಂಧಿ ನೈಪುಣ್ಯತೆಯನ್ನು ಕೊರವಂಜಿ ಬಿಟ್ಟುಕೊಡುವುದಿಲ್ಲ. ವಿಚಿತ್ರವೆಂದರೆ ಇಂದಿನ ಉದ್ಯೋಗಸ್ಥ ಮಹಿಳೆ ಗೃಹಿಣಿ ಜವಾಬ್ದಾರಿಯನ್ನು ನಿರ್ವಹಿಸುವ ಸಲುವಾಗಿ ತಮ್ಮ ವೃತ್ತಿ ಸಂಬಂಧಿ ಔನ್ನತ್ಯಗಳನ್ನು ಬಿಟ್ಟು ಕೊಡುವುದನ್ನು ಕಾಣುತ್ತೇವೆ ಹಾಗೂ ನಿಭಾಯಿಸಲು ಹೆಣಗುವುದನ್ನು ನೋಡುತ್ತಿದ್ದೇವೆ. ಆದರೆ ಕೊರವಿ ಸಮಸ್ಯೆಯೊಳಗಿಂದಲೇ ಪೂರ್ಣತ್ವ ಪಡೆಯಲು ಪ್ರಯತ್ನಿಸುತ್ತಾಳೆ. ಎಲ್ಲ ಕೌಟುಂಬಿಕ ಜವಾಬ್ದಾರಿಯೊಂದಿಗೆ ಬದುಕಿಗಾಗಿ ನಡೆಸುವ ಅಲೆಮಾರಿತನ ಅವಳಲ್ಲಿ ಆತ್ಮವಿಶ್ವಾಸವನ್ನು ಹೆಚ್ಚಿಸಿ ಸ್ವಾವಲಂಬಿಯನ್ನಾಗಿಸುತ್ತದೆ. ಲಿಂಗ ಸಮಾನತೆ, ಲಿಂಗ ತಾರತಮ್ಯ ಹಾಗೂ ಜಾತಿ ಅಸಮಾನತೆಗಳು ಅವಳ ಅಧೀನ ಸ್ಥಿತಿಯನ್ನು ದೃಢಪಡಿಸುವ ಕೆಲಸ ಮಾಡುತ್ತಲೇ ಬಂದಿವೆ. ಅವಳ ಅಲೆಮಾರಿತನ, ಬಡತನ ಹಾಗೂ ಪರಕೀಯತೆಯನ್ನೇ ಸಾಮಾಜಿಕ ಮೌಲ್ಯವನ್ನಾಗಿಸಲಾಗಿದೆ.

ಹೀಗೆ ವಾಸ್ತವದ ಬದಲು ಭ್ರಮೆಗಳನ್ನು ಸತ್ಯದ ಬದಲು ಅಸತ್ಯವನ್ನು ಸೃಷ್ಟಿಸುವುದು ಫ್ಯಾಸಿಸ್ಟ್ ವ್ಯವಸ್ಥೆಯ ಪ್ರಮುಖ ಲಕ್ಷಣ. ವಾಸ್ತವವನ್ನು ತಿರುಚುವ ಅಥವಾ ವಾಸ್ತವದ ಬಗೆಗಿನ ಅರಿವನ್ನು ಮಂಕುಗೊಳಿಸಲು ಜನಪ್ರಿಯ ಕಲೆ ಹಾಗೂ ಸಾಹಿತ್ಯವನ್ನು ಅದು ಕರಾರುವಕ್ಕಾಗಿ ಬಳಸಿಕೊಳ್ಳುತ್ತದೆ.

ವಿಚಿತ್ರವೆಂದರೆ ಇಂಥ ವಾಸ್ತವವನ್ನು ಮೀರಿಸುವ ಅನುಭೂತಿ ಕಲೆಗಿರುತ್ತದೆ. ವಾಸ್ತವವನ್ನು ಮೀರುವುದೆಂದರೆ ದೈನಂದಿನ ಬದುಕಿನಲ್ಲಿಯ ಜಿಡ್ಡುಗಟ್ಟಿ ಹೋಗಿರುವ ಸಂವೇದನೆಗಳನ್ನು ತೀವ್ರಗೊಳಿಸಿಕೊಳ್ಳುವುದು. ಬದುಕನ್ನು ಹೊಸದಾಗಿ ನೋಡುವ ಸಾಮರ್ಥ್ಯವನ್ನು ಕೊಡುವ ಗಾರುಡಿತನವೇ ಹೊರತು ನೆಲದ ಬದುಕನ್ನು ಮರೆಯುವುದಲ್ಲ.

ನಮ್ಮ ಆಲೋಚನೆಯ ಮಾನದಂಡಗಳನ್ನು ಯಾವುದು ಸೃಜನಶೀಲತೆ, ಯಾವುದು ಕಲೆ, ಯಾವುದು ಮುಕ್ತತೆ, ಯಾವುದು ಅಶ್ಲೀಲ, ಯಾವುದು ಶೀಲ ಎನ್ನುವ ತೀರ್ಮಾನ ಮಾಡುವ ಹೊಣೆಗಾರಿಕೆಯನ್ನು ಈ ಶತಮಾನದ ಮೂರು ನಾಲ್ಕನೆಯ ದಶಕಗಳ ನಂತರ ಬ್ರಿಟಿಷರ ಜಡವಾದ ದೃಷ್ಟಿಕೋನದ ಫಲವಾಗಿ ಮಧ್ಯಮ ವರ್ಗ ಇದನ್ನು ವಹಿಸಿಕೊಂಡಿತು. ಮಧ್ಯಮ ವರ್ಗದ ಈ ನೀತಿ ಸಂಹಿತೆ ಮಧ್ಯಮ ವರ್ಗದ ಶೀಲ–ಅಶ್ಲೀಲತೆಗಳ ಪರಿಕಲ್ಪನೆ ಮಹಿಳೆಯರ ಹಾಗೂ ದಲಿತರ ಅಭಿವ್ಯಕ್ತಿಗೆ ಅಪಾರ ಕಡಿವಾಣ ಹಾಕಿತು.

ಸೃಜನಶೀಲತೆ ಎಂದರೆ ಕೇವಲ ಸಾಹಿತ್ಯ ರಚನೆ ಮಾತ್ರವಲ್ಲ, ಇತರ ಕಲೆ ಹಾಗೂ ಬದುಕಿಗೂ ಸಂಬಂಧಿಸಿದ್ದು ಕೊರವಂಜಿಯ ಸೃಜನಶೀಲತೆ ಮತ್ತು ಹೋರಾಟ ಪರಸ್ಪರ ಹೆಣೆದುಕೊಂಡು ಹೋಗುತ್ತದೆ. ಪರಸ್ಪರ ಒಂದರಿಂದ ಇನ್ನೊಂದು ಶಕ್ತಿ ಪಡೆದುಕೊಳ್ಳುತ್ತವೆ. ಪರಸ್ಪರ ಪೂರಕ ಸಂಬಂಧಗಳು ಆತ್ಮೀಯವಾದಂತೆ ಸೃಜನಶೀಲ ಬಿಕ್ಕಟ್ಟುಗಳು ಪರಿಹಾರವಾಗುತ್ತವೆ. ಆದರೆ ಅಕ್ಷರಸ್ಥ ಸಮುದಾಯದ ಕಲಾತ್ಮಕತೆಗೂ ಕಲೆಯ ಕಲ್ಪನೆಗೂ ಬಹಳ ವ್ಯತ್ಯಾಸವಿದೆ. ಭಾರತೀಯ ಸಮಾಜದಲ್ಲಿ ಅನಕ್ಷರಸ್ಥ ಸಮುದಾಯವೇ ಹೆಚ್ಚು ಕಲೆಯಲ್ಲಿ ತೊಡಗಿಕೊಂಡಿದೆ. ಇಂಥ ಬಹುಸಂಖ್ಯಾತ ಕಲಾತ್ಮಕ ಅಭಿವ್ಯಕ್ತಿ ಕ್ರಮಗಳನ್ನು ಮಧ್ಯಮ ವರ್ಗದ ಮಾನದಂಡಗಳಿಂದ ಅಳೆದು ಪಕ್ಕಕ್ಕೆ ತಳ್ಳಲಾಗಿದೆ. ಇದರಿಂದ ಮಹಿಳೆಯರ ಕಲಾತ್ಮಕ ಅಭಿವ್ಯಕ್ತಿ ಹಾಗೂ ಸೃಜನಶೀಲ ನೆಲೆಯ ಮೇಲೆ ಪರಿಣಾಮವಾಯಿತು.

ವಿಚಾರಧಾರೆ ಹಾಗೂ ಕಲಾತ್ಮಕತೆಗಳ ಮೇಲೆ ಎಳೆದ ಸೀಮಾರೇಖೆಯಿಂದಾಗಿ ಮಹಿಳೆಯ ಸೃಜನಶೀಲತೆಗೆ ಕಡಿವಾಣಹಾಕಲಾಯಿತು. ಮಹಿಳಾ ಸೃಜನಶೀಲತೆಯಲ್ಲಿ ವಿಚಾರಕ್ಕೆ ಹೆಚ್ಚು ಒತ್ತು ಇರುವುದಿಲ್ಲ ಎನ್ನುವ ಸಂಗತಿಗಳು ಕೊರವಂಜಿಯಂಥ ಸೃಜನಶೀಲ ಹಾಗೂ ಆಶು ನೆಲೆಗಳನ್ನು ಹತ್ತಿಕ್ಕಲ್ಪಟ್ಟವು. ಆದರೂ ಕೊರವಂಜಿ ಸಾಂಪ್ರದಾಯಿಕವಾದಂಥ ಇಂಥ ಅಡೆತಡೆಗಳನ್ನು ತನ್ನ ಸೃಜನಶೀಲ ಸ್ವಾತಂತ್ರ್ಯದಿಂದಲೇ ನೀಗಿಕೊಂಡು ಸಶಕ್ತವಾದ ರೀತಿ ವಿಸ್ಮಯ ತರುವಂಥದ್ದು. ಕಲೆ ಹಾಗೂ ಕಲಾವಿದರ ಪರಿವಾರ ಮಧ್ಯಮವರ್ಗದ ನೈತಿಕತೆಯಿಂದ ಬದ್ಧವಾಗಿರೋದಿಲ್ಲ. ಅದರ ಸಾಧ್ಯತೆಗಳು ಹಾಗೂ ಸೃಜನಶೀಲ ನೆಲೆಗಳು ಹೆಚ್ಚು ಮುಕ್ತವಾಗಿರುತ್ತವೆ. ಈ ಮುಕ್ತತೆಯೇ ಅವರಿಗೆ ಒಂದು ಸಾರ್ವಜನಿಕ ಮಾನ್ಯತೆಯನ್ನೂ ತಂದುಕೊಡುತ್ತದೆ. ಮುಕ್ತತೆ ಎಂದರೆ ಇಲ್ಲಿ ಕೇವಲ ಸ್ವೇಚ್ಛೆಯಲ್ಲ. ಅಂತಃಸತ್ವವನ್ನು ತಾನೇ ಜಾಗೃತಿಗೊಳಿಸಿಕೊಂಡು ಅನನ್ಯವಾಗುವುದು. ಕೊರವಂಜಿಯು ಸಂಪ್ರದಾಯ ಹಾಗೂ ಅಸಂಪ್ರದಾಯಗಳ ನಡುವೆ ಇಂಥ ಅಗಾಧ ಅನನ್ಯತೆಯನ್ನು ಸಾಧಿಸಿದ್ದು ಗಮನಾರ್ಹ. ಮಹಿಳೆಯ ಅದಮ್ಯ ಅಭಿವ್ಯಕ್ತಿ ಹಾಗೂ ಇಚ್ಛಾಶಕ್ತಿಗೆ ಅವಳೊಂದು ಸಜೀವ ಉದಾಹರಣೆ. ಗಂಡಸು ಕೊಡುವ, ನೀಡುವ, ಸ್ವಾತಂತ್ರ್ಯದ ಪರಿಕಲ್ಪನೆಗಳಿಗಿಂತ ಭಿನ್ನವಾಗಿ ಅದನ್ನು ತನ್ನೊಳಗಿಂದಲೇ ಕಂಡುಕೊಳ್ಳುವ ತನ್ನನ್ನು ಅಂತಹ ಧಾರಾಣಾಶಕ್ತಿಗೆ ಜಾಗೃತಗೊಳಿಸಿಕೊಳ್ಳುವ ಕೊರವಿಯ ನೆಲೆ ಹೊಸ ರೀತಿಯದ್ದಾಗಿದೆ.

**ಕೊನೆಟಿಪ್ಪಣಿ**

೧. ಕೆ.ವಿ. ನಾರಾಯಣ ಪುಟ.೨೪: ಹೆಣ್ಣು ಮತ್ತು ಭಾಷೆ, ೨೦೦೭; ಕ.ವಿ.ವಿ. ಹಂಪಿ

೨. ಡಾ. ಕೃಷ್ಣ ಕಟ್ಟಿ, ಶ್ರೀಕೃಷ್ಣಪಾರಿಜಾತ, ಪು.೧೧೮, ೧೧೯, ೧೯೯೭

೩. ಡಾ. ಕೃಷ್ಣ ಕಟ್ಟಿ, ಶ್ರೀಕೃಷ್ಣಪಾರಿಜಾತ, ಪು.೧೧೯, ೧೯೯೭

***

ಕೊರವಂಜಿ ಕಥನವು ಪುರುಷ ಸಮುದಾಯ ಹಾಗೂ ಮತ್ತು ಸ್ತ್ರೀ ಸಮುದಾಯದ ನಡುವೆ ನಡೆಯುವ ಕೊಳು–ಕೊಡೆ ಆಗಿರದೆ, ಪ್ರಚಲಿತ ಪುರುಷಪ್ರಧಾನ ನಿಯಮಗಳನ್ನು ಬಿಟ್ಟು ಸ್ತ್ರೀ ಸಮುದಾಯದ ಒಳಗಡೆಯೇ ನಡಿತಾ ಇರಬಹುದಾದ ಕೊಳು–ಕೊಡುವ ಸಾಧ್ಯತೆ ಯಾಗಿರುವುದರಿಂದ ಇದರ ಅನನ್ಯತೆ ಬೇರೆ ತರದ್ದೇ ಆಗಿದೆ ಎಂದು ಹೇಳಬಹುದು.

ಶತಮಾನಗಳಿಂದ ಸತ್ತು ಹೋಗಿರುವ, ಸತ್ತಂತೆ ಬದುಕಿರುವ ಕೆಳವರ್ಗದ ಮಹಿಳಾ ಸಂವೇದನೆಗಳು ಸಾಹಿತ್ಯ ಹಾಗೂ ಸಾಂಸ್ಕೃತಿಕ ಬೀಸುಗಳಲ್ಲಿ ಬಾಯಿತೆರೆದಾಗ ಮಾಡುವ ಪರಿಣಾಮ ಅಗಾದವಾದದ್ದು. ಇದರಿಂದ ಹಲವು ಹೊಸ ತಿಳುವಳಿಕೆಗಳು ಈ ಲೋಕಕ್ಕೆ ಹರಿದು ಬರುತ್ತವೆ. ಲೋಕದಿಂದ ವ್ಯವಸ್ಥಿತವಾಗಿ ವ್ಯರ್ಜ್ಯಗೊಂಡ ಸಂವೇದನೆಗಳು ಹುರಿಗಟ್ಟಿ ಒಡಮುರಿದೆದ್ದಾಗ ಪ್ಯಾಸಿಸ್ಟ್ ಮನೋಧರ್ಮಗಳು ಇಂಥ ಸಶಕ್ತ ನೆಲೆಗಳನ್ನು ಹತ್ತಿಕ್ಕುವುದೇ ಹೆಚ್ಚು.

ಉತ್ಪಾದನೆ, ಮನೆವಾರ್ತೆ, ಸಂತಾನೋತ್ಪತ್ತಿ, ಶಕುನದಂತಹ ಒಳಹೊರಗಿನ ದುಡಿಮೆಗಳನ್ನು ನಿರ್ವಹಿಸುವ ಕೊರವಂಜಿ ಹೆಣ್ಣಿನ ಸ್ವತಂತ್ರ ಮನೋಧರ್ಮದ ಪ್ರತೀಕವಾಗಿದ್ದಾಳೆ. ಆದರೆ ಮಹಿಳೆಗೆ ವಿದ್ಯೆ ಹಾಗೂ ವ್ಯವಹಾರ ಜ್ಞಾನ ದಕ್ಕುವುದಿಲ್ಲ ಎನ್ನುವ ಮೂಲಕ ಇಂತಹ ಮಹಿಳೆಯ ದುಡಿಮೆಯನ್ನು ಹಾಗೂ ವ್ಯಕ್ತಿತ್ವವನ್ನು ಅಪಮೌಲ್ಯಗೊಳಿಸಲಾಗಿದೆ.

ಕೊರವಂಜಿಯದು ಕರ್ತೃತ್ವವಾದಿ ದೃಷ್ಟಿಕೋನ (agency approach). ಹೀಗಾಗಿ ಹೆಣ್ಣಿನ ಬದುಕು ಹಾಗೂ ದುಡಿಮೆ ಅರ್ಥವಿಲ್ಲದ್ದು ಎನ್ನುವ ಲಿಂಗತಾರತಮ್ಯವಾದಿ ಮನೋಧರ್ಮವನ್ನು ತನ್ನ ಕಲಾ ಕೃತಿಗಳ ಮೂಲಕ ಕೊರವಂಜಿ ನಿರಾಕರಿಸುತ್ತಾಳೆ. ಅರಿವು ಹಾಗೂ ಜಾಗೃತಿ ಗುಣವನ್ನು ಮಹಿಳೆಯರು ಬೆಳೆಸಿಕೊಂಡರೆ ಅದು ಮಹಿಳೆಯರಿಗೆ ಪೂರಕವಾದ ಸಾಮಾಜಿಕ ಪರಿವರ್ತನೆಯನ್ನು ಮತ್ತು ಲಿಂಗಸಂಬಂಧಿ ಅಭಿವೃದ್ಧಿಯನ್ನು ಸಾಧಿಸಬಹುದೆನ್ನುವುದನ್ನು ಕೊರವಿಯಿಂದ ಕಲಿಯಬಹುದಾಗಿದೆ.

ಆತ್ಮವಿಶ್ವಾಸ ಯಾವತ್ತೂ ನಕಾರಾತ್ಮಕ ಹಾಗೂ ಅಸಹಾಯಕವಾದಿ ದೃಷ್ಟಿಕೋನವನ್ನು ಹೊಡೆದೋಡಿಸುತ್ತದೆ ಮತ್ತು ಮನುಷ್ಯನನ್ನು ಸಮಾಜಮುಖಿಯಾಗಿಸುತ್ತದೆ. ಕೊರವಂಜಿ ಇಂಥ

ಆತ್ಮವಿಶ್ವಾಸ ಹಾಗೂ ಸಮಾಜಮುಖಿ ಚಿಂತನೆಯ ಗುರುತಾಗಿ ಕಾಣುತ್ತಾಳೆ. ಪ್ರಚಲಿತ ನಾಗರಿಕ ಚಿಂತನಾ ಗುರುತುಗಳಿಗಿಂತ ಈ ಕಾರಣಕ್ಕಾಗಿ ಕೊರವಂಜಿ ಭಿನ್ನವಾಗಿ ಉಳಿಯುತ್ತಾಳೆ.

ಒಂದು ಸಮಾಜದಲ್ಲಿ ಅಭಿವ್ಯಕ್ತಿಯ ಅವಕಾಶವು ಶಿಕ್ಷಣವನ್ನು ಅವಲಂಬಿಸಿದಾಗ, ಜ್ಞಾನ ವಲಯಗಳನ್ನು ಅವಲಂಬಿಸಿದಾಗ, ಸ್ಥಾನಮಾನಗಳನ್ನು ಅವಲಂಬಿಸಿದಾಗ, ಹೊಟ್ಟೆಪಾಡಿನ ಪ್ರಶ್ನೆಯನ್ನು ಅವಲಂಬಿಸಿದಾಗ, ಭಿನ್ನವಾಗಿರುತ್ತದೆ. ಹಾಗೆ ಇರಬೇಕು ಕೂಡ. ಕೊರವಂಜಿ ವಿಷಯದಲ್ಲಿ ಭಾಷೆ ಅಭಿವ್ಯಕ್ತಿಯ ಮಾಧ್ಯಮವೂ ಆದಂತೆ ಬಿಡುಗಡೆಯ ಮಾಧ್ಯಮವೂ ಹೌದು. ಕಣಿ ಹೇಳುವ ಅವರ ದಾಟಿಯೇ ಅವಳ ಎಲ್ಲ ಪೂರ್ವಾಶ್ರಮ ಹಾಗೂ ಸಾಮಾಜಿಕ ತಡೆಗಳಿಂದ ಅವಳನ್ನು ವಿಮೋಚನೆಗೊಳಿಸುತ್ತದೆ, ಸಾರ್ವತ್ರಿಕಗೊಳಿಸುತ್ತದೆ.

ಕೊರವಿ ಬಳಸುವ ಮಾತಿನ ರೀತಿಯಲ್ಲಿ ಎರಡು ನೆಲೆಗಳನ್ನು ಗುರುತಿಸಬಹುದು. ಒಂದು ಅಭಿವ್ಯಕ್ತಿ ನೆಲೆ ಮತ್ತೊಂದು ಸಂವಹನದ ನೆಲೆ. ಕೊರವಿಯದು ಸಾಹಿತ್ಯಕ ಭಾಷೆಯಲ್ಲ, ಸಾಮಾಜಿಕ ಭಾಷೆ ಎನ್ನುವುದು ಗಮನಾರ್ಹ. ಸಾಮಾಜಿಕ ಮೌಲ್ಯಗಳಿಗೂ ಭಾಷಿಕ ಮೌಲ್ಯಗಳಿಗೂ ನಿಕಟ ಸಂಬಂಧಗಳಿರುತ್ತವೆ. ಭಾಷೆ ಸಾಮಾಜಿಕವಾದಷ್ಟು ತಾಳಿಕೆ ಗುಣವನ್ನು, ಕೇಳಿಸಿಕೊಳ್ಳುವ ಕಲೆಯನ್ನು, ಒಪ್ಪಿಸುವ ಮನಸ್ಸನ್ನು ಪಡೆದುಕೊಳ್ಳುತ್ತದೆ. ಹೆಣ್ಣು ಆಲೋಚನೆ ಅಥವಾ ಅಭಿವ್ಯಕ್ತಿ ಕ್ರಮ ಎನ್ನುವುದು ಒಳಗೊಳ್ಳುವ ಹಾಗೂ ಉತ್ತರಿಸುವ ರೂಪದ್ದು. ಕಾಂತಾಸಮ್ಮಿತವಾದದ್ದು. ತನ್ನ ಮಾತನ್ನು ಹೇಳುವುದು ಅದನ್ನು ಕೇಳುಗರು ಒಪ್ಪುವಂತೆ ಹಾಗೂ ಅನುಮೋದಿಸುವಂತೆ ಮಾಡುವುದು ಹೆಣ್ಣಿನ ಭಾಷೆಯ ಒಂದು ಮುಖ್ಯ ಲಕ್ಷಣ ಎಂದು ಭಾಷಾಶಾಸ್ತ್ರಜ್ಞರು ಗುರುತಿಸುತ್ತಾರೆ.

ಕೊರವಂಜಿಯ ಭಾಷೆ Parataxis ಮಾದರಿಯದ್ದು, ಅಂದರೆ ಅನೇಕ ಸರಳ ವಾಕ್ಯಗಳು ಒಂದರ ನಂತರ ಒಂದರಂತೆ ಬಳ್ಳಿಯಂತೆ ಅಡರುತ್ತಾ ಅಥವಾ ಒಂದು ಇನ್ನೊಂದಕ್ಕೆ ಅಂಟಿಕೊಂಡು ಬರುವ ಸರಪಳಿ ಶೈಲಿಯದು. ಹೆಂಗಸರು ಮಾಡುವ ವಾಕ್ಯರಚನೆ ಈ ಸ್ವರೂಪದ್ದು. ಇದು ಸಂವಹನ ದೃಷ್ಟಿಯಿಂದ ಸುಲಭದ್ದು. ಕಲೆಯ ನಿರ್ಮಿತಿಗಾಗಿ ಹೆಣ್ಣು ಬಳಸುವ ಕನ್ನಡ ಭಾಷೆಯ ನಿರ್ಮಿತಿಗೂ ಅದೇ ಕೆಲಸಕ್ಕೆ ಗಂಡು ಬಳಸುವ ಬಗೆಗಳಿಗೂ ವ್ಯತ್ಯಾಸಗಳಿವೆ. ಲಿಂಗ ವಿಶಿಷ್ಟವಾದ ಭಾಷಿಕ ರಚನೆಯನ್ನು ಕೊರವಂಜಿ ಭಾಷೆಯಲ್ಲಿ ಕಾಣಬಹುದು. ಪುರುಷ ನಿರ್ಮಿತವಾದ ಒತ್ತಾಯಗಳನ್ನು ಅದು ಮೀರುತ್ತದೆ.

ಯಾಕೆಂದರೆ ಪುರುಷ ಅಥವಾ ಪಂಡಿತ ಅಹಂಕಾರಗಳು ಭಾಷೆಗಿರುವ ದ್ರವಗುಣ (Fluidity)ವನ್ನು ಒಪ್ಪುವುದಿಲ್ಲ. ಅವರ ಪ್ರಕಾರ ಮಾತಿಗೆ ಖಚಿತವಾದ ಅರ್ಥವಿರಬೇಕು. ಈ ಮಾತಿಗೆ ಇಷ್ಟೇ, ಇದೇ, ಅರ್ಥ ಇರಬೇಕು ಬೇರೊಂದು ಅರ್ಥ ಸಾಧ್ಯವಿಲ್ಲ ಎಂಬ ಹಠಮಾರಿತನವನ್ನು ಹುಟ್ಟುಹಾಕುತ್ತದೆ. ಆದರೆ ಭಾಷೆಗಿರುವ ದ್ರವಗುಣ ಇಂಥ ನಿಯಂತ್ರಣಗಳನ್ನು ನಿರಾಕರಿಸಿ ಹೊಸ ಅರ್ಥವಿಸ್ತಾರಗಳನ್ನು ತನ್ನೊಳಗು ಮಾಡಿಕೊಳ್ಳಲು ಪ್ರಯತ್ನಿಸುತ್ತದೆ. ಕೇಳುವವರ ಮನಸ್ಸಿನಲ್ಲಿ ಹೊಸ ಹುಟ್ಟು ಮತ್ತು ಆಕಾರ ಪಡೆಯುತ್ತದೆ. ಅಲ್ಲಮನಂಥವರು 'ಶಬ್ದದ ಲಜ್ಜೆನೋಡಾ' 'ಪದವನರ್ಪಿಸಬಹುದಲ್ಲದೆ ಪದಾರ್ಥವನರ್ಪಿಸಲಾಗದು' ಎಂದು ಶಬ್ಧ ಹಾಗೂ ಅರ್ಥದ ಬಹುಸಾಧ್ಯತೆಗೆ ಬೆರಗಾಗಿದ್ದರು.

ಭಾಷೆಗಿರುವ ಈ ಬಹುವ್ಯುತ್ಪತ್ತಿ ಗುಣ ಸೃಜನಶೀಲತೆಯ ಸತ್ಯದರ್ಶನವನ್ನು ಮಾಡುವ ಬಗೆಯು ಏಣತರ್ಕದ ಹಾಗೂ ನಿಯಂತ್ರಣಗಳ ನಿರಾಕರಣೆಯಿಂದಲೇ ಮೊದಲಾಗುವಂತೆ ಮಾಡುತ್ತದೆ. ಇಂಥ ಭಾಷೆಗಿರುವ ದ್ರವಗುಣ ಹೆಣ್ಣಿನ ಅಭಿವ್ಯಕ್ತಿ ಲಕ್ಷಣಗಳಲ್ಲೊಂದು. ಒಳಗೊಳ್ಳುವ ಹೆಣ್ಣಿನ ಭಾಷಾ ವೈಶಿಷ್ಟ್ಯಗಳಲ್ಲೊಂದು ಎಂದು ಸ್ತ್ರೀವಾದಿ ಚಿಂತಕಿಯರು ಅಭಿಪ್ರಾಯ ಪಡುತ್ತಾರೆ. ಒಂದು ಇನ್ನೊಂದು ಹಾಗೂ ಎಲ್ಲವೂ ಆಗುವ ಗುಣವನ್ನು ಪ್ರಕಾರ ಸಂಕರ ಎಂದು ಕರೆಯಲಾಗುತ್ತದೆ. ಇಂಥ ಪ್ರಕಾರ ಸಂಕರವು ಹೆಣ್ಣಿನ ಅಭಿವ್ಯಕ್ತಿಕ್ರಮದ ಬಹುಮುಖ್ಯ ಲಕ್ಷಣ. ಇದು ಹೆಣ್ಣಿನ ಅಭಿವ್ಯಕ್ತಿಯ ಬಹುಮುಖಿಯಾದ ಶೈಲಿಯನ್ನು ರೂಪಿಸಿಕೊಡುತ್ತದೆ. ಸಂಘಟಿತವಾದ ಅಭಿವ್ಯಕ್ತಿ ಕ್ರಮಗಳ ತರ್ಕವನ್ನು ಮೀರುತ್ತದೆ. ಕೊರವಂಜಿ, ಜೋಗಮ್ಮ, ಗಂಗಿಗೌರಿ ಇತ್ಯಾದಿ ಅಲೆಮಾರಿ ಸಮುದಾಯದ ಹೆಣ್ಣುಮಕ್ಕಳ ಹಾಡು, ಕಥೆ, ಮಾತುಗಳಲ್ಲಿ ಮೌನಗೊಳಿಸಿದ ಜಗತ್ತೊಂದು ಮಿಡಿಯುತ್ತದೆ, ನುಡಿಯುತ್ತದೆ. ಅವರ ಬದುಕೇ ಒಂದು ಸೋಶಿಯಾಲಾಜಿಕಲ್ ಸ್ಟಡಿ ಆಗಿರುತ್ತದೆ. ಇಂಥ ಹಾಡು ಕಥನ ಹಾಗೂ ಮಾತುಗಾರಿಕೆಯ ಅಭ್ಯಾಸವು ದಮನಿಸಲ್ಪಟ್ಟ ಮಹಿಳೆಯರನ್ನು ಅರ್ಥಮಾಡಿಕೊಳ್ಳಲು ಹೊಸದಾರಿ ತೆರೆಯುತ್ತವೆ.

ಕೊರವಿಯ ಸಂಕಥನ ವಿಶಿಷ್ಟವಾಗುವುದು ಕಣಿ ಕೇಳುವ ಹಾಗೂ ಶಕುನ ಹೇಳುವ ರೀತಿ ಜನ ಕೇಳಿಸಿಕೊಳ್ಳುವ ಬಗ್ಗೆ ಹಾಗೂ ಅದನ್ನು ಮನಸಾರೆ ಒಪ್ಪಿಕೊಳ್ಳುವ ನೆಲೆಗಳಿಂದಾಗಿ. ಓದಿದವರೂ ಪಂಡಿತರೂ, ಮಾತ್ರ ಹೆಳುವ, ಕೇಳುವ ಗುಣವನ್ನು ಪಡೆದವರು ಎನ್ನುವ ಪ್ರಚಲಿತವಾದಗಳನ್ನು ಕೊರವಿ ಕಥನ ಬುಡಮೇಲು ಮಾಡುತ್ತದೆ. ಓದು-ಬರಹ, ಸಂವಹನದ ಚರ್ಚೆ ಕನ್ನಡ ಸಾಹಿತ್ಯ ಸಂಸ್ಕೃತಿಯಲ್ಲಿ ಸಮೃದ್ಧವಾಗಿ ನಡೆದಿದೆ. ಶಿಷ್ಟ ಸಂವಹನ ದಾರಿಗಳನ್ನು ಮೀರಿ ಕನ್ನಡ ಸಾಹಿತ್ಯ ಸಂಸ್ಕೃತಿ ತನ್ನದೆ ಆದ ಪೂರ್ಣ ಸಂವಹನದ ಮಾದರಿಗಳನ್ನು ಉಳಿಸಿಕೊಂಡು ಬಂದಿದೆ. ಪಾಮರರೆಂದು ಕರೆಯುವ ಕನ್ನಡ ಜಗತ್ತು ಎಷ್ಟೋ ಸಾಹಿತ್ಯಕ ಆಕೃತಿಗಳನ್ನು ಇಂದಿಗೂ ತನ್ನ ಮೌಖಿಕತೆಯಿಂದಾಗಿ ಜೀವಂತವಾಗಿಟ್ಟಿವೆ. ಹೀಗಾಗಿ ಇಂಥ ಅನುನಯದ ಸಂವಹನ ಸಶಕ್ತನೆಲೆಗಳನ್ನು ನಾವು ಕೊರವಿ ಕಥನಗಳಲ್ಲಿ ಕಾಣುವುದು ವಿಶೇಷವಾಗಿದೆ.

ಕಾವ್ಯಮೀಮಾಂಸಕರು ಕಾವ್ಯ ಕುರಿತು ಹೇಳುವಾಗ 'ಕಾಂತಾಸಮ್ಮಿತತೆ' ಎನ್ನುವ ಮಾತು ಬಳಸುತ್ತಾರೆ. ೧ನೇ ನಾಗವರ್ಮ ಹಾಗೂ ಮುದ್ದಣನಂತವರು ತಮ್ಮ ಕಾವ್ಯವನ್ನು ಕೇಳುಗರ ಪ್ರತಿನಿಧಿಯಾದ ತಮ್ಮ ಹೆಂಡಂದಿರಿಗೆ ಹೇಳುವ ಬಗೆಗಳು ಇಂಥ ಕಾವ್ಯ ಸಂವಹನದ ಸಖೀಗುಣದ ನಿದರ್ಶನವಾಗಿವೆ. ಹೆಳುವುದು ಎಷ್ಟು ಮುಖ್ಯವೋ ಕೇಳುವುದು ಅಷ್ಟೆ ಮಹತ್ವದ್ದು. ಹೇಳುವ ಹಾಗೂ ಕೇಳುವ ಸಂಗತಿಗಳು ಸಾಮರಸ್ಯದಿಂದ ಕೂಡಿರದಿದ್ದರೆ ಅದಕ್ಕೆ ಯಾವ ಅರ್ಥಗಳು ಇರುವುದಿಲ್ಲ. ಅದು ಹೆಣ್ಣು ಹೆಣ್ಣಿನೊಂದಿಗೆ ತನ್ನ ಒಡಲನ್ನು ಬಿಚ್ಚಿ ಮಾತಾಡಿಕೊಳ್ಳುವ ನೆಲೆಗಳು ಸಂಭಾಷಣೆ ಹಾಗೂ ಸಂವಹನದ ಭೌತಿಕ ದರ್ಶನಗಳನ್ನು ದಾಟಿ ನಿಲ್ಲುವಂಥವು.

ಕೊರವಂಜಿಯ ಕಥನ ಕನ್ನಡ ಸಾಹಿತ್ಯ ಸಂಸ್ಕೃತಿಗಳಲ್ಲಿ ಮುಖ್ಯವಾಗಿ ಎರಡು ರೀತಿಯಲ್ಲಿ ಕಾಣುತ್ತದೆ. ಒಂದು ನೊಂದವರಿಗೆ ಕಣಿ ಹೇಳುವುದು, ಮತ್ತೊಂದು ಅಗಲಿದ ಅಥವಾ ಪ್ರೀತಿಸುವ ಗಂಡು-ಹೆಣ್ಣುಗಳ ಮನಸ್ಸನ್ನು ಒಂದು ಮಾಡುವುದು. ಇದು ಬಹಳ ಜವಾಬ್ದಾರಿ ಕೆಲಸ.

'ವಾರಿಜಾಕ್ಷಿಯ ಮನೋವಿಚಾರ ಮಾಡುವೆನೆಂದು ನಾರಾಯಣೀಯೆಂಬ ಕೊರವಿ ರೂಪದಾ' ಎನ್ನುವಲ್ಲಿ ಸತ್ಯಭಾಮೆಯ ಮನದ ಸಂಕಟಗಳನ್ನರಿಯಲು ಕೃಷ್ಣ ಕೊರವಿ ರೂಪತಾಳುವ ಸನ್ನಿವೇಶವಿದೆ.

ಛಪ್ಪನ್ನ ದೇಶವನು ತಪ್ಪದಲೆ ತಿರುಗುವೆ
ಕಪ್ಪಗೊರಳನರ್ಧಾಂಗಿನಿ, ಕೃಷ್ಣಪಿಂಗಳೇ
ಒಪ್ಪಿಕೊಳ್ಳೆ ಎನ್ನ ಮಾತಾ ಕಪ್ಪಾನಿಟ್ಟ ಜಗಕೆಲ್ಲ
ಉಪಕಾರ ಮಾಡಿ ತೋರುವೆಯೇ ತಪಸ್ವಿನಿ[೧]

ತನ್ನ ಮಾತನ್ನು ಒಪ್ಪಿಕೊಳ್ಳುವಂತೆ ಮನವೊಲಿಸುವ ಹಾಗೂ ಅವರಿಂದ ಜಗಕೆ ಆಗುವ 'ಉಪಕಾರ'ವನ್ನು ಇಲ್ಲಿನ ಕೊರವಿಯ ಮಾತಲ್ಲಿ ಕೇಳಬಹುದು. ಕಣಿ ಹೇಳುವುದು ಒಬ್ಬಳಿಗಾದರೂ ಅದರ ಪರಿಣಾಮ ಸಾರ್ವತ್ರಿಕವಾದುದು. ಕೊರವಿ ತ್ರಿಲೋಕ ಸಂಚಾರಿ.

ಕೇರಿ ಕೇರಿಯೊಳಾಡುತಾ ಪಾಡುತಾ ವೈ
ಯಾರದಿ ಮನೆ ಮನೆ ತಿರುಗುತಾ
ನಾರಿಮಣಿಯರಿಗೆ ಶಕುನವಾ ಹೇಳುತಾ
ಸಾರುತಾ ಸುಖವನು ಬೀರುತಾ[೨]

ಕೃಷ್ಣ ಕೊರವಂಜಿ ರೂಪತಾಳಿದಾಗಲೂ ಕೊರವಿಗಿರುವ ಸಹಜ ಅಲಂಕಾರ ಹಾಗೂ ಕೇರಿ ಕೇರಿಯೊಳು ಹಾಡುತ್ತಾ ನಾರಿಯರಿಗೆ ಶಕುನವ ಹೇಳುತ್ತ ಅವರ ಸಂಕಟ ಹಾಗೂ ನಿರೀಕ್ಷೆಗಳಿಗೆ ಸ್ಪಂಧಿಸುವ ಗುಣದಲ್ಲಿ ಕೊರವಿಯ ಮೂಲಸಂವೇದನೆಗಳಿವೆ. ಮನದ ಸಂಕಟ ಹೇಳಿಕೊಳ್ಳುವುದು, ಆತ್ಮೀಯರಲ್ಲಿ ಮಾತ್ರ. ಕೊರವಿ ಕೆಳ ಕುಲದವಳಾದರೂ ಶಕುನ ಹೇಳುವ ಸಖೀಗುಣದ ಕಾರಣಕ್ಕಾಗಿ ಅವಳು ಎಲ್ಲರಿಗೂ ಬೆಲ್ಲದಂತೆ ಬೇಕಾದವಳು. ಎಲ್ಲರ ಮನಸ್ಸನ್ನು ಒಳಹೊಕ್ಕು ನೋಡುವ ಶಕ್ತಿ ಇರುವವಳು. ಶಕುನ ಹೇಳುವುದೊಂದು ಕಲೆ. ತನ್ನೆದುರಿಗಿರುವವರ ಮನಸ್ಥಿತಿಯನ್ನು ಸೂಕ್ಷ್ಮವಾಗಿ ಅರಿತುಕೊಂಡು ಸಾಂತ್ವನ ಹೇಳುವ, ಆತ್ಮವಿಶ್ವಾಸ ತುಂಬಿ ಆಶಾವಾದಿಯಾಗಿಸುವ ಕೆಲಸ ಹಗುರವಾದದ್ದಲ್ಲ.

ಇಂಥ ಆತ್ಮವಿಶ್ವಾಸಿಯಾದ ಕೊರವಿಗೆ ಸತ್ಯಭಾಮೆಯು ತನ್ನ ಬದುಕಿನ ಬಗೆಗೆ ಶಕುನ ಹೇಳಲು ಕರೆಯುವಾಗ ಕೊರವಂಜಿ ನೀಡುವ ಪ್ರತಿಕ್ರಿಯೆ ಗಮನಾರ್ಹವಾದುದು. ದೊರೆಸ್ಯಾನಿ ಕರೆಯುವಳೆಂದು ಧೂತೆ ಹೇಳಿದಾಗ ಯಾತಕ್ಕೆಂದು ಕೊರವಿ ಕೇಳುತ್ತಾಳೆ. ಆಗ ಧೂತೆ ಹೇಳುವ ಮಾತು ಕುತೂಹಲವಾದದ್ದು 'ಗುತ್ತಿಗೆಯಾಳಾದನೆ ಯದುಪತಿ ಒತ್ತಿ ಹಿಡಿದಳು ಕೃಷ್ಣನ ನಮ್ಮೊಡತಿ ಸರಿ ಸವತಿ ಮುತ್ತೈದೆ ಯೌವನ ದುರ್ಗಕೆ ಸುತ್ತ ಸುತ್ತಿದೆ ಮನ್ಮಥನಾಳು, ಕುದುರೆ, ಶಿವ ಸತಿಯೆ ನೀನೆಂದು ಸತ್ರಾಜಿತ ಪುತ್ರಿ ನಿನ್ನ ಕರೆಸಿದಳು' ಎನ್ನುವಲ್ಲಿ ಗಂಡ ಅಂದರೆ ಕೃಷ್ಣಪರಮಾತ್ಮ ಪರವಶನಾಗಿರುವ, ಅವನನ್ನು ತನಗೆ ತಂದುಕೊಡಬೇಕೆನ್ನುವ ಹಂಬಲಗಳು ಸತಿ ಧರ್ಮದ ನಾಡಾದ ಭಾರತದಲ್ಲಿ ಅನ್ಯರ ಮುಂದೆ ಹೇಳಿಕೊಳ್ಳಲಾರದಂಥ ಸಂಕಟಗಳು.

ಸವತಿ ಮತ್ಸರ ಎನ್ನುವುದು ಬೆಂಕಿಯಂಥದ್ದು. ಆದರೆ ಜಾನಪದ ಜಗತ್ತು. 'ನಾ ಮುಡಿದ ಹೂವ ಅವಳೊಂದುಗಳಿಗಿ ಮುಡಿಯಲಿ' ಎಂದು ಸವತಿ ಸಮಸ್ಯೆಯನ್ನು ಸಮಸ್ಯೆ ಎಂದೇ ಭಾವಿಸದ ಪರಿಯನ್ನು ಹೇಳುತ್ತದೆ. ವೈದಿಕ ಜಗತ್ತುಗಳಲ್ಲಿ ಬಹಳ ದೊಡ್ಡ ಕೌಟುಂಬಿಕ ಹಾಗೂ ಸಾಮಾಜಿಕ ಸಮಸ್ಯೆಯಾಗಿ ಕಾಣುವ ಇಂಥ ನೆಲೆಗಳು ದುಡಿವವರ್ಗಗಳಲ್ಲಿ ಸಹಜವೆಂಬಂತೆ ಪರಿಗಣಿತವಾಗಿಬಿಡುತ್ತವೆ. ದಾಂಪತ್ಯದ ಸಮಸ್ಯೆಯನ್ನು ಪರರೊಬ್ಬರ ಮೂಲಕ ಪರಿಹರಿಸಿಕೊಳ್ಳದೆ ಸ್ವತಃ ತಾವೇ ಪರಿಹರಿಸಿಕೊಳ್ಳುವ ವಿವೇಕವನ್ನು ಪ್ರದರ್ಶಿಸುತ್ತದೆ. ಕೊರವಿ ತನ್ನ ಕೌಟುಂಬಿಕ ನೆಲೆಗಳಲ್ಲಿರುವ ಇಂಥ ಹಲವು ದಾಂಪತ್ಯದ ಹಾಗೂ ಸಾಮಾಜಿಕ ತಲ್ಲಣಗಳನ್ನು ಮೀರಿ ಅಂಥ ಸಮಸ್ಯೆಯಿಂದ ನರಳುವವರಿಗೆ ಮನಸ್ಥೈರ್ಯ ನೀಡುವ ಮಹಿಳಾ ಚಿಂತಕಿಯಾಗಿ ಕಾಣುತ್ತಾಳೆ. 'ದೊರೆಗಳ ಸಂಗವು ನಮಗ್ಯಾಕೆ, ನೆರಳಿಗಂಜುವವಳು ನಾನು' ಎನ್ನುವಲ್ಲಿ ವ್ಯವಸ್ಥೆಯ ಬಗೆಗಿನ ವ್ಯಂಗ್ಯವನ್ನು, ಎಚ್ಚರಿಕೆಯನ್ನು ಕಾಣುತ್ತೇವೆ. ಭಾಮೆಯ ಮನೆಗೆ ಬರುವ ಹೊತ್ತಿನಲ್ಲಿ ಕೊರವಿ, 'ಸೊಲ್ಲು ಸೊಲ್ಲಿಗೆ ನಗುತಾ, ಚೆಲ್ವ ಮಲ್ಲಿಗೆ ಝುಲ್ಲಿ ಬೆನ್ನಿನಲಿ ವಲಿವುತಾ' ಎನ್ನುವಲ್ಲಿ ಅವಳ ಆಗಮನವೇ ಚುಂಬಕದಂತೆ ಆಕರ್ಷಿಸುತ್ತದೆ. 'ಮಧುರ ವಾಕ್ಯಗಳನ್ನಾಡುತ್ತ ಮಾನಿನಿಯ ಹೃದಯವ ಕದಡಿಸುತಾ, ಮುದದಿಂದ ಮುಖ ನೋಡುತ್ತ ತನ್ನೊಳು, ತಾನೆ ದುಖು ದುಖು ನಸು ನಗುತಾ, ಸುದತಿಯ ಮನವೆಲ್ಲ ಸೂರೆ ಮಾಡುತ್ತ' ಬರುವ ಕೊರವಿಯ ಕ್ರಮವೇ ಮನಶಾಸ್ತ್ರೀಯ ದೃಷ್ಟಿಯಿಂದ ಮಹತ್ವದ್ದು. ಸಂಕಟದಿಂದ ಕಂಗಾಲಾದ ಮನಸ್ಸಿಗೆ ಮಾತು ಮತ್ತು ಹಿತವಚನಗಳಿಗಿಂತ ಆಪ್ತವಾದ ನೋಟ, ಆಕರ್ಷಿತ ನಡವಳಿಕೆ, ಹಸನ್ಮುಖದಂತಹ ನಡುವಳಿಕೆಗಳು ಬೇಗ ಅಪ್ಯಾಯಮಾನವಾಗುತ್ತವೆ. ಸಂಕಟದಲ್ಲಿರುವವರಿಗೆ ಸಿಡುಕು ಮೋರೆಯ ಸ್ವಾಗತ ಮತ್ತಷ್ಟು ಪ್ರಪಾತಕ್ಕೆ ತಳ್ಳುತ್ತದೆ. ಹೀಗಾಗಿ ಭವರೋಗ ವೈದ್ಯಳಾದ ಕೊರವಿಯು ಮನನೊಂದು ವ್ಯಾಕುಲಗೊಂಡ ಭಾಮೆಯನ್ನು ವಿಶ್ವಾಸದಿಂದ ಕಾಣುವ ಮೂಲಕ ಮೊದಲ ನೋಟದಲ್ಲಿಯೇ ಚಿರಪರಿಚಿತಳಾಗಿಬಿಡುತ್ತಾಳೆ. ಅಂಥ ಧೀಮಂತ ರೂಪ ಕೊರವಂಜಿಯದು.

ಇಂಥ ವ್ಯಕ್ತಿತ್ವಕ್ಕೆ ಮಾರುಹೋದ ಸತ್ಯಭಾಮೆ 'ಧನ್ಯಳಾದೆನೆ ಕೊರವಿ ನಿನ್ನ ನೋಡಿ ಮಾನ್ಯಳಾದೆನೆ. ಎನ್ನ ಮನದೊಳಿದ್ದುದು ಹೇಳೆ ಗೆಳತಿ, ಪತಿಯಿಂದಧಿಕರಿಲ್ಲಾ ಪೃಥ್ವಿಯೊಳಗೆ ಪತಿಯಿಲ್ಲದಾ ಯೌವನ ಪಾಷಾಣದಂತೆ, ಪತಿಗೆ ಊಡಿದಳು ಒಲವು ಎನ್ನ ಸವತಿ, ಪತಿಯವಳ ಬಿಟ್ಟು ಅಗಲವಲ್ಲ, ಅರೆಘಳಿಗೆ ಪತಿಯ ಕಟ್ಟಿ ಹಾಕಿದಳು ಮೋಹ ಪಾಶದಲಿ ನಗೆಯೆಂಬ ಮಲ್ಲಿಗೆ ಚೆಲ್ಲಿದಳು, ಕುಚಯುಗ ಜಂಭಿರಗಳಿಂದ ಅಕಟ ಕಟ್ಟಿದಳು, ಅಧರ ಮಧುರವ ಕುಡಿಸಿ ಮದವೇರಿಸಿದಳು, ಬದಿಯಗಲದಂತೆ, ಭಾಷೆಯ ಕೊಂಡಳಂತೆ'. ಗಂಡ ಪರಾಧೀನನಾದ ಸುದ್ದಿಯನ್ನು ರಾಜಕುಮಾರಿಯೂ ಸಾಕ್ಷಾತ ಪರಮಾತ್ಮನ ಹೆಂಡತಿಯೇ ಆದ ಸತ್ಯಭಾಮೆ ಕೊರವಿ ಮುಂದೆ ವರ್ಣಿಸಿ ಹೇಳುವುದೆಂದರೆ? ಹೆಂಗಸಿನ ಒಲುಮೆಯ ವಿವಿಧ ರೀತಿಗಳನ್ನು ವರ್ಣಿಸುತ್ತ 'ಪತಿಯಗಲಿದೀ ದೇಹ ಹೆಮ್ಮರಾ ನೀ ಬಲ್ಲೇ' ಎಂದು ಕೊರವಿಯನ್ನೇ ಪ್ರಶ್ನಿಸುವ ನಡೆ ಗಮನಾರ್ಹ. ಪತಿಯ ವಿರಹ ಎನ್ನುವುದು ಹೆಣ್ಣು ಮನಸ್ಸುಗಳಿಗೆ ಮಾತ್ರ ಅರ್ಥವಾಗುವಂಥದ್ದು. ತನ್ನ ನೋವು ಹೇಳುವುದರ ಜೊತೆಗೆ ಪತಿವಿಹಿತ ಬದುಕಿನ ಕಷ್ಟಗಳನ್ನು ಭಾಮೆ ಕೊರವಿಯೊಂದಿಗೆ ತೋಡಿಕೊಳ್ಳುತ್ತಾಳೆ.

ಭಾಮೆಗೆ ಉತ್ತರವಾಗಿ ಕೊರವಿ 'ಕದ್ದು ಮಾರುವಳಲ್ಲಾ ಕರದವರಲ್ಲಿ ಉಂಬೆ ಸಿದ್ದಿಸಿ ಕೇಳೆನ್ನ ಸೊಲ್ಲ ಹೇಳುವೆನೆಲ್ಲಾ, ಬಿಡು ನಿನ್ನ ಮನದ ವೈಕ್ಲಬ್ಯ, ಹೇಳುವೆನೆಲ್ಲಾ' ಎಂದು ಸಾಂತ್ವನ ಹಾಗೂ ಸಮಾಧಾನ ಹೇಳುತ್ತಾಳೆ.

ಹೆಣ್ಣಿಗೆ ವಿದ್ಯೆಯನ್ನೇ ಕಡೆಗಣಿಸುವ ಸಮಾಜದಲ್ಲಿ ಕೊರವಿಯಂಥ ಅಪಾರ ಲೋಕಾನುಭವವುಳ್ಳ ಅನುಭಾವಿ. ಈಕೆ ಕೆಳಕುಲಗಳ ಮಹಿಳೆಯರನ್ನು ಭಿನ್ನ ರೀತಿಯಲ್ಲಿ ಅನುಸಂಧಾನ ಮಾಡಲು ಪ್ರೇರಿಸುತ್ತಾಳೆ. ಕೊರವಿಯ ತಜ್ಞತೆಯ ಕ್ಷೇತ್ರಗಳು ಬಹುಮುಖಿಯಾದಂಥವು.

ಸಾಮುದ್ರಿಕ ಬಲ್ಲೆ ಶಕುನ ಹೇಳಲು ಬಲ್ಲೆ
ಪ್ರೇಮದಿಂ ಬಿಟ್ಟ ಗಂಡನ ಒಲಿಸಿ ಕೊಡಬಲ್ಲೆ
ವೃದ್ಧ-ಯೌವನವ ಅಭಿವೃದ್ಧಿ ಮಾಡಲು ಬಲ್ಲೆ
ಪೊದ್ದು ತೀರಿಸುವ ಒಲಿಸುವ ಮದ್ದುಗಳ ಬಲ್ಲೆ
ಕೆಟ್ಟ ಸವತಿಯ ಬಾಯಕಟ್ಟು ಮಾಡಬಲ್ಲೆ
ಹುಟ್ಟು ಬಂಜೆಗೆ ದಿಟ್ಟ ಮಕ್ಕಳನು ಕೊಡಬಲ್ಲೆ
ಲಗ್ನ ಹಿಡಿಯಲು ಬಲ್ಲೆ, ನವಗ್ರಹ ಯಂತ್ರಗಳ ಬಲ್ಲೆ
ಆನಂದ ಯೋಗಗಳ ಆಯ್ದು ಕೊಡಬಲ್ಲೆ
ಸ್ವಾನಂದಗಳ ಕೊಡವ ಧೂರ್ತ ಲಕ್ಷಣ ಬಲ್ಲೆ
ಹಕ್ಕಿ ಶಕುನವ ಬಲ್ಲೆ, ಪಕ್ಷಿ ವ್ಯಾಳ್ಯವ ಬಲ್ಲೆ
ಎಕ್ಕೆ ಚಿನಕುಂಟು ನೆನಸಿಕೋ ಹೇಳಿಕೊಡಬಲ್ಲೆ
ಚಿಂತಾಮಣಿಯ ಬಲ್ಲೆ, ಚಿಲ್ಲ ಹೊತ್ತಿಗೆ ಬಲ್ಲೆನಿ
ರಂತರ ಬಲವ ಪೇಳ್ವ ಜ್ಯೋತಿಷ್ಯಗಳ ಬಲ್ಲೆ
ಕಪ್ಪನಿಡಬಲ್ಲೆ ಕೈಚಳಕವ ಬಲ್ಲೆ
ತಪ್ಪದಲೆ ವೇತಾಳನೊಶ ಮಾಡಿಕೊಡಬಲ್ಲೆ

ಬೇಕಾದರೆನ್ನ ಮಾತು ಭಯ ಭಕ್ತಿಯಲ್ಲಿಕೇಳು
ನಾಡಾಡ ಕೊರವಿ ನಾನಲ್ಲ ನಿರ್ಮಳಾತ್ಮಳುನಾನು
ದೊರಿಸ್ಯಾನಿ ಯಾತರಲಿ ಕೊರತಿ ನನಗಿಲ್ಲಾ
ಪರಹಿತಾರ್ಥಕೆ ವೇಷ ಧರಿಸಿ ತಿರುಗುವೆನು
ಬ್ಯಾಸರದೆ ಕೇಳಿದರೆ ಬೈತನಕಾ ಹೇಳುವೆನು
ಏಸು ದೇಶವನೆಲ್ಲ ತಿರುಗಿ ಬಂದೆ ನಾನು[1]

ಮಾತಿಗೆ ಅವಕಾಶವಿಲ್ಲದ ಸಮಾಜದಲ್ಲಿ ಕೆಳಕುಲದ ಹೆಣ್ಣೊಬ್ಬಳು ಸಕಲಶಾಸ್ತ್ರಗಳಲ್ಲಿ ಪಾರಂಗತಳಾಗುವುದೆಂದರೆ? ಉತ್ಪತ್ತಿ ಸಾಮರ್ಥ್ಯವಿದ್ದರೂ ಹೆಣ್ಣನ್ನು ಕ್ರಿಯಾಹೀನವಾಗಿ ಅವಳ ಅಭಿವ್ಯಕ್ತಿ ನೆಲೆಗೆ ಅರ್ಥವಿಲ್ಲದ ಹಾಗೆ ಮಾಡಿದ ವ್ಯವಸ್ಥೆಯೊಳಗೆ ಕೊರವಿ ತನ್ನ ತಜ್ಞತೆಯಿಂದಾಗಿ ಪಡೆದುಕೊಳ್ಳುವ ಮಹತ್ವ ವಿಶಿಷ್ಟವಾದುದು.

ಇಡೀ ವಿವರ ಕೊರವಿಗಿರುವ ತಜ್ಞತೆಯ ಬಹುಶ್ರುತತೆಯನ್ನು ತೆರೆದಿಡುತ್ತದೆ. ಸಾಮಾನ್ಯವಾಗಿ ವೈದಿಕರ ಅಧಿಪತ್ಯದಲ್ಲಿರುವ ಶಾಸ್ತ್ರಗಳನ್ನೆಲ್ಲ ಕೊರವಿ ಅರಗಿಸಿಕೊಂಡದ್ದು ಇಲ್ಲಿ ಗಮನಿಸುವಂಥದ್ದು.

ಹೆಣ್ಣನ್ನು ವ್ಯಕ್ತಿತ್ವ ಹಾಗೂ ಸ್ವಪ್ರಜ್ಞೆಯಿಲ್ಲದ ನೆಲೆಯಲ್ಲಿ ಗ್ರಹಿಸುವ ವೈದಿಕ ನೆಲೆಗಳಿಗೆದುರಾಗಿ ಗಂಡಿನ ಅಧಿಕಾರ ಹಾಗೂ ಜ್ಞಾನದ ವಾರಸುದಾರಿಕೆಯನ್ನೇ ಬುಡಮೇಲು ಮಾಡುತ್ತವೆ. ಪುರುಷ ನಿರ್ಮಿತ ಒತ್ತಾಯಗಳನ್ನು ಮೀರುತ್ತದೆ. ಕಲೆಯ ನಿರ್ಮಿತಿಗಾಗಿ ಹೆಣ್ಣು ಬಳಸುವ ಕನ್ನಡ ಭಾಷೆಗೂ ಅದೇ ಕೆಲಸಕ್ಕೆ ಗಂಡು ಬಳಸುವ ಬಗೆಗೂ ವ್ಯತ್ಯಾಸಗಳಿವೆ. ಮಾತಿನ ಸಾಮರ್ಥ್ಯವಿದ್ದರೂ ಉತ್ಪತ್ತಿಯ ಪೆಡಸು ಇದ್ದಾಗಲೂ ಹೆಣ್ಣನ್ನು ಕ್ರಿಯಾಹೀನವಾಗಿಸಿ ಆಕೆಯ ಮಾತಿಗೆ ಮತ್ತು ಭಾಷೆಗೆ ಅರ್ಥವಿಲ್ಲದ ಹಾಗೆ ಸಮಾಜವು ಮೌನಗೊಳಿಸುತ್ತ ಬಂದಿದೆ.

ಕೊರವಂಜಿಯ ಮಾತುಗಾರಿಕೆಯಲ್ಲಿ ಪ್ರತಿಭೆ, ಆತ್ಮವಿಶ್ವಾಸ, ಜೀವಂತಿಕೆ ಹಾಗೂ ಸಾಮಾಜಿಕ ಕಳಕಳಿ ಎಲ್ಲವೂ ಕಂಡುಬರುತ್ತವೆ. ಇದೂವರೆಗೆ ಜ್ಞಾನದ ಮೀಮಾಂಸೆಯನ್ನು ಲಿಂಗ, ಜಾತಿ, ಹಾಗೂ ವರ್ಗ, ವರ್ಣಗಳ ನೆಲೆಯಲ್ಲಿಯೇ ವ್ಯಾಖ್ಯಾನಿಸುತ್ತ ಬರಲಾಗಿದೆ. ಜ್ಞಾನವೆಂದರೆ ಅದು ಪುರುಷಾಧಿಕಾರವುಳ್ಳದ್ದು. ಪ್ರಪಂಚದ ವಿದ್ಯಮಾನಗಳ ಜೊತೆ ವ್ಯವಹರಿಸುವವ ಪುರಷನೇ. ಹೀಗಾಗಿ ಜ್ಞಾನದ ಉತ್ಪಾದನೆ ಹಾಗೂ ಸಂಗೋಪನೆ ಪುರುಷರಿಂದ ಮಾತ್ರ ಸಾಧ್ಯ ಅದು ಮಹಿಳೆಯರಿಂದ ಅದರಲ್ಲೂ ಕೆಳಕುಲಗಳ ಮಹಿಳೆಯರಿಂದ ಇನ್ನೂ ಸಾಧ್ಯವಿಲ್ಲ ಎನ್ನುವ ಷರಾ ಬರೆಯಲಾಗಿದೆ. ಇಂಥ ಲಿಂಗ ತಾರತಮ್ಯ ಧೋರಣೆ ಮೂಲಕ ಕೊರವಂಜಿಯಂಥ ಹೆಣ್ಣುಗಳ ಜ್ಞಾನ ಹಾಗೂ ದುಡಿಮೆಯ ನೆಲೆಗಳನ್ನು ನಿರ್ಲಕ್ಷಕ್ಕೆ ಗುರಿ ಮಾಡಲಾಗಿದೆ. ಆ ಮೂಲಕ ಹಿಂದಿನಿಂದಲೂ ನಡೆದು ಕೊಂಡು ಬಂದ ಲಿಂಗ ಹಾಗೂ ಜಾತಿಸಂಬಂಧಿ ಶ್ರಮ ವಿಭಜನೆಯನ್ನು ಗಟ್ಟಿಗೊಳಿಸುತ್ತಾ ಬರಲಾಗಿದೆ. ಜ್ಞಾನಶಿಸ್ತುಗಳ ಈ ತಾರತಮ್ಯದಿಂದಾಗಿ ಸಮಾಜದಲ್ಲಿ ಕೇಳುವ, ಹೇಳುವ ಆರೈಕೆ ಹಾಗೂ ಶುಶ್ರೂಷೆಯ ಗುಣಗಳು ಕಮರಿ ಹೋಗಿವೆ.

ಲೋಕಾನುಭವ ಸಂಪಾದನೆ ಮತ್ತು ದುಡಿಮೆ ಎನ್ನುವುದೇ ಸಾರ್ವತ್ರಿಕ ಗುಣವುಳ್ಳದ್ದು. ಆದರೆ ಸರಕು ಸಂಸ್ಕೃತಿ ಹೆಣ್ಣಿನ ಜ್ಞಾನದ ನೆಲೆಗಳನ್ನು ಅಪವಿತ್ರಗೊಳಿಸುತ್ತಿದೆ. ಜ್ಞಾನದ ಪಡೆಯುವಿಕೆ ಹಾಗೂ ಅದರ ವಿನಿಮಯವು ಸಹನೆ ಹಾಗೂ ಸಂಯಮ ಶೀಲತೆಯನ್ನು ಕಲಿಸುವಂಥದ್ದು. ಜ್ಞಾನಕ್ಕೆ ಇಂದು ಇಂಥ ಸಂಯಮತೆ ಇಲ್ಲವಾಗಿ ಅದು ಅಸಹನೆ ಹಾಗೂ ಅಸಹಿಷ್ಣುತೆಗೆ ಪಕ್ಕಾಗಿಬಿಟ್ಟಿದೆ. ಸಹನೆ ಹಾಗೂ ಸಂಯಮಶೀಲತೆ ಎನ್ನುವುದು ಹೆಣ್ಣಿನ ದೌರ್ಬಲ್ಯವಲ್ಲ. ಬದಲಾಗಿ ಅವಳನ್ನು ಪಕ್ವಗೊಳಿಸಿ ಸಶಕ್ತಗೊಳಿಸುವುದು. ಅನುಭವ ಹಾಗೂ ದುಡಿಮೆಯ ಸಶಕ್ತತನ ಆರೋಗ್ಯವಂಥ ಸಮಾಜಕ್ಕಾಗಿ ಹಂಬಲಿಸುತ್ತದೆ. ಇದಕ್ಕೆ ಕನ್ನಡದ ದಾರ್ಶನಿಕರು ಉತ್ತಮ ಉದಾಹರಣೆ.

'ತಂಗಿ ಕೇಳ ನಿನ್ನ ಅಂಗಳದಾಗ ಚೇಳ ಕಡದಿತ', 'ಗಡಿಗಿಜ್ವಾಕಿ ತಂಗಿ ಬ್ರಹ್ಮಕೊಟ್ಟ ಗಡಿಗಿ ಜ್ವಾಕಿ ತಂಗಿ', 'ಅಳಬೇಡಾ ತಂಗಿ ಅಳಬೇಡಾ', 'ಅಕ್ಕ ನಿನ್ನ ಮಾತ ಕೇಳಿ ಚಿಕ್ಕದೊಂದು ಗಿಳಿಯ ಸಾಕಿದೆ', 'ಬರಬಾರದವ್ವ ಇಲ್ಲಿಗೆ ತರಬಾರದ ಹಾಲು ಮೊಸರ' ಹೀಗೆ ಅಕ್ಕ, ತಂಗಿ, ಅವ್ವ, ಅಪ್ಪ, ತಮ್ಮ, ಅಣ್ಣ, ಹುಚ್ಚಪ್ಪ ಎನ್ನುವ ಸಂಬಂಧ ವಾಚಕಗಳ ಮೂಲಕ ಒಂದು ಪ್ರೀತಿಯುತ ವಿಶ್ವಾಸ ಹಾಗೂ ಸಂಬಂಧಗಳ ವಿಸ್ತರಣೆಗೆ ಮುಂದಾಗುತ್ತಾರೆ. ಕೆಟ್ಟದ್ದನ್ನು ಮಾಡಬಾರದು ಎಂದು ತಿಳಿ ಹೇಳುವಾಗ ಇಂಥ ಅಂತಃಕರಣ ಯುಕ್ತ ಅನುನಯ ಪದಗಳನ್ನು ಬಳಸುತ್ತಾರೆ.

ಡಾ. ಕೆ.ವಿ.ನಾರಾಯಣ ಅವರು ಹೇಳುವಂತೆ 'ಹೆಣ್ಣಿನ ಭಾಷೆಯಲ್ಲಿ ತನ್ನೆದುರಿಗಿರುವವರೊಂದಿಗೆ ಒಂದು ರೀತಿಯ ಸಂಬಂಧ ಕಲ್ಪಿಸಿಕೊಳ್ಳುವುದು ಅವರ ಸಂವಹನದ ಮುಖ್ಯ ಲಕ್ಷಣವಾಗಿದೆ. ಅವರು ಯಾವಾಗಲೂ ಮಾತನಾಡುವವರ ಜೊತೆ ಒಂದು ಬಗೆಯ ಸಖ್ಯಭಾವದ ಸಂಬಂಧವನ್ನು ಕಲ್ಪಿಸಿಕೊಂಡಿರುತ್ತಾರೆ. ಅದಕ್ಕಾಗಿ ಅಂಥ ಸಂಬಂಧದ ಸಂಕರಗಳನ್ನು ಭಾಷೆಯಲ್ಲಿ ಅಡಕಗೊಳಿಸಿ ಕೊಂಡಿರುತ್ತಾರೆ.'[೪] ಕೊರವಂಜಿಯ ಮಾತಿನ ಕಲೆ ಇಂಥದ್ದು. ಅವಳು ತನ್ನೆದುರಿಗಿರುವವರೊಂದಿಗೆ ಒಂದು ಆತ್ಮೀಯ ಸಂಬಂಧವನ್ನು ಹೆಣೆದುಕೊಂಡು ಮಾತನಾಡುತ್ತಿರುತ್ತಾಳೆ. ಅವಳಿಗೆ ಪ್ರತಿಕ್ರಿಯೆ ಮುಖ್ಯವಾಗುತ್ತದೆ. ಆ ಪ್ರತಿಕ್ರಿಯೆಯ ಮೂಲಕ ತನ್ನ ಮಾತನ್ನು ಮಾತಿನ ವರಸೆಯನ್ನು ಮುಂದುವರಿಸುತ್ತಾಳೆ. ಯಾವುದೇ ಭಾಷಿಕ ಕ್ರಿಯೆಗೆ ಮೂರು ಅರ್ಥಗಳಿರುತ್ತವೆ. ಅರ್ಥ, ಭಾವ ಮತ್ತು ಕ್ರಿಯೆ ಇವುಗಳ ಸಂಯೋಜನೆಯಿಂದ ಮಾತು ಅರ್ಥಪಡೆದುಕೊಳ್ಳುತ್ತದೆ. ಹಾಗೂ ಕ್ರಿಯೆ ಪ್ರತಿಕ್ರಿಯೆ ಜರಗುತ್ತವೆ. ಕ್ರಿಯೆ ಜರುಗದಿದ್ದರೆ ಆಡಿದ ಮಾತಿಗೆ ಅರ್ಥವಿಲ್ಲ. ಹೆಣ್ಣಿಗೆ ಮಾತಿನ ಸಾಮರ್ಥ್ಯವಿದ್ದರೂ ಅದನ್ನು ಬಳಸಿದಾಗ ಅದರ ಉದ್ದೇಶ ಪೂರ್ಣಗೊಳ್ಳದ ಹಾಗೆ ನಮ್ಮ ಸಾಮಾಜಿಕ ಕಟ್ಟುಪಾಡುಗಳು ಸಂಯೋಜನಗೊಂಡಿವೆ.

ಕೊರವಂಜಿಯಲ್ಲಿ ಇಂಥ ಆಪ್ತಸಮಾಲೋಚನೆಯ ಮಾತುಗಳನ್ನು ಕಾಣುತ್ತೇವೆ. ಅವಳು ಬಳಸುವ ಮಾತಿನ ಸರಪಳಿ ಶೈಲಿಯೂ ಇದಕ್ಕೆ ಕಾರಣವಾಗುತ್ತದೆ. ಸತ್ಯಭಾಮೆಯೊಂದಿಗೆ ಕೊರವಿ ಮಾಡುವ ಸಂಭಾಷಣೆಯೊಂದನ್ನ ಉದಾಹರಿಸುವುದಾದರೆ 'ನನ್ನ ಮಾತನಾಲಿಸು ನಿನ್ನ ಮನದೊಳಂತಃಕರಣ ಮಾತು ಬಂದರೆ ಖರೆಯನ್ನು, ಈ ಬಣ್ಣದ ಚಿಣಿಕೋಲು ನಿನ್ನ ಕೈಯಲ್ಲಿ ಪಿಡಿದೆನ್ನ ವಾಕ್ಯಕೇಕ ಚಿತ್ತ ನೀಡೆ' ಎಂದು ಹೇಳುತ್ತ ಸತ್ಯಭಾಮೆಯ ಹುಟ್ಟಿನಿಂದ ಹಿಡಿದು ಕೃಷ್ಣ ಪಾರಿಜಾತ ಪುಷ್ಪವನ್ನು ರುಕ್ಮಿಣಿಗೆ ನೀಡಿದ ಪ್ರಸಂಗದ ವರೆಗೂ ಸವಿಸ್ತಾರವಾಗಿ ಕೊರವಿ ಭಾಮೆಗೆ ಹೇಳುತ್ತಾಳೆ. ಭಾಮೆಯ ತಪ್ಪುಗಳನ್ನು ಆ ಕಾರಣದಿಂದ ಕೃಷ್ಣ ಅವಳಿಂದ ದೂರವಾದ ಕ್ಷಣಗಳನ್ನು ಕಣ್ಣಿಗೆ ಕಟ್ಟುವಂತೆ ಹೇಳುತ್ತಾಳೆ. ಸತ್ಯಭಾಮೆಯ ಮನದ ತಲ್ಲಣಗಳನ್ನೆಲ್ಲ ಬಿಡಿಸಿ ಬಿಡಿಸಿ ಕೊರವಿ ಹೇಳುತ್ತಾಳೆ. ಪ್ರತಿ ಮಾತಿಗೊಮ್ಮೆ 'ನಿಜವಿದ್ದರೆ ಖರೆಯನ್ನು ಇಲ್ಲ ಹುಸಿ ಎನ್ನು ಎನ್ನುತ್ತ ಹೋಗುತ್ತಾಳೆ. ಈ ದಿನ ನಿನ್ನ ಗಂಡ ನಿನ್ನ ಹತ್ತಿರ ಬರುತ್ತಾನೆ' ಬಂದಾನೆಂದು ತಿಳಿಯೆ ಸ್ಮರನ ಮಾತಿನ ಗಿಳಿಯೆ, ಸಂದೇಹವ್ಯಾತಕೆ ಸಿಂಧುರಗಮನೆ ವಿಶ್ವಾಸವಿಡು.

ಹೊಟ್ಟೆ ಕಂದನ, ಪುಟ್ಟಸಿಂಗನಾ
ಮುಟ್ಟುವೆನೆ ಕೊರಳಾಣೆ
ರೊಟ್ಟಿಯ ಮ್ಯಾಲಾಣೆ,
ಬುಟ್ಟಿಯ ಮ್ಯಾಲಾಣೆ, ಕಟ್ಟಿದ ತಾಯಿತದಾಣೆ

ಅದೇ ರೀತಿ 'ಶಿವಸತಿಯರ ಮ್ಯಾಲಾಣೆ, ಜಕ್ಕಿಯರಾಣೆ, ರವಿಯಮ್ಯಾಲಾಣೆ, ಭೂಮಿಯ ಮ್ಯಾಲಾಣೆ, ತವ ಸೋದರನಾಣೆ, ಅಂಬುಜಾಲೋಚನೆ ನಂಬುಗೆಗೊಡು ಶಂಭುವಿನ ಮ್ಯಾಲಾಣೆ ಕಂಭು-ಕಂಧರಳೆ ಸಂಭ್ರಮದಲಿರು ತುಂಬಿದ ಶಕುನವಿದಕೋ' ಈ ದಿನ ಕೃಷ್ಣ ನಿನ್ನ ಬಂದು ಸೇರುತ್ತಾನೆಂದು ಖಚಿತವಾಗಿ ಹೇಳುತ್ತಾಳೆ. ಹಾಗೂ ಆಣೆಯಿಟ್ಟು ಭಾಮೆಗೆ ನಂಬಿಕೆ ಬರುವಂತೆ ಮಾಡುತ್ತಾಳೆ.

'ಬಣ್ಣದಕೋಲು ಹಿಡಿದು ನನ್ನ ವಾಕ್ಯಕೇಕ ಚಿತ್ತ ನೀಡಿ' ಎನ್ನುವ ಮಾತು ಮನಶಾಸ್ತ್ರದ ದೃಷ್ಟಿಯಿಂದ ಪ್ರಮುಖವಾದದ್ದು. ಶಕುನ ಹೇಳುವವರು ಮಾಟ ಮಂತ್ರ ತೆಗೆಯುವವರ ಒಂದು ಗುಣವಿಶೇಷತೆ ಎಂದರೆ ಸಮಸ್ಯೆಗೊಳಗಾದ ವ್ಯಕ್ತಿಯನ್ನು ಸಾಂತ್ವನ ಮಾಡುವ ಮೂಲಕ ತಮ್ಮ ವಿಶ್ವಾಸಕ್ಕೆ ತೆಗೆದುಕೊಳ್ಳುವುದು, ತಮ್ಮನ್ನು ಸಂಪೂರ್ಣ ನಂಬುವಂತೆ ಅವರೊಂದಿಗೆ ಅನುನಯದಿಂದ ವರ್ತಿಸುವುದು, ಸಮಸ್ಯೆಯ ಮೂಲ ಹುಡುಕುವುದು. ಸಮಸ್ಯೆಯಲ್ಲಿನ ಸ್ವಯಂಕೃತ ಅಪರಾಧಗಳ ಬಗ್ಗೆ ಮನಮುಟ್ಟುವಂತೆ ಹೇಳಿ ವ್ಯಾಕುಲಕ್ಕೆ ಕಾರಣವಾದ ಸಂಗತಿಗಳನ್ನು ಮನಸ್ಸಿನಿಂದ ದೂರಮಾಡಿ ನಂತರ ಅವರಿಗೆ ಆತ್ಮಸ್ಥೈರ್ಯ ತುಂಬುವುದು. ತದೇಕ ಚಿತ್ತತೆ ಎನ್ನುವುದು ಮನುಷ್ಯನ ಹಲವು ಸಮಸ್ಯೆಗಳಿಗೆ ಪರಿಹಾರ ಒದಗಿಸುತ್ತದೆ. ಮನಸ್ಸಿನ ಆರೋಗ್ಯ ಬಹಳ ಮುಖ್ಯವಾದದ್ದು. ಕೊರವಿಯು ಸತ್ಯಭಾಮೆಯಂಥ ಮೇರು ಪಾತ್ರದ ಕೌಟುಂಬಿಕ ಸಮಸ್ಯೆಯನ್ನು ಗೆಳತಿಯಾಗಿ, ಸಖಿಯಾಗಿ ನಿರ್ವಹಿಸುವ ರೀತಿ ವಿಶೇಷವಾದದ್ದು. ಹೆಣ್ಣು ಹೆಣ್ಣಿಗೆ ಶತ್ರು ಎನ್ನುವ ಸಾಮಾಜಿಕ ನಂಬಿಕೆಗೂ ಹೆಣ್ಣಿಗೆ ಬಂದ ಸಂಕಷ್ಟಗಳನ್ನು ಹೆಣ್ಣೇ ದೂರಮಾಡಿ ಅವಳಿಗೊಂದು ಆಶಾಕಿರಣವಾಗುವ ನೆಲೆಗಳಿಗೂ ಎಷ್ಟೊಂದು ಅಂತರ. ವ್ಯಕ್ತಿ ವ್ಯಕ್ತಿಗಳ ಮಧ್ಯ, ಕುಟುಂಬ ಕುಟುಂಬಗಳ ಮಧ್ಯ, ಸಮೂಹ ಸಮೂಹಗಳ ನಡುವೆ ಬೀಳುವ ಬಿರುಕುಗಳನ್ನು ಸ್ನೇಹ, ಸಲಿಗೆ, ಸಾಂತ್ವನ ಹಾಗೂ ಸಖಿ ಮನೋಭಾವದ ಮಳೆಯಿಂದ ಬೆಸೆಯುವ ಕೊರವಿಯ ವ್ಯಕ್ತಿತ್ವ ಘನವಾದದ್ದು.

ಮಹಿಳಾವಾದ, ಸ್ತ್ರೀ ಚಿಂತನೆ, ಸ್ತ್ರೀವಾದ ಮುಂತಾದ ವಿವಿಧ ಪರಿಕಲ್ಪನೆಗಳು ಓದುವ ಹಾಗೂ ಬರೆಯುವ ಅವಕಾಶ ಇರುವವರ ಬಗ್ಗೆ ಹೆಚ್ಚು ಮಾತಾಡಿದ್ದಿದೆ. ಓದು-ಬರಹದ ಅವಕಾಶದಿಂದ ಹೊರಗುಳಿದ, ನೆಲೆಗಾಣದ ಕೊರವಿಯಂಥ ಅಲಕ್ಷಿತ ಸಮುದಾಯದ ಮಹಿಳೆಯ ಬಗ್ಗೆ ಚಿಂತಿಸಿದ್ದು ಕಡಿಮೆ, ನಿರ್ಲಕ್ಷಿತ, ಅಂಚಿಗೆ ತಳ್ಳಲ್ಪಟ್ಟ ಅಲೆಮಾರಿ ಸಮುದಾಯಗಳ ಹೆಂಗಸರ ಮೌಖಿಕ ಅಭಿವ್ಯಕ್ತಿಗಳು ಅಧ್ಯಯನ ನಡೆದಿಲ್ಲವೆಂದೇ ಹೇಳಬೇಕು ಇಂಥ ಆಶಾಬ್ಧಿ ಅಭಿವ್ಯಕ್ತಿಯ ಅಧ್ಯಯನ ಇಂದು ಪ್ರಮುಖವಾಗಬೇಕು.

ಕೊರವಂಜಿ, ಜೋಗಮ್ಮ, ಗಂಗಿಗೌರಿ, ಇತ್ಯಾದಿ ಅಲೆಮಾರಿ ಸಮುದಾಯದ ಹೆಂಗಸರ ಹಾಡು, ಕಥೆ, ಮಾತುಗಳಲ್ಲಿ ಊಣಗೊಂಡ ಹಾಗೂ ಮೌನಗೊಳಿಸಿದ ಜಗತ್ತೊಂದು ಮಿಡಿಯುತ್ತದೆ ಹಾಗೂ ನುಡಿಯುತ್ತದೆ. ಇಂಥ ಹಾಡು, ಕಥೆಗಳು ದಮನಿಸಲ್ಪಟ್ಟ ಮಹಿಳೆಯರ ಅಧ್ಯಯನಕ್ಕೆ ಒಳ್ಳೆ ಆಕರಗಳಾಗಿವೆ.

**ಕೊನೆಟಿಪ್ಪಣಿ**

೧. ಡಾ. ಕೃಷ್ಣಕಟ್ಟಿ(ಸಂ), ಶ್ರೀಕೃಷ್ಣ ಪಾರಿಜಾತ, ಪುಟ-೯೪, ೧೯೯೭

೨. ಡಾ. ಕೃಷ್ಣಕಟ್ಟಿ(ಸಂ), ಶ್ರೀಕೃಷ್ಣ ಪಾರಿಜಾತ, ಪುಟ-೯೭, ೧೯೯೭

೩. ಡಾ. ಕೃಷ್ಣಕಟ್ಟಿ(ಸಂ), ಶ್ರೀಕೃಷ್ಣ ಪಾರಿಜಾತ, ಪುಟ-೧೧೧-೧೧೨, ೧೯೯೭

೪. ಡಾ. ಎಚ್.ಎಸ್. ಶ್ರೀಮತಿ, ಹೆಣ್ಣು ಮತ್ತು ಭಾಷೆ, ಪುಟ-೩೦, ೨೦೦೭

* * *

ಯಾವುದೇ ಒಂದು ವಿಷಯವನ್ನು ಕುರಿತು ಮನುಷ್ಯನಲ್ಲಿ ದ್ವಂದ್ವಗಳಿರುವುದು ಸಹಜ. ಅದರಲ್ಲೂ ಹೆಣ್ಣಿನ ಬದುಕಿನಲ್ಲಿ ಇದು ಇನ್ನು ಹೆಚ್ಚು. ಆ ದ್ವಂದ್ವಗಳನ್ನು ಏಕೀಭವಿಸಿಕೊಂಡು ಬದುಕಬೇಕಾಗುತ್ತದೆ. ವೈರಾಗ್ಯನಿಧಿಯಾದ ಅಕ್ಕಮಹಾದೇವಿಯು ಸಹ ದ್ವಂದ್ವಗಳನ್ನು ಸಮನ್ವಯಗೊಳಿಸಿಕೊಂಡೆ ಬದುಕಿದಳು. ಇದಕ್ಕೆ ಕೊರವಂಜಿಯೂ ಹೊರತಲ್ಲ. ಜೀವನದಲ್ಲಿನ ದ್ವಂದ್ವಗಳನ್ನು ಪರಸ್ಪರ ವಿರೋಧಾಭಾಸಗಳನ್ನು ಯಾವ ರೀತಿ ಸಮನ್ವಯಗೊಳಿಸಿಕೊಂಡು ಕೊರವಂಜಿ ತನ್ನ ಬದುಕನ್ನು ಕಟ್ಟಿಕೊಂಡಳು ಎಂಬುದನ್ನು ವಿವಿಧ ನೆಲೆಯಲ್ಲಿ ನೋಡುವ ಪ್ರಯತ್ನವನ್ನು ನಾನಿಲ್ಲಿ ಮಾಡಿದ್ದೇನೆ.

ಕೊರವಂಜಿ ಕೇವಲ ಕುಟುಂಬಕ್ಕೆ ಮಾತ್ರ ಸೀಮಿತವಾದವಳಲ್ಲ. ಇವಳು ಬದುಕಿಗಾಗಿ ಹೊರಬಂದವಳು. ಇಂಥವಳಿಗೆ ಲಿಂಗ, ಜಾತಿ, ಕುಟುಂಬ, ಸಮಾಜ, ಧರ್ಮದ ಬಗೆಗೆ ದ್ವಂದ್ವಗಳಿರುವುದು ಸಹಜ. ಈ ಎಲ್ಲ ದ್ವಂದ್ವಗಳನ್ನು ಸಮೀಕರಿಸಿಕೊಂಡು ಬದುಕುವ ಜಾಣ್ಮೆ, ತಾಳ್ಮೆ, ತಿಳುವಳಿಕೆ ಕೊರವಂಜಿಯದು.

### ೭.೧. ಸ್ತ್ರೀತ್ವದ ಬಗೆಗಿನ ದ್ವಂದ್ವಗಳು

ಹೆಣ್ಣು ಒಳಗೂ ಹೊರಗೂ ಎದುರಿಸುವ ದ್ವಂದ್ವಗಳು, ಸವಾಲುಗಳು ಹಲವು. ಕೊರವಂಜಿ ಸ್ತ್ರೀತ್ವವನ್ನು ನಿರಾಕರಿಸುತ್ತಲೇ, ಸ್ತ್ರೀತ್ವವನ್ನು ಪ್ರೀತಿಸುವ, ಸ್ತ್ರೀಯ ಭಾವನೆಗಳನ್ನು ಆರಾಧಿಸುವ ರೀತಿಯವಳು.

ಪರಂಪರೆಯಲ್ಲಿ ಸ್ತ್ರೀಯರನ್ನು ಯಾವಾಗಲೂ ಕೊನೆಯ ಸ್ಥಾನದಲ್ಲಿಯೇ ನೋಡುವ ಮನೋಭಾವ ಬೆಳೆದು ಬಂದಿದೆ. ಅವಳ ದೇಹ ಮಾತ್ರ ಗ್ರಹಿಕೆಯಿಂದ ಕೀಳಾಗಿ ಕಾಣುವುದು, ಅಪಮಾನಿಸುವುದು, ಅವಮಾನಿಸುವುದು ನಡೆಯುತ್ತಲೇ ಇದೆ. ಮಹಿಳೆ ಕೆಳಜಾತಿಯವಳಾದಾಗ, ಕಲಾವಿದೆಯಾದಾಗ ಅವಳನ್ನು ಮತ್ತಷ್ಟು ಕೀಳಾಗಿ ಕಾಣಲಾಗುತ್ತದೆ. ಜೊತೆಗೆ ಅವಳು ಬದುಕು

ರೂಪಿಸಿಕೊಳ್ಳುವುದಕ್ಕಾಗಿ ಮನೆ ಬಿಟ್ಟು ಹೊರಬಂದಾಗ ಸಮಾಜ ಅವಳನ್ನು ಸಾರ್ವಜನಿಕ ಸ್ವತ್ತೆಂದೆ ಭಾವಿಸುತ್ತದೆ. ಲೈಂಗಿಕವಾಗಿ ಅವಳನ್ನು ಬಳಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತದೆ. ಇಂಥ ಸಂಗತಿಗಳಿಂದಾಗಿ ಕ್ಷಣ ಕ್ಷಣಕ್ಕೂ ಅವಳು ಮಾನಸಿಕವಾಗಿ, ದೈಹಿಕವಾಗಿ ನೋವು ಅವಮಾನಗಳನ್ನು ಅನುಭವಿಸುತ್ತಾಳೆ. ಇದರಿಂದ ನಾನು ಹೆಣ್ಣಾಗಿ ಹುಟ್ಟಿದ್ದೆ ತಪ್ಪು ಎಂದು ಶಪಿಸುವ ಕ್ಷಣಗಳೂ ಇರುತ್ತವೆ. ಇದರಿಂದ ಬೇಸತ್ತ ಅವಳು ಹೆಣ್ಣಿನ ಬಗೆಗಿನ ಭಾವನೆಯಿಂದ ಜಿಗುಪ್ಸೆಗೊಂಡೋ ಅಥವಾ ಹೆಣ್ಣಾಗಿ ಹುಟ್ಟಿದ್ದಕ್ಕೆ ತನ್ನನ್ನು ಕೀಳಾಗಿ ಕಾಣುವ ಸಮಾಜದಿಂದ ತನ್ನನ್ನು ರಕ್ಷಿಸಿಕೊಳ್ಳುವ ಕಾರಣಕ್ಕೋ ಅವಳು ಒತ್ತಾಯಪೂರ್ವಕವಾಗಿ ತನ್ನ ಹೆಣ್ತನವನ್ನು ನಿರಾಕರಿಸುತ್ತಾಳೆ. ತನ್ನ ದೈಹಿಕ ಸ್ತ್ರೀತ್ವವನ್ನು ತ್ಯುಚ್ಛವಾಗಿ ಕಂಡು ತಾನು ಪುರುಷಳು ಎಂಬುವ ಭಾವನೆಯನ್ನು ತೋರುತ್ತಾಳೆ. ಈ ಪರಿವರ್ತನೆ ಸಂಸ್ಕೃತಿ ಅಧ್ಯಯನದ ದೃಷ್ಟಿಯಿಂದ ಮಹತ್ವದ್ದು.

"ಗಂಡನೆನಗಿಲ್ಲವೆ ಹೆಂಡಿರನಾಳುವೆ
ಗಂಡುಗಾದೇವಿ ನಾರಾಯಣಿಯೆಂಬೋರು ಯೆನ್ನಾ
ಥಂಡ ಥಂಡಾ ದೇವ ದೈತ್ಯರ ಕೈಯಾ ಪೂಜಾ
ಗೊಂಡ ಹೆಂಗಳ ಗಾಡಿಕಾರ್ತಿ ಕೊರವಂಜಿ ನಾನು
ಬೊಮ್ಮ ನಮ್ಮನೆಯ ಹೆಮ್ಮಗದ್ದಿರಿಯಾನು
ಹಮ್ಮಿನ ಜೀತದಾಳು ಹನುಮಾಗೆ ನವವಿಧ
ಹಮ್ಮಿಣಿ ಹಣಕೊಟ್ಟ ಹೊಂದಿಸಿದವನು
ಉಮಾಪತಿಯು ಎನಗೆ ಮೊಮ್ಮಗನೇ ಮೋಹಿನಿ"[೧]

ಹೀಗೆ ಕೊರವಂಜಿ ತನ್ನ ಜೈವಿಕ ಸ್ತ್ರೀತ್ವವನ್ನು ನೀಗಿಸಿಕೊಳ್ಳಲು ಬಯಸುತ್ತಾಳೆ. ತನ್ನನ್ನು ಗಂಡಾಗಿ ಆರೋಪಿಸಿಕೊಳ್ಳುತ್ತಾಳೆ. ತನ್ನನ್ನು ಕೀಳಾಗಿ ಕಂಡವರನ್ನು ತನ್ನ ಸ್ತ್ರಿತ್ವದ ಮೇಲೆ ಆಕ್ರಮಣ ಮಾಡಿದವರನ್ನು ನಾಶಪಡಿಸುವ ಪ್ರಭಲೆ ನಾನೆಂಬ ಧೋರಣೆ ಅವಳಲ್ಲಿದೆ. ಇಲ್ಲಿ ಅವಳು ನಿರಾಕರಿಸಲು ಹೊರಟಿರುವುದು ತನ್ನ ಅಬಲತೆಯನ್ನು, ತನ್ನ ಸಹನೆ, ತಾಳ್ಮೆ, ಕರುಣೆ ಮುಂತಾದ ಧಾರಣೆಯ ಗುಣಗಳನ್ನಲ್ಲ. ಈ ಮೂಲಕ ಕೆಟ್ಟದ್ದು ನಡೆದಾಗ ತನ್ನ ದೈಹಿಕ ದೌರ್ಬಲ್ಯವನ್ನೂ ಮೀರಿ ತಾನು ಪ್ರಬಲಳಾಗುತ್ತೇನೆಂದು ತೋರಿಸುತ್ತಾಳೆ.

ಹೀಗೆ ಸ್ತ್ರೀತ್ವವನ್ನು ನಿರಾಕರಿಸಿದ ಕೊರವಂಜಿ ಮತ್ತೊಂದೆಡೆ ಸ್ತ್ರೀತ್ವವನ್ನು ಅಷ್ಟೇ ಆಪ್ತವಾಗಿ ಪ್ರೀತಿಸುತ್ತಾಳೆ. ಹೆಣ್ತನದ ಕಳವಳ, ತ್ಯಾಗ, ಕರುಣೆ, ಪೋಷಕತ್ವ ಗುಣಗಳನ್ನೆಲ್ಲ ಅನುಭವಿಸುತ್ತಾಳೆ.

"ಬೆನ್ನೂಳಿಹ ಬ್ಯಾಟಿಕಾರ ಶಿಶುವು ನಿನ್ನಾಸ್ಯ ನೋಡುತಲೆ
ಚನ್ನೆ ಕಾಡುತಲಿಹುದೇ ಚಲಿಸದೆ ಚೆಣ್ಣನ್ನ, ಸಂತೈಸಲೆ
ಅನ್ಯ ಬಾಲರ ತೆರದಿ ಅಲ್ಲವೆ ಸಖಿ, ಅಮರಾದಿ ಮುನಿಗಣಂಗಳೇ
ಖಿನ್ನರಾದರು ಕೀರವಾಣೀ ಇವನ ಚೆನ್ನಾಟ ಬಹುವೆಗ್ಗಳೇ"[೨]

ಹೀಗೆ ಕೊರವಂಜಿ ಇಲ್ಲಿ ಅವಳ ಕಂದನ ಚಿನ್ನಾಟವನ್ನು ನೋಡಿ ಆನಂದ ಪಡುತ್ತಾಳೆ. ಆತ ರಚ್ಚೆ ಹಿಡಿದು ಅತ್ತಾಗ ಸಂತೈಸುತ್ತಾಳೆ. ಈ ಮೂಲಕ ಅವಳು ತಾಯ್ತನವನ್ನು ಅನುಭವಿಸುತ್ತಾಳೆ. ಹೆಣ್ಣಾದಾಗ ಮಾತ್ರ ಅವಳು ಈ ಭಾವನೆಗಳನ್ನು, ಸುಖವನ್ನು ಅನುಭವಿಸಲು ಸಾಧ್ಯ. ಜೊತೆಗೆ ಅವಳು

"ಹೊಟ್ಟೆ ಕಂದನಾ ಪುಟ್ಟಸಿಂಗನಾ
ಮುಟ್ಟುವೇನೇ ಕೊರಳಾಣೆ"[೩]

ಎಂದು ಅವಳು ಹೊಟ್ಟೆಯ ಮಗು ಮತ್ತು ಪುಟ್ಟ ಮಗುವಿನ ಮೇಲೆ ಆಣೆಯಿಡುತ್ತಾಳೆ. ಇಲ್ಲಿರುವ ಹೊಟ್ಟೆಕಂದಾ ಅವಳು ಗರ್ಭಿಣಿ ಎಂಬುದನ್ನು ದಿಟಗೊಳಿಸುತ್ತದೆ. ಇಂಥಲ್ಲಿ ಅವಳು ದೈಹಿಕವಾಗಿಯೂ, ಭಾವನಾತ್ಮಕವಾಗಿಯೂ ಹೆಣ್ಣಾಗಿ ತೋರುತ್ತಾಳೆ.

ಕೊರವಂಜಿ ಒಂದುಕಡೆ ಸ್ತ್ರೀತ್ವವನ್ನೇ ನಿರಾಕರಿಸುತ್ತಾಳೆ. ಮತ್ತೊಂದುಕಡೆ ಸ್ತ್ರೀತ್ವದ ಎಲ್ಲ ಭಾವನೆಗಳನ್ನು ನಿರಾಳವಾಗಿ ಅನುಭವಿಸುತ್ತಾಳೆ. ಸಮಾಜದ ನಡುವಳಿಕೆ ಅವಳು ಸ್ತ್ರೀತ್ವವನ್ನು ನಿರಾಕರಿಸುವ ಹಾಗೆ ಮಾಡುತ್ತದೆ. ಒಂದೆಡೆ ದೈಹಿಕವಾಗಿ ಮತ್ತೊಂದೆಡೆ ಭಾವನಾತ್ಮಕವಾಗಿ ತನ್ನ ಹೆಣ್ತನದ ಭಾವನೆಗಳನ್ನು ವ್ಯಕ್ತಪಡಿಸುತ್ತಾಳೆ. ಅಕ್ಕ 'ದೇಹ ಅಮೇಧ್ಯದ ಮಡಿಕೆ' ಎಂದು ಹೇಳಿ ದೇಹವನ್ನು ನಿರಾಕರಿಸಿ, 'ಅಪ್ಪಿದರೆ ಅಸ್ತಿಗಳು ನುಗ್ಗಿನುರಿಯಾಗಬೇಕು ಹಾಗೆ ಎನ್ನ ಚೆನ್ನಮಲ್ಲಿಕಾರ್ಜುನನ ಸ್ನೇಹ' ಎಂದು ಭಾವನಾತ್ಮಕವಾಗಿ ಅವನನ್ನು ಅನುಭವಿಸುವಂತೆ ಕೊರವಂಜಿಯೂ ಸಹ ಹೆಣ್ಣಿನ ದೈಹಿಕ ಚಹರೆಗಳನ್ನು ನಿರಾಕರಿಸಿ ಹೆಣ್ಣಿನ ಭಾವನೆಗಳನ್ನು ಅನುಭವಿಸುತ್ತಾಳೆ ಎಂಬುದು ಗಮನಾರ್ಹ.

## ೭.೨. ಕೌಟುಂಬಿಕ ದ್ವಂದ್ವಗಳು

ಕುಟುಂಬದಲ್ಲಿ ವ್ಯಕ್ತಿ ವ್ಯಕ್ತಿಗಳ ನಡುವೆ ಭಿನ್ನಾಭಿಪ್ರಾಯಗಳಿರುವುದು ಸಹಜ. ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯ ಭಾವನೆ ಅಭಿಪ್ರಾಯಗಳಿಗೆ ಗೌರವ ಕೊಡಬೇಕಾಗುತ್ತದೆ. ಆದರೆ ಕುಟುಂಬದಲ್ಲಿ ಮಹಿಳೆಯರು ತಮಗೆ ಒಪ್ಪಿತವಾಗದಿದ್ದರೂ ಇತರರ ಎಲ್ಲ ಅಭಿಪ್ರಾಯಗಳಿಗೆ ಬೆಲೆ ಕೊಡಬೇಕಾಗುತ್ತದೆ. ಆ ಮಹಿಳೆ ಮನೆಯ ಸೊಸೆ, ಮನೆಯ ಕಿರಿಯಳು ಆದಾಗ ಅವಳಿಗೆ ಮತ್ತಷ್ಟು ಭಾರಗಳು ಹೆಚ್ಚು. ಅವಳೆಲ್ಲರ ಅಭಿಪ್ರಾಯಗಳನ್ನು ಯಥಾವತ್ತಾಗಿ ಪಾಲಿಸಬೇಕಾಗುತ್ತದೆ. ಅವರು ಹೇಳಿದಂತೆ ನಡೆಯಬೇಕು. ಹೀಗೆ ಮಾಡದಿದ್ದರೆ ಕುಟುಂಬದಿಂದ ಹೊರಹಾಕುವ ಪ್ರಸಂಗಗಳು ಇಲ್ಲದಿಲ್ಲ. ಹೀಗಾಗಿ ಮಹಿಳೆ ಸದಾ ಕುಟುಂಬಕ್ಕೆ ನಿಷ್ಠಳಾಗಿ ನಡೆಯುತ್ತಾಳೆ. ಕುಟುಂಬದವರ ಕಿರಿ ಕಿರಿ ಮಿತಿಮೀರಿದಾಗ ಕುಟುಂಬದವರ ಬಗ್ಗೆ ನಿರಾಸಕ್ತಿಯನ್ನು ತಾಳುತ್ತಾ ಸಿಡಿದೇಳುತ್ತಾಳೆ. ಅವರ ಕೀಳು ಗುಣಗಳನ್ನು ಕುರಿತು ಆಪ್ತರಲ್ಲಿ ಹೇಳಿಕೊಳ್ಳುತ್ತಾಳೆ.

"ಸಾಗಿಸಿ ಕಳುಹೆನ್ನ ಸವತಿ ಒಳ್ಳೆವಳಲ್ಲ
ಹೋಗಿ ಬರುತೇನೆ ನಿನಗೆ ಮೆಚ್ಚಿ ಹಾರೈಸಿ

ಹಿತದವರ್‍ಯಾರಿಲ್ಲ ಎನಗಿಂತ ಹಿರಿಯರು ಸತಿಯರು ಕೊರಮಗುಂಟು
ಮತಿವಂತ ನೀ ಎನ್ನ ಮನ್ನಿಸಿ ಕಳುಹವ್ವ ಪತಿಯಾಜ್ಞೆಗ್ಳಗಳುಂಟು
ಬಹಳ ಹೊತ್ತಾಯಿತು ಬೈದಾಳು ಸವತಿಯು ಆಳುವ ಕೊರಮ ಹೀನ
ಬಾಲನ ನೆತ್ತಿಗೆ ಎಣ್ಣೆಯನೆರೆಯವ್ವ ವೀಳ್ಯವ ಕೊಡುಯೆನಗೆ"[೪]

ಎಂದು ಹೇಳಿಕೊಳ್ಳುತ್ತಾಳೆ. ಹೀಗೆ ತಾನು ಅನುಭವಿಸುವ ಕಷ್ಟಗಳನ್ನು ಬಿಚ್ಚಿಡುತ್ತಾ, ತನ್ನ ಕುಟುಂಬದವರಿಂದ ತಾನು ನೋವು ಅನುಭವಿಸುವ ಜೊತೆಗೆ, ಮನೆ ಬಿಟ್ಟು ಹೊರಬಂದಿರುವುದರಿಂದ ತನ್ನ ಬಗ್ಗೆ ತನ್ನ ಕುಟುಂಬದವರಲ್ಲಿ ಅನುಮಾನವಿರುವ ಭಾವನೆ ಅವಳಲ್ಲಿದೆ. ಹೀಗಾಗಿ ತನ್ನ ಕುಟುಂಬದ ಬಗ್ಗೆ ಬೇಸರದಿಂದಲೇ ಹೇಳುತ್ತಾಳೆ.

ಹೀಗೆ ಕೊರವಂಜಿ ತನ್ನ ಕುಟುಂಬದವರ ಬಗೆಗೆ ಜಿಗುಪ್ಸೆ, ಬೇಸರ ಹೊಂದಿದ್ದರು, ತನ್ನ ಕುಟುಂಬದವರಿಂದ ಒಂದಿಷ್ಟು ಪ್ರೀತಿ ಸಿಕ್ಕರೆ ಸಾಕು, ಅದನ್ನು ಮನಃಪೂರ್ತಿ ತುಂಬಿಕೊಳ್ಳುತ್ತಾಳೆ. ಅವರನ್ನು ಕೊಂಡಾಡುತ್ತಾಳೆ. ಅಂತಹ ಕುಟುಂಬವನ್ನು ಕುರಿತು

"ಹಾಲು ಹಳ್ಳದೊಳ್ಗೆನ ಮನೆಯುಂಟು ಅನಂತಾ
ಶಾಲೆಯೊಳಗೆ ಈಡುಂಟು ಸಟಿಗಳಲ್ಲಾ
ಮ್ಯಾಲೆ ಶ್ರೀಭಾಗದೊಳು ಅಳವಿಲ್ಲದರಮನೆ
ಪಾಲು ಬೇಡುವಂಥಾ ದಾಯಾದ್ಯರೆನಗಿಲ್ಲಾ
ನಿದ್ರೆ ಬಂದಲ್ಲಿ ಯೋಗ-ನಿದ್ರೆಯ ಮಾಡುವೆ
ಸುದ್ದಿಯ ತರಲೊಬ್ಬ ಉದ್ಧವ ಎನಗುಂಟು
ಕದ್ದು ಮಾಜುವಳಲ್ಲಾ ಕರದಾವಿರಲಿ ಉಂಟೆ
ಸಿದ್ಧಿಸಿ ಕೇಳೆನ್ನಾ, ಸೊಲ್ಲಾ ಹೇಳುವೆನಲ್ಲಾ"[೫]

ಎಂದು ತನ್ನ ಸುಂದರ ಸಂಸಾರ, ತನಗ್ಯಾರು ಹಗೆಗಳಿಲ್ಲದ ಬಗ್ಗೆ ಆತ್ಮವಿಶ್ವಾಸದಿಂದ ಹೇಳುತ್ತಾಳೆ. ತನ್ನ ಕುಟುಂಬದವರು ತೋರಿಸುವ ಪ್ರೀತಿಯನ್ನು ಕುರಿತು

"ನಮ್ಮತ್ತೆ ನನಮ್ಯಾಲೆ ನೋಡು ಬಿದ್ದು ಸಾಯಿತಾಳ ಬಿದ್ದು ಸಾಯಿತಾಳ
ಇನ್ನಾ ಕೋಳಿ ಕೂಗಿದಾಗ ಎಮ್ಮಾ ನಮ್ಮ ಅತ್ತೆ ಎಮ್ಮಾ ನಮ್ಮ ಅತ್ತೆ ಎಮ್ಮಾ
ನೀರು ಕಾಸುತಾಳಾ
ಕೂದಲು ಮತ್ತಿವು ನೋಡು ಎಂಗಾ ಪೋಣಿಸ್ಯಾಳ ಎಂಗಾ ಪೋಣಿಸ್ಯಾಳ
ನನಗೆ ಪೋಣಿಸಕೆಂಬಾಕ ಬರಾದಿಲ್ಲ
ಇನ್ನಾ ಕೂದಲಿಗೆ ಪೋಣಿಸ್ಯಾಳೆ ನೋಡು"[೬]

ಎಂದು ತನ್ನ ಮೇಲೆ ಪ್ರೀತಿ ತೋರಿಸುವ ಕುಟುಂಬ ಸದಸ್ಯರ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುತ್ತಾಳೆ. ಅಂತಹ ಕುಟುಂಬದ ಸದಸ್ಯರನ್ನು ಪ್ರೀತಿಯಿಂದ ಕಂಡು ಆರಾಧಿಸುತ್ತಾಳೆ. ಅವರಿಗಾಗಿ ಎಂಥ ತ್ಯಾಗಕ್ಕೂ ಸಿದ್ಧಳಾಗುತ್ತಾಳೆ.

ಇನ್ನು ಗಂಡ ಸಹ ಅವಳ ಮೇಲೆ ಅಧಿಕಾರ ಚಲಾಯಿಸದ, ಅನುಮಾನ ಪಡದ, ಸಂಗತಿ ಇಲ್ಲವೇ ಇಲ್ಲ, ಅವಳು ದುಡಿಯಲು ಹೊರ ಹೋಗಿ ತಡ ಮಾಡಿ ಬಂದಾಗ ಗಂಡ ಅನುಮಾನ ಪಡುತ್ತಾನೆ. ಸಂದೇಹದಿಂದ ನೋಡುತ್ತಾನೆ. ಶಿಕ್ಷೆಯನ್ನು ಕೊಡುತ್ತಾನೆ. ಇದರ ಬಗ್ಗೆ ಅವಳಿಗೆ ಬೇಸರವಿದೆ. ಅದಕ್ಕಾಗಿ ಅವಳು ಹೊತ್ತು ಮೀರಿ ಎಲ್ಲಿಯೂ ನಿಲ್ಲಳು.

"ನಾನೇನು ಇದ್ದಾರೆ
ನಮ್ಮ ಗಂಡ ಇರಲ್ಲ
ಕೆಂಡ ಹಾಕ್ಯಾರ ಕೈಯೊಳಗ
ಕೆಂಡೇನ ಹಾಕ್ಯಾರೆ ಕೈಯೊಳಗಿನ್ನ
ಬಂಡು ಮಾಡ್ಯಾನೆ ಮನೆ ಕೊರವ"[೭]

ಹೀಗೆ ಕಷ್ಟಕೊಡುವ ಅವನ ಬಗೆಗೆ ಜಿಗುಪ್ಸೆ ತೋರುತ್ತಾಳೆ. ಆದರೆ ಅವನ ಮೇಲಿಟ್ಟಿರುವ ಪ್ರೀತಿ ಮಾತ್ರ ಕಡಿಮೆಯಾಗದು. ಮತ್ತೆ ಗಂಡನನ್ನು ದೇವರಾಗಿಯೇ ಗೌರವಿಸುತ್ತಾಳೆ.

"ಪತಿಯು ಪರದೇವತೆಯು ಪತಿಯಿಂದ ನೈಜಸುಖಾ
ಪತಿಯಿಂದ ಮುತ್ತೈದೆತನ ಪತಿಯಿಂದ ಸೌಭಾಗ್ಯ
ಪತಿಯಿಂದಾವಾತ್ಮಸುಖ ಪತಿಯಿಂದ ಶೃಂಗಾರ
ಪತಿಯೆ ಗತಿ ಜೀವಕ್ಕೆ ಪತಿಯೆ ಹಿತ ದೇಹಕ್ಕೆ
ಪತಿಯಿಂದಲೇ ಪ್ರಜಾವಂತಿ, ಸೀಮಂತಿ, ಶೃಂಗಾರವತಿ"[೮]

ಎನ್ನುತ್ತಾಳೆ. ಹಾಗೆಯೇ ಸೂಳೆ ಸಂಗ ಮಾಡಿದ ಗಂಡನನ್ನು ಸೂಳೆಯಿಂದ ಬಿಡಿಸಿಕೊಂಡು ಬಂದು, ನಿನ್ನ ತಪ್ಪೇನಿಲ್ಲ ಮಾರಾಯ' ಎನ್ನುತ್ತಾಳೆ. ಕೊರವಂಜಿಗೆ ಪತಿಯ ಅನುಮಾನದ ಗುಣ, ಶಿಕ್ಷೆ ಕೊಡುವ ಗುಣದ ಬಗ್ಗೆ ಜಿಗುಪ್ಸೆ ಇದ್ದರೂ, ಅವನನ್ನು ತೊರೆಯುವ ಭಾವ ಅವಳದಲ್ಲ. ಅಕ್ಕಮಹಾದೇವಿ 'ಲೋಕದ ಗಂಡಂದಿರನೊಯ್ದು ಒಲೆಯೊಳಿಗಿಕ್ಕು' ಎಂದು ಗಂಡನನ್ನು ನಿರಾಕರಿಸಿದರೂ 'ಮಿಕ್ಕಿಮೀರಿ ಹೋಹನ ಕಂಡು ಬೆಂಬತ್ತಿ ಕೈವಿಡಿದೆನವ್ವಾ' ಎಂದು ಚೆನ್ನಮಲ್ಲಿಕಾರ್ಜುನನನ್ನು ಹಿಂಬಾಲಿಸಿದಂತೆ ಕೊರವಂಜಿ ಗಂಡನ ಅತಿಯಾದ ಲೌಕಿಕ ಭಾವನೆಗಳನ್ನು ನಿರಾಕರಿಸುತ್ತಾಳೆ. ಆದರೆ ಆತನ ಬಗೆಗಿನ ಪ್ರೀತಿ ಮಾತ್ರ ತೊರೆಯುವುದಿಲ್ಲ.

ತಾಯಿ ಯಾವತ್ತು ತನ್ನ ಮಗುವಿನ ಬಗೆಗೆ ಬೇಸರ ಪಟ್ಟಕೊಳ್ಳುವುದಿಲ್ಲ. ಆತ ಎಷ್ಟೇ ರಚ್ಚೆ ಹಿಡಿದರೂ ಸಮಾಧಾನ ಮಾಡುತ್ತಾಳೆ. ಇದಕ್ಕೆ ಕೊರವಂಜಿಯು ಹೊರತಲ್ಲ. ಆದರೆ ಆ ಮಗು ತನ್ನ ಕೆಲಸಕ್ಕೆ ಧಕ್ಕೆ ತಂದಾಗ ಮಾತ್ರ ಅದರ ಬಗ್ಗೆ ಅಸಹನೆ ವ್ಯಕ್ತಪಡಿಸುತ್ತಾಳೆ.

ಕಬ್ಬುಕೈಯಲ್ಲಿ ಕೊಟ್ಟಾರೆ ಕಾರ್ಮುಕವ ಮಾಡುವನು ಕೈ
ಗಬ್ಬಿದಾ ಕುಸುಮಗಳ ಬಾಣಯೆಂದ್ಹೂಡೆವಾನು
ತಬ್ಬಿಬ್ಬು ನುಡಿಯಲ್ಲ ಶುಕ ವಾಬೆಯೆಂದೇರುವನು ಇಂ
ತಬ್ಬರದ ಕಂದ ಎನ್ನ ಗರ್ಭದಲ್ಹುಟ್ಟಿದಾನೇ"[೯]

ಎಂದು ತನ್ನ ಮಗ ಹೇಗೆ ಕಾಡುವೆನೆಂದು ಅಸಹನೆ ತೋರಿದರೂ "ಎನ್ನ ಕೂಸಿಗೆ ಒಂದಿಷ್ಟು ಅನ್ನವನ್ನಿಕ್ಕವ"[೧೦] ಎಂದು ಮತ್ತೆ ಕಾಡುವ ತನ್ನ ಮಗುವಿಗೆ ನೀಡಿಸಿಕೊಂಡು ಆತನನ್ನು ಸಮಾಧಾನ ಪಡಿಸುತ್ತಾಳೆ.

ಕೊರವಂಜಿ ಒಂದು ಕಡೆ ಕುಟುಂಬದ ವರ್ತನೆಯಿಂದ ಬೇಸತ್ತಿದ್ದರೆ, ಮತ್ತೊಂದು ಕಡೆ ಕುಟುಂಬದ ಬಗ್ಗೆ ಪ್ರೀತಿ ಕಾಳಜಿಗಳನ್ನು ಹೊಂದಿರುತ್ತಾಳೆ. ಕುಟುಂಬದ ಬಗೆಗಿನ ಪ್ರೀತಿಯಿಂದ, ಕಾಳಜಿಯಿಂದ ತನಗೆ ಎಷ್ಟೇ ಕಷ್ಟಗಳು ಬಂದರೂ, ಅವನ್ನೆಲ್ಲ ಬಿಡಿಸಿಕೊಂಡು ಹೋಗುವ ಧೋರಣೆ ಅವಳದು. ಸದಾ ಕುಟುಂಬದೊಳಗಿದ್ದು ತೊಂದರೆಗಳನ್ನು ನೀಗಿಕೊಳ್ಳುವ ಗುಣ ಅವಳದು. ಅಲ್ಲಿ ತೊಂದರೆಗಳಾದಾಗ ಕುಟುಂಬದ ಬಗ್ಗೆ ಪರಸ್ಪರ ವಿರೋಧಾಭಾಸಗಳಾಗುವುದು ಸಹಜ. ಆದರೆ ಅವನ್ನೆಲ್ಲ ಸಮನ್ವಯಗೊಳಿಸಿಕೊಂಡು ಇವಳು ತನ್ನ ಕುಟುಂಬವನ್ನು ರಕ್ಷಣೆ ಮಾಡಿಕೊಳ್ಳುತ್ತಾಳೆ.

### ೭.೩. ಜಾತಿಯ ಬಗೆಗಿನ ದ್ವಂದ್ವ

ಸಮಾಜದಲ್ಲಿ ಮೇಲ್ಜಾತಿಯವರು ಕೆಳಜಾತಿಯವರ ಬಗ್ಗೆ ಅಸಡ್ಡೆಯನ್ನು ಬೆಳೆಸಿಕೊಂಡಿದ್ದಾರೆ. ಅವರಿರುವುದು ಕೇವಲ ತಮ್ಮ ಸೇವೆಗೆ ಎಂಬ ಭಾವನೆ ಅವರದು. ಇದಕ್ಕೆ ಕೊರವಂಜಿಯು ಹೊರತಲ್ಲ ತನ್ನ ವ್ಯಾಪಾರಕ್ಕಾಗಿ, ಉದ್ಯೋಗಕ್ಕಾಗಿ ಹೊರಹೋದ ಇವಳನ್ನು ಜಾತಿಯಿಂದ ಕೀಳಾಗಿ ಕಂಡಾಗ ರೋಸಿ ಇವಳು ತನ್ನ ಅಪಮಾನಕ್ಕೆ ತನ್ನ ಜಾತಿಯೇ ಕಾರಣವಲ್ಲವೇ ಎಂದು ತನ್ನ ಜಾತಿಯ ಬಗೆಗೆ ಜಿಗುಪ್ಸೆ ಬೆಳೆಸಿಕೊಳ್ಳುತ್ತಾಳೆ. ಹಾಗೆಯೇ ತನ್ನ ಜಾತಿ ಕನಿಷ್ಠವಲ್ಲವೆಂದು ಸಮರ್ಥಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಾಳೆ.

ರಾಣಿಯೊಬ್ಬಳು ತನ್ನನ್ನು ಕಣಿ ಕೇಳಲು ಕರೆದಾಗ ರಾಣಿ ತನ್ನನ್ನು ಕರೆಯಲು ಸಾಧ್ಯವಿಲ್ಲವೆಂದು ಭಾವಿಸಿ

'ಯಾಕೆ ಕರೆದಳು ಎನ್ನ ಲೋಕನಾಥನ ರಾಣಿ
ಆಕೆ ಸೌಭಾಗ್ಯದ ಒಡವಿ
ಹುಟ್ಟ ನಾ ಬಡವಿ
ಎನ್ನ ವಸ್ತ್ರವ ನೋಡಿರಿ, ಎನ್ನ ಕುಪ್ಪಸ ನೋಡಿ
ಎನ್ನ ಒಡವೆಯ ನೋಡಿರಿ
ಮಾತನಾಡಿರಿ
ಅನ್ನ ಹೀನಳು ನಾನು ಘನ್ನ ರಾಜನರಾಣಿ
ಎನ್ನ ಕರಿದಾಳೆಂಬುದು
ಅಪಹಾಸ್ಯವಿದು
ಚಿಕ್ಕಪ್ರಾಯದದರೆ ಚಕ್ಕಂದವೆ ನಿಮಗಿದು
ನಕ್ಕು ಮಾತಾಡುವಿರಾ ಬಂಡು
ಮುದುಕಿಯಾ ಕಂಡು"[೧೧]

ಕೊರವರಾದ ನಮ್ಮನ್ನು ಕೀಳಾಗಿ ಕಾಣುವುದರಿಂದ ಅವಳು ನಮ್ಮನ್ನು ಕರೆದಿರುವುದು ಅಸಾಧ್ಯ. ಹಾಗೆ ಕಣಿ ಕೇಳುವಾಗ ತನ್ನನ್ನು ಮುಟ್ಟಿ ಕಣಿ ಕೇಳಲು ಹಿಂಜರಿಯುವ ರುಕ್ಮಿಣಿಯನ್ನು "ಅಂಟಾದೆ ಮುಂಟಾದೆ ಕಣಿ ಹೇಳುವುದಿಲ್ಲ"[೧೨] ಎಂದು ಕಣಿ ಹೇಳಲು ನಿರಾಕರಿಸುತ್ತಾಳೆ. ಮಾಂಸಾಹಾರ ತಿನ್ನುವವರೆಂದು ಅವರನ್ನು ಕೀಳಾಗಿ ಕಂಡಾಗ ಕೊರವಂಜಿ

"ಬದನೆಕಾಯಿದಾಗ ಹುಳಬಿದ್ದರೆ ನೀನು ತಿಂಬಾದಿಲ್ಲಾ ಆಹಾ
ಆ ಬೆಂಡೆಕಾಯಿದಾಗ ಹುಳಿಬಿದ್ದರೆ ನೀನು ತಿಂಬಾದಿಲ್ಲಾ ಆಹಾ
ಒಂದನ್ನ ಬಿಳಾದಿಲ್ಲಾ ವರುಷಕ್ಕಾ ಒಂದು ಸರ್ತಿ ಅನ್ನಾ
ಒಂದು ಹುಳಕನ್ನಾ ಬೀಳದಿಲ್ಲಾ
ಒಂದು ನೊಣ ಅನ್ನ ಬೀಳಾದಿಲ್ಲಾ ಆಹಾ"[೧೩]

ಎಂದು ನೀವು ಸಹ ಮಾಂಸಾಹಾರ ತಿಂದಿದ್ದೀರಿ. ನೀವು ಕನಿಷ್ಟರಲ್ಲವೇ ಎಂದೇ ಪ್ರಶ್ನಿಸುತ್ತಾಳೆ. ತನ್ನ ಜಾತಿಯನ್ನು ಕೀಳಾಗಿ ಕಾಣುವುದರ ಬಗೆಗೆ ಅವಳಿಗೆ ನೋವಿದೆ.

ಹಾಗೆಯೇ ಸಮಸ್ಯೆಯಲ್ಲಿರುವವರ ಸಮಸ್ಯೆ ನಿವಾರಿಸುವ ಶಕ್ತಿ ತನ್ನಲ್ಲಿರುವುದರಿಂದ ತನ್ನ ಬಗ್ಗೆ ಹೆಮ್ಮಯು ಅವಳಲ್ಲಿದೆ. ನನ್ನದು ಪರೋಪಕಾರ ಕಾರ್ಯ. ಇದು ಎಲ್ಲರಿಗೂ ಸಾಧ್ಯವಿಲ್ಲ. ದೇವಾನುದೇವತೆಗಳ ಸಮಸ್ಯೆಯನ್ನು ಬಿಡಿಸಿದವಳು ನಾನು ಎಂಬ ಹೆಮ್ಮೆ ಅವಳಲ್ಲಿದೆ.

"ಹಿಂದೆ ನಾರದ ಸ್ವಯಂವರದಂದು ರುಕ್ಮಿಣಿಗೆ ಕೊರವ್ಯಾಗಿ
ಬಂದು ಹೇಳಿದೊಂದೇ ಮಾತನೂ ಸತ್ಯಮಾಡಿದೆ
ಬಂಧನದೊಳ ದೇವಕಿಗೆ ಕಂದನುತ್ಕೃಷ್ಟವಾ ಪೇಳ
ಬಂದ ಬ್ರಹ್ಮಕೊರವಂಜಿಗೆ ಬೆನ್ನಿಲೀ ಇದ್ದೆ"[೧೪]

ಎಂದು ತಾನು ಎಂಥೆಂಥವರ ಸಮಸ್ಯೆ ಪರಿಹರಿಸಿರುವೆನೆಂದು ಹೇಳುತ್ತಾಳೆ. ಜೊತೆಗೆ

"ಇಪ್ಪಲಿಪ್ಪ ಕೊರವಿ ನಾನಲ್ಲ ಹೋಗಿ
ಬಪ್ಪೆ ಹದಿನಾಲ್ಕ ಲೋಕಕೆಲ್ಲ
ಛಪ್ಪನ್ನ ದೇಶಗಳ ಸುದ್ದೀನೆಲ್ಲ
ಬಪ್ಪುವ ಕಜ್ಜವ ಕೃಷ್ಣ ಬಲ್ಲ"[೧೫]

ಎಂದು ತಾನು ನಾಡಾಡಿ ಕೊರವಿ, ತನಗೆ ಎಲ್ಲ ದೇಶಗಳ ಮಾಹಿತಿ ಇದೆ. ಸೃಷ್ಟಿಯ ಜ್ಞಾನ ತನಗಿದೆ ಎಂದು ತಿಳಿಸುತ್ತಾಳೆ. ಒಳಗೆ ಕುಳಿತವರಿಗಿಂತ ಊರೂರು ಅಲೆಯುವ ನಾನೇ ಜ್ಞಾನಿ ಎಂಬ ಧೋರಣೆ ಅವಳದು. ಜೊತೆಗೆ ತಾನು ಯಾವ ಯಾವ ವಿದ್ಯೆಯಲ್ಲಿ ಪರಿಣಿತಳು ಎಂಬುದನ್ನು ಹೇಳಿಕೊಳ್ಳುತ್ತಾಳೆ.

"ಸಾಮುದ್ರಿಕೆ ಬಲ್ಲೆ, ಶಕುನ ಹೇಳಲು ಬಲ್ಲೆ
ಪ್ರೇಮದಿಂ ಬಿಟ್ಟ ಗಂಡನ್ನ ಒಲಿಸಿಕೊಡಬಲ್ಲೆ

ವೃದ್ಧ ಯೌವ್ವನವ ಅಭಿವೃದ್ಧಿ ಮಾಡಿ ಕೊಡಬಲ್ಲೆ
ಪೊದ್ದು ತೀರಿಸುವ ಒಲಿಸುವ ಮದ್ದುಗಳ ಬಲ್ಲೆ"[೧೬]

ಎಂದು ತನ್ನ ಲೋಕಜ್ಞಾನದ ವಿಸ್ತಾರತೆಯನ್ನು ಹೇಳಿಕೊಳ್ಳುತ್ತಾಳೆ. ಆದರೆ ತಾನು ಕೊರವಿ ಆದ್ದರಿಂದಲೇ ತಾನು ದೇಶ ಸುತ್ತಲು ಎಲ್ಲರ ಸಮಸ್ಯೆ ಬಿಡಿಸಲು, ಅನೇಕ ಜ್ಞಾನಗಳನ್ನು ಪಡೆಯಲು ಸಾಧ್ಯವಾಯ್ತೆಂದು ಹೆಮ್ಮೆ ಪಡುತ್ತಾಳೆ. ಕೊರವಂಜಿತನ ಬಂಧನವೂ ಆದಂತೆ ಬಿಡುಗಡೆಯ ದಾರಿಯೂ ಆಗಿದ್ದು ಗಮನಾರ್ಹ.

## ೭.೪. ಬಡತನದ ಬಗೆಗಿನ ದ್ವಂದ್ವ

ಆರ್ಥಿಕವಾಗಿ ಕೆಳವರ್ಗದಲ್ಲಿರುವ ಕೊರವಂಜಿ ಅದರಿಂದಲೂ ಸಮಾಜದ ಅಸಡ್ಡೆಗೆ ಒಳಗಾಗುತ್ತಾಳೆ. ಇದರಿಂದ ಜನ ಇವಳನ್ನು ಬೇಡಿ ಹೊಟ್ಟೆ ಹೊರೆಯುವವಳು ಎಂದು ಕೀಳಾಗಿ ಕಾಣುತ್ತಾರೆ. ಕೊರವಂಜಿಯರು ನಮಗೆ ಸುಳ್ಳು ಭವಿಷ್ಯ ಹೇಳಿ ಹಣ ಕಿತ್ತುಕೊಂಡು ಹೋಗುತ್ತಾರೆಂದು ಜನ ಭಾವಿಸುತ್ತಾರೆ. ತಾನು ಬೇಡಿ ತಿನ್ನುವವಳು ಎಂಬುದನ್ನು ಇವಳು ನಿರಾಕರಿಸುತ್ತಾಳೆ. ಆದರೆ ಪ್ರೀತಿಯಿಂದ ಮಾತನಾಡಿದಾಗ ಮಾತ್ರ ಇವಳು ಅವರಿಂದ ಕೇಳಿ ಪಡೆಯುತ್ತಾಳೆ.

"ತಿರಿತೆಂಬೋ ಕೊರವಿ ನಾನಲ್ಲಾ, ತಿಂಡಿಯಾಸೆಯನಗಿಲ್ಲ
ಒರಲೊರಲಿ ಓರ್ವಳನು ವಸ್ತ್ರ ಬೇಡುವಳಲ್ಲಾ
ಖರಿಯ ಬಂದರೆ ಮಾತು ಕರೆದುಕೊಡು ತೋರಿದ್ದು"[೧೭]

ಎಂದು ತಾನು ಯಾವತ್ತು ಮೋಸ ಮಾಡಿ ಕಾಡಿ ಬೇಡಿ ತಿನ್ನುವವಳಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತಾಳೆ. ಹೀಗೆ ತಾನು ಹೊಟ್ಟೆ ಹಿಟ್ಟಿಗೆ ಬಂದವಳು ಅಲ್ಲ, ಸಟೆಯಾಡುವವಳು ಅಲ್ಲ ಎನ್ನುತ್ತಾಳೆ. ಆದರೆ ಕಣಿ ಹೇಳಿದ ನಂತರ ಅವರು ಆಪ್ತತೆ ತೋರಿದರೆ, ಪ್ರೀತಿಯಿಂದ ಮಾತನಾಡಿದರೆ, ಅವರಿಂದ ತನಗೆ ಬೇಕಾದ ವಸ್ತುಗಳನ್ನು ಬೇಡಿ ಪಡೆಯುತ್ತಾಳೆ.

'ಕೆಟ್ಟೋಗರಕೆ ಚಿತ್ತಿವಿಟ್ಟ ಕೊರವಿಯಲ್ಲ
ಮೃಷ್ಟಾನ್ನವ ನೀಡೆಯವ್ವ
ಶ್ರೇಷ್ಠಾದ ಶಾವಿಗೆ ಒಬ್ಬಟ್ಟು ಪಾಯಸ
ಹೊಟ್ಟೆ ತುಂಬ ನೀಡೆಯವ್ವ"[೧೮]

ಎಂದು ಅವರಿಂದ ವಸ್ತುಗಳನ್ನು ಬೇಡಿ ಪಡೆಯತ್ತಾಳೆ. ಅವಳಿಗೆ ಬಡತನವಿದೆ. ಆದರೆ ಅದಕ್ಕಾಗಿ ಕೆಲಸ ಮಾಡದೆ ಏನನ್ನು ಪಡೆಯುವವಳಲ್ಲ. ಅವಳು ಕೆಲಸ ಮಾಡಿದ ನಂತರ ಅವರು ಪ್ರೀತಿ ತೋರಿದಾಗ ಮಾತ್ರ ಅವರಿಂದ ಬೇಕಾದ ವಸ್ತುಗಳನ್ನು ಪಡೆಯುತ್ತಾಳೆ. ಬಡತನದ ಬಗೆಗೆ, ಬೇಡಿಕೊಳ್ಳುವ ಬಗೆಗೆ ಅವಳಲ್ಲಿ ದ್ವಂದ್ವವಿದೆ. ಗುಣ ನೋಡಿ ಅವರಿಂದ ಬೇಡುವ, ನಿರಾಕರಿಸುವ ಮೂಲಕ ಜೀವನ ಕಟ್ಟಿಕೊಳ್ಳುತ್ತಾಳೆ.

### ೭.೫. ದೈವತ್ವ ಹಾಗೂ ಮನುಷ್ಯತ್ವದ ಬಗೆಗಿನ ದ್ವಂದ್ವಗಳು

ಕೊರವಂಜಿಯಲ್ಲಿ ದೈವತ್ವ ಮತ್ತು ಮನುಷ್ಯತ್ವದ ಬಗೆಗೂ ವಿರೋಧಾಭಾಸಗಳಿರುವುದು ಗಮನಾರ್ಹ. ಕೊರವಂಜಿ ಒಮ್ಮೆ ತನ್ನನ್ನು ದೈವವೆಂದು ನಿರೂಪಿಸಿದರೆ, ಮತ್ತೊಮ್ಮೆ ಸಾಮಾನ್ಯ ಮನುಷ್ಯಳಾಗಿ ತೋರುತ್ತಾಳೆ. ಒಮ್ಮೆ ಇಡೀ ಸೃಷ್ಟಿ ಅರಿತವಳು, ದೇವರ ಬಲ್ಲವಳು, ದೈವ ಕುಟುಂಬದವಳೂ ಆಗಿ ತೋರುತ್ತಾಳೆ.

'ಅಂಕಟಿಂಕಿಣಿ ನಮಗೆ ಗೌರಮ್ಮಳಿಯಾಳು
ಆದೀಗಣೇಶ್ವರನ ಮಗಳಲ್ಲವೇನೆ?
ಸಿದ್ಧಲಿಂಗೇಶ್ವರನು ಚಿಕ್ಕಪ್ಪ ನನಗೇ"[೧೯]

ಎಂದು ತನ್ನನ್ನು ದೈವ ಪರಿವಾರದೊಂದಿಗೆ ಗುರುತಿಸಿಕೊಳ್ಳುತ್ತಾಳೆ. ಜೊತೆಗೆ ಬಹುತೇಕ ಕೊರವಂಜಿ ವಸ್ತುವುಳ್ಳ ಕೃತಿಗಳಲ್ಲಿ ಕೃಷ್ಣ, ನಾರದ, ಬ್ರಹ್ಮ, ಪಾರ್ವತಿ, ಗೌರಸಂದ್ರದ ಮಾರಮ್ಮ ಮುಂತಾದ ದೇವತೆಗಳೆಲ್ಲ ಕೊರವಂಜಿಯರಾಗಿ ಬರುತ್ತಾರೆ. ಹೀಗೆ ಕೊರವಂಜಿ ದೈವವಾಗಿ ನಿರೂಪಿತಳಾಗುತ್ತಾಳೆ. ಹಾಗೆ ದೇಹ ಸಂಬಂಧಿಯಾದ ಯಾವ ಆಸೆ ಆಕಾಂಕ್ಷೆಗಳಿಲ್ಲ ಎನ್ನುತ್ತಾಳೆ. ಹೀಗೆ ಹೇಳಿ ದೈವತ್ವಕ್ಕೆ ಏರಿದ ಅವಳು ಮತ್ತೆ

"ಹೊಟ್ಟೆ ಹಸಿಯಿತು ಕೈಮುಟ್ಟಿ ಅನ್ನವನಿಕ್ಕೆ
ಕಟ್ಟಾಣಿ ಮುತ್ತೆ ಕಾಮನ ಸಂಪನ್ನೆ
ಉಟ್ಟ ಸೀರೆಯ ತಾರೆ ಊರ ಉಂಬಳಿಗಳನು
ಬಿಟ್ಟವಳಲ್ಲ ನಿನಗೆ ಮಗನಾದ ಮೇಲೆ"[೨೦]

ಎನ್ನುವ ಮೂಲಕ ಮನುಷ್ಯ ಸಹಜ ಗುಣಗಳಾದ ಹಸಿವನ್ನು ಕುರಿತು ಹೇಳುತ್ತಾಳೆ. ಕೊರವಂಜಿ ಕಣಿ ಹೇಳುವಾಗ ದೈವತ್ವಕ್ಕೆ ಏರಿದವಳು, ಹೊಟ್ಟೆಯ ವಿಷಯ ಬಂದಾಗ ಸಾಮಾನ್ಯಳಾಗಿ ವರ್ತಿಸುತ್ತಾಳೆ. ಹೀಗೆ ಕೊರವಂಜಿ ದೈವತ್ವ ಮತ್ತು ಮನುಷ್ಯತ್ವದ ಬಗೆಗಿನ ದ್ವಂದ್ವಗಳನ್ನು ಸಮೀಕರಿಸಿಕೊಂಡು ಬದುಕುತ್ತಾಳೆ. ಒಂದು ರೀತಿ ವಾಸ್ತವ ಮತ್ತು ಅವಾಸ್ತವದ ಮುಖಾಮುಖಿಯಾಗಿ ಇದನ್ನು ನೋಡಬಹುದು.

### ೭.೬. ಧಾರ್ಮಿಕ ದ್ವಂದ್ವಗಳು

ಕೊರವಂಜಿಯಲ್ಲಿ ಧರ್ಮದ ಬಗೆಗೂ ವಿರೋಧ ಭಾವನೆಗಳನ್ನು ಕಾಣುತ್ತೇವೆ. ಒಮ್ಮೆ ಧರ್ಮದ ಬಗೆಗಿನ ಆಚರಣೆಗಳನ್ನು ನಿರಾಕರಿಸಲು ಹೇಳಿದರೆ ಮತ್ತೊಮ್ಮೆ ಧರ್ಮದ ಬಗೆಗಿನ ಆಚರಣೆಗಳನ್ನು ಅನುಸರಿಸಲು ಹೇಳುತ್ತಾಳೆ.

"ಏನೊಂದು ಬೇಕಾಗಿಲ್ಲ ನಿನ್ನ ಶತಕೋಟಿ ಲಿಂಗವನ್ನು ತೆಗೆಯಬೇಕಂತೆ
ಪ್ರಪಂಚಕ್ಕೆ ಬಿಡಬೇಕಂತೆ ಪ್ರಪಂಚದಲ್ಲಿ ಯಾವ ಮೃಗವಾದರು
ತೆಗೆದುಕೊಂಡು ಹೋಗಲಿ ಮುಂದೆ ಲಿಂಗಧಾರಣೆ ಬಿಡಬೇಕು"[೨೧]

ಎಂದು ಧಾರ್ಮಿಕ ಆಚರಣೆಗಳನ್ನು ಬಿಡಲು ಹೇಳುತ್ತಾಳೆ. ಆದರೆ ಅವಳೇ

"ಮಂಗಳವಾರನಾದರೂ ಸಂಚಾರಿಣಿ ಭಿಕ್ಷೆ ಮಾಡಬೇಕು
ಸುರಗಡಿಗೆ ತಲೆಮೇಲೆ ಹೊರಬೇಕು
ಭಕ್ತರು ಕೊಟ್ಟ ಪದಾರ್ಥ ನೈವೇಧ್ಯ ಮಾಡಬೇಕು"[೨೨]

ಎನ್ನುತ್ತಾಳೆ. ಇಲ್ಲಿ ಧಾರ್ಮಿಕ ಆಚರಣೆಯ ಬಗೆಗೂ ಅವಳಿಗೆ ದ್ವಂದ್ವಗಳಿವೆ. ಆಚರಣೆ ಬಿಡು, ಅನುಸರಿಸು ಎಂದು ಎರಡನ್ನು ಹೇಳುತ್ತಾಳೆ. ಇಲ್ಲಿ ಅವಳು ತಾನು ಪ್ರಚಾರ ಮಾಡುವ ಧರ್ಮದ ಆಚರಣೆ ಅನುಸರಿಸಲು ಹೇಳಿದರೆ, ವಿರೋಧಿ ಧರ್ಮದ ಆಚರಣೆಗಳನ್ನು ತೊರೆಯಲು ಹೇಳುತ್ತಾಳೆ.

ವಿಶೇಷವಾಗಿ ವೈದಿಕ ಮತವು ಕೊರವಂಜಿಯನ್ನು ಅನಾಮತ್ತಾಗಿ ಉನ್ನತೀಕರಿಸಿಕೊಂಡಾಗಲೂ ಅವಳನ್ನು ಅವಳ ಜಾತಿ ಪ್ರಣೀತ ನೆಲೆಗಳಿಂದಲೇ ಗುರುತಿಸುತ್ತದೆ. ತಲೆಯ ಮೇಲೆ ಪುಟ್ಟಿ, ಬಗಲಕೂಸು, ಕಣಿ ಹೇಳುವ ಕೋಲು ಗುಲಗಂಜಿ ಹಾರ, ಅಲೆಮಾರಿನ ಇಂಥ ಲಕ್ಷಣಗಳು ವೈದಿಕ ಕೃತಿಗಳಲ್ಲಿ ಸ್ಥಾಯಿಯಾಗಿರುವುದು ಗಮನಾರ್ಹ. ಇದು ಧರ್ಮಗಳು ಕೊರವಂಜಿಯ ಬಗ್ಗೆ ಹೊಂದಿದ್ದ ದ್ವಂದ್ವವನ್ನು ತಿಳಿಸುತ್ತದೆ.

**೭.೭. ಸಾಮಾಜಿಕ ದ್ವಂದ್ವಗಳು**

ಕೊರವಂಜಿ ಸಮಾಜದ ನೀತಿಗಳ ಬಗ್ಗೆಯೂ ದ್ವಂದ್ವಭಾವನೆಗಳನ್ನು ಹೊಂದಿದ್ದಾಳೆ. ಸಮಾಜದ ಕೆಲವು ಪದ್ಧತಿಗಳನ್ನು ಒಪ್ಪಿಕೊಂಡು ಅನುಸರಣೆ ಮಾಡಿದರೆ, ಮತ್ತೊಮ್ಮೆ ಅವುಗಳನ್ನು ನಿರಾಕರಿಸುತ್ತಾಳೆ. ಸಮಾಜವೂ ಅವಳನ್ನು ದ್ವಂದ್ವದಲ್ಲಿಯೇ ಕಂಡಿದ್ದು ಗಮನಾರ್ಹ.

"ನಾನು ಊರಾ ಬಿಟ್ಟು
ಇಂದಿಗೆ ಅರು ದಿವಸ
ಜೋದಿ ನೋಡಿ ನಗುತಾರೆ"[೨೩]

ಎಂದು ಒಬ್ಬ ಹೆಣ್ಣು ಮಗಳು ಪುರದಲ್ಲಿರುವೆಂದು ಕೇಳಿದಾಗ ಪತಿವ್ರತೆಯಾದ ಹೆಣ್ಣು ಒಂಟಿಯಾಗಿ ಇರಬಾರದೆಂದು ನಿರಾಕರಿಸುತ್ತಾಳೆ. ಹಾಗಿದ್ದರೆ ಸಮಾಜ ನನ್ನನ್ನು ನೋಡಿ ನಗುತ್ತದೆನ್ನುತ್ತಾಳೆ. ರುಕ್ಮಿಣಿ ಕಣಿ ಹೇಳಲು ಕರೆದಾಗ ಕೊರವಂಜಿ "ಪುರುಷರಿಲ್ಲದ ಮನೆಯ ಸೇರುವಳಲ್ಲಾ ಮಕ್ಕಳಿಲ್ಲದ ಮನೆಯ ಹೊಕ್ಕವಳಲ್ಲಾ" ಎನ್ನುತ್ತಾಳೆ. ಇಲ್ಲಿ ಕೊರವಂಜಿ ಆಗಿರುವವನು ಕೃಷ್ಣ. ವೇಷ ಹೆಣ್ಣಿನದಾದರೂ ಅಲ್ಲಿರುವವ ಕೃಷ್ಣ. ಪುರುಷರಿಲ್ಲದ ಮನೆಯಲ್ಲಿ ಪುರುಷರು ಹೋಗಬಾರದು. ಅದು ಹೆಣ್ಣಿಗೆ ಕಳಂಕ. ಆದ್ದರಿಂದ ಕೊರವಂಜಿ ವೇಷದ ಕೃಷ್ಣ ನಿರಾಕರಿಸುತ್ತಾನೆ. ಆದರೆ ಕೊರವಂಜಿ ಕೆಳವರ್ಗದ ಮಹಿಳೆ. ಮೇಲ್ವರ್ಗದ ಪುರುಷನ ಇಚ್ಚೆಗನುಗುಣವಾಗಿ ನಡೆಯಬೇಕೆಂಬ ನಿಯಮವನ್ನು ಮಾತ್ರ ವಿಸರ್ಜಿಸುತ್ತಾಳೆ. ನಾರಾಯಣಸ್ವಾಮಿ ತನ್ನ ಬಯಸಿದಾಗ ಕೊರವಂಜಿ ಅವನನ್ನು ಜಾತಿಕಾರಣದಿಂದ ನಿರಾಕರಿಸುತ್ತಾಳೆ.

ಸಮಾಜದ ಶ್ರೇಣೀಕೃತ ನೆಲೆಗಳಲ್ಲಿ ಕೊರವಂಜಿ ಕೆಳಸ್ಥರಕ್ಕೆ ಸೇರಿದವಳು. ಲೋಕಜ್ಞಾನ ಮತ್ತು ನಡವಳಿಕೆಯಲ್ಲಿ ಉನ್ನತಾವಸ್ಥೆ ಹೊಂದಿದ್ದರೂ ಅವಳ ತಿಳುವಳಿಕೆಯನ್ನು ಜಾತಿ ಮೂಲದ

ವಾಸನೆಯಲ್ಲಿಯೇ ಸಮಾಜ ಗ್ರಹಿಸಿದ್ದು ಕಂಡುಬರುತ್ತದೆ. ಆದರೆ ಲೋಕಜ್ಞಾನ ಕಾರಣದಿಂದಲೇ ತನ್ನ ಸ್ಥಿತಿಯನ್ನು ಸ್ವಂತಃ ಉನ್ನತೀಕರಿಸಿಕೊಳ್ಳುವ ಕೊರವಂಜಿ ಕಥನ ಹೆಣ್ಣಿನ ಲೋಕಜ್ಞಾನವನ್ನು ಭಿನ್ನ ಮಾದರಿಯಲ್ಲಿ ನಿರ್ವಚಿಸಿಕೊಳ್ಳಲು ಪ್ರೇರೇಪಿಸುತ್ತದೆ.

### ೭.೮. ಕಲೆ ಮತ್ತು ಬದುಕಿನ ಬಗೆಗಿನ ದ್ವಂದ್ವಗಳು

ಕೊರವಂಜಿಗೆ ಕಣಿ ಹೇಳುವುದು ಕಲೆಯು ಹೌದು, ಬದುಕು ಹೌದು. ಕಣಿಯ ಮೂಲಕವೇ ಅವಳು ಬದುಕು ಕಟ್ಟಿಕೊಳ್ಳುತ್ತಾಳೆ. ಆದರೆ ಅದರ ಬಗೆಗೂ ಅವಳಲ್ಲಿ ದ್ವಂದ್ವಗಳಿವೆ. ಕಲೆ ಬದುಕಿಗಾದರೂ ಅವಳು ಕೆಲವೊಮ್ಮೆ ಅದನ್ನೆ ನಿರಾಕರಿಸುತ್ತಾಳೆ.

"ದೊರೆಸಾನಿ ಯಾತರಲಿ ಕೊರತೆಯೆನಗಿಲ್ಲಾ
ಪರಹಿತಾರ್ಥಕ್ಕೆ ವೇಷಧರಿಸಿ ತಿರುಗುವೇನು
ಸ್ಥಿರವಾಗಿ ಒಂದೆ ಕಡೆ ಇರುವ ಕೊರವಿಯಲ್ಲ
ಬ್ಯಾಸರದೆ ಕೇಳಿದರೆ ಬೈತನಕಾ ಹೇಳುವೆನು
ಏಸು ದೇಶವನೆಲ್ಲ ತಿರುಗಿ ಬಂದೆ ನಾನು"[೨೪]

ಎಂದು ತನ್ನದು ಕೇವಲ ಕಲೆ ಮಾತ್ರವಲ್ಲ ಬದುಕು ಹೌದು. ಹೀಗೆ ಕೊರವಂಜಿ ಜೀವನದಲ್ಲಿ ಎಲ್ಲ ವಿಷಯಕ್ಕೆ ಸಂಬಂಧಿಸಿದಂತೆ ಪರಸ್ಪರ ವಿರೋಧ ಭಾವಗಳಿವೆ. ಆದರೆ ಕೊರವಂಜಿ ಅವನ್ನೆಲ್ಲ ಸಮೀಕರಿಸಿಕೊಂಡು ಬದುಕುತ್ತಾಳೆ. ಅವಳಿಗೆ ತನ್ನ ಕುಟುಂಬದ ರಕ್ಷಣೆ, ತನ್ನ ಮಾನ ರಕ್ಷಣೆ, ತಾನು ನಂಬಿರುವ ತತ್ವಗಳ ಅನುಸರಣೆ ಮಾತ್ರ ಮುಖ್ಯ. ಹೀಗಾಗಿ ತನಗೆ ತೋರಿದಂತೆ ದ್ವಂದ್ವಗಳ ನಡುವೆ ತಲ್ಲಣ ಹಾಗೂ ಸಂತೋಷಗಳ ಒಳಗೆ ತನಗೆ ಯೋಗ್ಯವಾದದ್ದನ್ನು ಸ್ವೀಕರಿಸಿ ಬದುಕು ರೂಪಿಸಿಕೊಳ್ಳುತ್ತಾಳೆ. ಇದು ಒಳಗಿನಿಂದಲೇ ಕಟ್ಟಿಕೊಳ್ಳುವ ದೇಸಿ ಜ್ಞಾನದ ಸ್ವರೂಪವನ್ನು ಹೇಳುತ್ತದೆ. ದ್ವಂದ್ವಗಳು ಸಾಧನೆಗೆ ತೊಡಕಾಗದೇ ಅವು ಬಿಡುಗಡೆಯ ಭಾಗ್ಯವನ್ನೊದಗಿಸುವುದು ಕೊರವಂಜಿ ಕಥನದ ವಿಶಿಷ್ಟತೆಯಾಗಿದೆ.

**ಕೊನೆಟಿಪ್ಪಣಿ**

೧. ಡಾ. ಕೃಷ್ಣಕಟ್ಟಿ(ಸಂ), ಶ್ರೀಕೃಷ್ಣ ಪಾರಿಜಾತ, ಪು-೧೦೯, ೧೯೯೭
೨. ಡಾ. ಕೃಷ್ಣಕಟ್ಟಿ(ಸಂ), ಶ್ರೀಕೃಷ್ಣ ಪಾರಿಜಾತ, ಪು-೧೩೬, ೧೯೯೭
೩. ಡಾ. ಕೃಷ್ಣಕಟ್ಟಿ(ಸಂ), ಶ್ರೀಕೃಷ್ಣ ಪಾರಿಜಾತ, ಪು-೧೨೮, ೧೯೯೭
೪. ಇಂದೂಬಾಯಿ ಬಿ.ಕೆ.(ಸಂ), ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪು-೧೪೧, ೧೯೮೩
೫. ಡಾ. ಕೃಷ್ಣಕಟ್ಟಿ(ಸಂ), ಶ್ರೀಕೃಷ್ಣ ಪಾರಿಜಾತ, ಪು-೧೦೯, ೧೯೯೭
೬. ಡಾ. ರಮೇಶ ಸ.ಚಿ(ಸಂ)., ಸ್ಯಾಸಿ ಚಿನ್ನಮ್ಮನ ಕಾವ್ಯ, ಪು-೧೩೬, ೧೯೯೯
೭. ರಾಜಪ್ಪ ಟಿ.ಎಸ್.(ಸಂ), ಬಳ್ಳಾರಿ ಜಿಲ್ಲೆಯ ಜನಪದ ಗೀತೆಗಳು, ಪು-೧೦೭, ೧೯೮೬

೮. ಡಾ. ಕೃಷ್ಣಕಟ್ಟಿ(ಸಂ), ಶ್ರೀಕೃಷ್ಣ ಪಾರಿಜಾತ, ಪು-೧೦೭, ೧೯೯೭

೯. ಡಾ. ಕೃಷ್ಣಕಟ್ಟಿ(ಸಂ), ಶ್ರೀಕೃಷ್ಣ ಪಾರಿಜಾತ, ಪು-೧೧೦, ೧೯೯೭

೧೦. ಇಂದೂಬಾಯಿ ಟಿ.ಕೆ.(ಸಂ), ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪುಟ-೧೩೦, ೧೯೮೩

೧೧. ಡಾ. ಬಸವರಾಜ ಸಬರದ(ಸಂ), ಸಮಗ್ರ ದಾಸಸಾಹಿತ್ಯ, ಸಂಪುಟ-೨೯, ಭಾಗ-೧, ಪು-೧೬೩, ೨೦೦೩

೧೨. ಕೃಷ್ಣಸ್ವಾಮಿ ಕೆ.ಅರ್., ಹಾಡು ಚೆಲ್ಲ್ಯಾವೆ ನಾಡಿಗೆ, ಪು-೨೨೯,೧೯೯೫

೧೩. ಡಾ. ರಮೇಶ ಸ.ಚಿ(ಸಂ)., ಸ್ಯಾಸಿ ಚಿನ್ನಮ್ಮನ ಕಾವ್ಯ, ಪು-೧೩೯, ೧೯೯೯

೧೪. ಡಾ. ಕೃಷ್ಣಕಟ್ಟಿ(ಸಂ), ಶ್ರೀಕೃಷ್ಣ ಪಾರಿಜಾತ, ಪು-೯೪, ೧೯೯೭

೧೫. ಇಂದುಬಾಯಿ ಟಿ.ಕೆ.(ಸಂ), ಸಮಗ್ರ ದಾಸಸಾಹಿತ್ಯ ಸಂಪುಟ.೮, ಪು-೪೬೬, ೨೦೦೩

೧೬. ಡಾ. ಕೃಷ್ಣಕಟ್ಟಿ(ಸಂ), ಶ್ರೀಕೃಷ್ಣ ಪಾರಿಜಾತ, ಪು-೧೧೧, ೧೯೯೭

೧೭. ಡಾ. ಕೃಷ್ಣಕಟ್ಟಿ(ಸಂ), ಶ್ರೀಕೃಷ್ಣ ಪಾರಿಜಾತ, ಪು-೧೧೨, ೧೯೯೭

೧೮. ಇಂದುಬಾಯಿ ಟಿ.ಕೆ.(ಸಂ), ಸಮಗ್ರ ದಾಸಸಾಹಿತ್ಯ ಸಂಪುಟ-೮, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪು-೪೬೩, ೨೦೦೩

೧೯. ಕೃಷ್ಣಸ್ವಾಮಿ ಕೆ.ಆರ್., ಹಾಡು ಚೆಲ್ಲ್ಯಾವೆ ನಾಡಿಗೆ, ಪು-೨೨೭, ೧೯೯೫

೨೦. ಇಂದುಬಾಯಿ ಟಿ.ಕೆ.(ಸಂ), ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪು-೧೪೦, ೧೯೮೩

೨೧. ಡಾ. ಪರಮಶಿವಯ್ಯ ಜಿ.ಶಂ.(ಸಂ), ಕರುಣಿ ಕಣ್ಣುತೆರೆಯೆ, ಪು-೫೮, ೧೯೭೪

೨೨. ಅದೇ, ಪು-೫೮

೨೩. ರಾಜಪ್ಪ ಟಿ.ಎಸ್.(ಸಂ), ಬಳ್ಳಾರಿ ಜಿಲ್ಲೆಯ ಜನಪದ ಗೀತೆಗಳು, ಪು-೧೦೭, ೧೯೮೬

೨೪. ಡಾ. ಕೃಷ್ಣಕಟ್ಟಿ, ಶ್ರೀಕೃಷ್ಣ ಪಾರಿಜಾತ, ಪು-೧೧೨, ೧೯೯೭

* * *

ಕೊರವಂಜಿ ತನ್ನ ಒಟ್ಟು ಬದುಕಿನಲ್ಲಿ ಎದುರಾಗುವ ವಿವಿಧ ಸಮಸ್ಯೆಗಳನ್ನು ಸೃಜನಾತ್ಮಕವಾಗಿ ಎದುರಿಸುವ ವಿಧಾನವನ್ನೇ ನಾನು ಮುಳುಗಿ ಏಳುವ ವಿಧಾನ ಎಂದು ಪರಿಭಾವಿಸಿಕೊಂಡಿದ್ದೇನೆ. ಇದು ಹೆಣ್ಣೊಂದು ತನ್ನ ಅಸ್ತಿತ್ವಕ್ಕಾಗಿ ನಡೆಸುವ ಹೋರಾಟವಾಗಿದೆ. ಕೊರವಂಜಿಯ ಬದುಕಿನಲ್ಲಿ ಲಿಂಗ, ಕುಟುಂಬ, ಜಾತಿ, ಸಮಾಜ, ಧರ್ಮಗಳ ಹಿನ್ನೆಲೆಯಲ್ಲಿ ಅನೇಕ ರೀತಿಯ ಸಮಸ್ಯೆಗಳು ಎದುರಾಗುತ್ತವೆ. ಆಗ ಆಕೆ ತನಗೆ ಎದುರಾಗುವ ಸಮಸ್ಯೆಗಳಿಂದ ಒದ್ದಾಡುತ್ತಾಳೆ. ಅವುಗಳ ವಿರುದ್ಧ ಗುದ್ದಾಡುತ್ತಾಳೆ. ಕೆಲವೊಮ್ಮೆ ಆ ಸಮಸ್ಯೆಗಳಲ್ಲಿಯೇ ಮುಳುಗಿ ಹೋದರೆ, ಮತ್ತೊಮ್ಮೆ ಆ ಎಲ್ಲ ಸಮಸ್ಯೆಗಳನ್ನು ಮೀರಿ ಬೆಳೆದು ನಿಲ್ಲುತ್ತಾಳೆ. ಆಕೆ ಸಮಸ್ಯೆಗಳಲ್ಲಿ ಮುಳುಗಿದ್ದಾಗ, ಇದೇ ನನಗೆ ಕೊನೆ ಎಂದು ಎಂದಿಗೂ ಪರಿಭಾವಿಸಿಕೊಳ್ಳುವದಿಲ್ಲ. ಅಥವಾ ಇತರ ವರ್ಗಗಳ ಮಹಿಳೆಯರಂತೆ ಸಾವೇ ತನ್ನ ಸಮಸ್ಯೆಗೆ ಪರಿಹಾರ ಎಂದು ಯೋಚಿಸುವದೂ ಇಲ್ಲ. ಬದಲಾಗಿ ಆ ಸಮಸ್ಯೆಗಳನ್ನು ಮುರಿದು ಕಟ್ಟಿ ಮೇಲೆಳುವ ಪ್ರಯತ್ನವನ್ನು ಮಾಡುತ್ತಾಳೆ. ತನಗೆ ಅಪಮಾನ, ಅವಮಾನ ಆಗುವ ಪ್ರಸಂಗಗಳು ಎದುರಾದಾಗ ಅವನ್ನು ನುಂಗಿಕೊಳ್ಳುವ ಮೂಲಕ ಅವೆಲ್ಲವನ್ನು ನೀಗಿಸಿಕೊಳ್ಳುತ್ತಾಳೆ. ಹೀಗೆ ಸಮಸ್ಯೆಗಳೊಂದಿಗೆ ಗುದ್ದಾಡುತ್ತಾ, ಏಳುತ್ತಾ, ಬೀಳುತ್ತಾ ಸಾಗುವುದೇ ಅವಳ ಜೀವನವಾಗಿದೆ. ಕೆಳವರ್ಗದ ಹೆಣ್ಣೊಂದು ಬದುಕಿನ ದಳ್ಳುರಿಯಲ್ಲಿ ಬೆಂದು ಬೂದಿಯಾಗದೇ ಅವೆಲ್ಲವನ್ನು ಅರಗಿಸಿಕೊಂಡು ಅಗಾಧವಾಗಿ ಬೆಳೆಯುವ ಕಥನ ನಿಜಕ್ಕೂ ಕುತೂಹಲಕರವಾದಂಥದ್ದು.

### ೮.೧. ಕೌಟುಂಬಿಕ ಸಮಸ್ಯೆಗಳು

ಕೊರವಂಜಿಯು ತನ್ನ ಬದುಕಿನಲ್ಲಿ ಅನೇಕ ರೀತಿಯ ಕೌಟುಂಬಿಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಮನೆಗೆಲಸ, ಮನೆವಾರ್ತೆ, ಮಕ್ಕಳ ಪಾಲನೆ, ಪೋಷಣೆ, ಗಂಡನ ಆರೈಕೆ ಹೀಗೆ ಇಡೀ ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸಬೇಕು. ಆ ಸಂದರ್ಭದಲ್ಲಿ ಕೊರವಂಜಿ ಅನೇಕ ರೀತಿಯ ದಬ್ಬಾಳಿಕೆ, ಶೋಷಣೆ, ಕಿರುಕುಳದಂತಹ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ.

ತನ್ನ ಜವಾಬ್ಧಾರಿಯ ನಿರ್ವಹಣೆಯಲ್ಲಿ ಒಂದಿಷ್ಟು ತಪ್ಪಾದರೂ ಸಾಕು ಇಡೀ ಕುಟುಂಬದವರ ಕೆಂಗಣ್ಣಿಗೆ ಗುರಿಯಾಗಬೇಕಾಗುತ್ತದೆ. ಕೊರವಂಜಿ ತನ್ನ ಸಮಸ್ಯೆಯನ್ನು ಕುರಿತು

"ಆರು ಜನ ವಾರಗಿತ್ತೀರು ತಾವಮ್ಮ
ಕತ್ತೆ ಕಟ್ಟುವಂತೆ ಗೂಟಕ್ಕೆ ಕಟ್ಟಿ
ನನ್ನ ಹೊಡಿಸಿ ಬಿಡುತಾರೆ"[೧]

ಎಂದು ಹೇಳಿಕೊಳ್ಳುತ್ತಾಳೆ. ಕುಟುಂಬದ ಎಲ್ಲ ಸದಸ್ಯರು ಅವಳ ಮೇಲೆ ಅಧಿಕಾರ ಚಲಾಯಿಸುವವರೇ. ಅವಳು ಸಣ್ಣ ತಪ್ಪು ಮಾಡಿದರೂ ಸಾಕು ಅತ್ತೆ, ಮಾವ, ನಾದಿನಿ, ಗಂಡ, ವಾರಗಿತ್ತಿ, ಸವತಿ ಹೀಗೆ ಕುಟುಂಬದ ಸದಸ್ಯರೆಲ್ಲರೂ ಸೇರಿ ಅವಳ ಮೇಲೆ ದಬ್ಬಾಳಿಕೆ ಮಾಡುವ, ಅಧಿಕಾರ ಚಲಾಯಿಸುವ ಪ್ರಸಂಗಗಳಿವೆ. ಇಂತಹ ಕೌಟುಂಬಿಕ ಕಷ್ಟಗಳು ಬಂದಾಗ ಕೊರವಂಜಿ ಅವುಗಳಿಂದ ದಿಗಿಲುಗೊಳ್ಳುವುದಿಲ್ಲ. ಅವೆಲ್ಲವನ್ನು ನೀಗಿಸಿಕೊಂಡು ಬದಕುವ ಛಲ ಅವಳದು. ಹಾಗಾಗಿ ಅವರು ಕಷ್ಟಗಳನ್ನು ಕೊಟ್ಟಾಗ ಅವೆಲ್ಲವನ್ನು ಸಹಿಸಿಕೊಳ್ಳುತ್ತಾಳೆ ಅಥವಾ ಅವುಗಳ ಬಗ್ಗೆ ಮೌನವಹಿಸುತ್ತಾಳೆ. ಚಿಕ್ಕಪುಟ್ಟ ಸಮಸ್ಯೆಗಳಿಗೆಲ್ಲ ದಿಗಿಲುಗೊಳ್ಳುವ, ಪ್ರತಿಭಟಿಸುವ ಮನಸ್ಥಿತಿ ಅವಳದಲ್ಲ. ಅವರೆಲ್ಲರ ಮನಸ್ಸರಿತು, ಅವರೆಲ್ಲರ ಮನಸಿಚ್ಛೆಯಂತೆ ನಡೆಯುವ ಮೂಲಕ ತನ್ನ ಕೌಟುಂಬಿಕ ಸಮಸ್ಯೆಯನ್ನು ನೀಗಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಇಲ್ಲಿ ಕುಟುಂಬವನ್ನು ಎದುರಿಸಿ ಗೆಲ್ಲುವುದಿಲ್ಲ. ಆದರೆ ಅವರೆಲ್ಲರೊಂದಿಗೆ ಅನುಸರಿಕೊಂಡು, ಹೊಂದಿಕೊಂಡು ಹೋಗುತ್ತಾಳೆ. ಆ ಮೂಲಕ ತನ್ನ ಸಂಕಷ್ಟಗಳ ನಡುವೆಯೂ ಕೌಟುಂಬಿಕ ಅನನ್ಯತೆಯನ್ನು ಕಾಪಾಡಿಕೊಳ್ಳುತ್ತಾಳೆ.

ಇನ್ನು ಗಂಡ ಸವತಿಯನ್ನು ತರುವ ಅಥವಾ ವೇಶ್ಯೆಯ ಬೆನ್ನು ಹತ್ತಿ ಹೋಗುವ ಪ್ರಸಂಗಗಳು ಕೊರವ ಜನಾಂಗದಲ್ಲಿಯೂ ಸಾಮಾನ್ಯವೇ, ಅಂತಹ ಪ್ರಸಂಗಳು ಎದುರಾದರೆ ಅನ್ಯವರ್ಗದ ಮಹಿಳೆಯರು ಕಣ್ಣಿರು ಹಾಕುತ್ತಾ ಇದೆಲ್ಲ ನನ್ನ ಕರ್ಮ ಎಂದು ತಿಳಿಯುತ್ತಾರೆ. ಇದರಿಂದ ನೊಂದು ಆತ್ಮಹತ್ಯೆಗೆ ಶರಣಾಗುತ್ತಾರೆ. ಇಲ್ಲವೇ ಆ ಸಮಸ್ಯೆಯಲ್ಲಿಯೇ ಮುಳುಗಿ ಮಾನಸಿಕ ಸ್ಥಿಮಿತವನ್ನು ಕಳೆದುಕೊಂಡು ಹುಚ್ಚರಾಗುತ್ತಾರೆ. ಆದರೆ ಕೊರವಂಜಿಯಂಥ ಕೆಳವರ್ಗದ ಮಹಿಳೆಯರು ಇಂತಹ ಪ್ರಸಂಗ ಬಂದಾಗ ಯಾವತ್ತೂ ಧೃತಿಗೆಡುವುದಿಲ್ಲ. ಗಂಡ ಸವತಿಯನ್ನು ತಂದಾಗ ಅದೊಂದು ದೊಡ್ಡ ಸಮಸ್ಯೆ ಎಂದು ಭಾವಿಸದೆ ಅವಳೊಂದಿಗೆ ಹೊಂದಾಣಿಕೆ ಮಾಡಿಕೊಂಡು ಹೋಗುವುದೇ ಹೆಚ್ಚು. ಇನ್ನು ಗಂಡ ವೇಶ್ಯೆಯ ಹತ್ತಿರ ಹೋಗುತ್ತಿದ್ದರೂ, ಹಾಗೆ ಹೋದ ಗಂಡ ಮತ್ತೆ ಮನೆಗೆ ಬರುತ್ತಾನಲ್ಲಾ ಸಾಕು ಎಂದು 'ನಾ ಮುಚ್ಚಿ ಮುಡಿದ ಮಲ್ಲಿಗೆಯ ಕಂಪನ್ನು ಅವಳೊಂದು ಗಳಿಗೆ ಸವಿಯಲಿ' ಎನ್ನುವಂಥ ಸಹನೆ ಅವಳದು ಅಥವಾ ಅವನ ನಡುವಳಿಕೆಯನ್ನು ಮೌನವಾಗಿ ಪ್ರತಿಭಟಿಸುತ್ತಾಳೆ. ಆದರೆ ಗಂಡ ತನ್ನ ಕುಟುಂಬವನ್ನು ತೊರೆದು ಅಲ್ಲೆ ತಳವೂರಿದರೆ ಮಾತ್ರ ಅವಳು ಅದನ್ನು ಸಹಿಸುವುದಿಲ್ಲ. ಹಾಗೆಂದ ಮಾತ್ರಕ್ಕೆ ಅವಳು ತನ್ನ ಜೀವನದ ಬಗ್ಗೆ ಕಠಿಣ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾಳೆಂದಲ್ಲ. ಬದಲಾಗಿ ಅಂತಹ ಪ್ರಸಂಗದಲ್ಲಿ ಆಕೆ ಹಾದಿತಪ್ಪಿದ ಗಂಡನನ್ನು ಸರಿ ದಾರಿಗೆ ತರುವ ಮೂಲಕ ತನ್ನ ಬದುಕನ್ನು ಸರಿಪಡಿಸಿಕೊಳ್ಳುವ ಪ್ರಯತ್ನ ಮಾಡುತ್ತಾಳೆ. ಸೂಳೆಯ

ಹತ್ತಿರ ಹೋದ ಗಂಡನನ್ನು ಅರಸುತ್ತಾ ಸೂಳೆಯ ಮನೆಗೂ ಹೋಗುತ್ತಾಳೆ. ತನ್ನ ಮಾತಿನ ಮೂಲಕ ಆತ ತನ್ನ ಬಗ್ಗೆ ವಿಶ್ವಾಸ ಹೊಂದುವಂತೆ ಮಾಡಿ, ಆತನ ತಪ್ಪು, ಅದರಿಂದಾಗುವ ಅನಾಹುತಗಳನ್ನು ಆತನಿಗೆ ಮನಮುಟ್ಟುವಂತೆ ತಿಳಿಸಿ, ಆತನ ಮನಸ್ಸನ್ನು ಪರಿವರ್ತಿಸುತ್ತಾಳೆ. ಆ ಮೂಲಕ ಆತ ಸೂಳೆಯ ಸಂಗ ತೊರೆದು ಮನೆಗೆ ಮರಳುವಂತೆ ಮಾಡುತ್ತಾಳೆ. ಚಿಕ್ಕ ಸಮಸ್ಯೆ ಬಂದಾಗ ನಿರ್ಲಕ್ಷಿಸುವ ಈಕೆ, ಸಮಸ್ಯೆ ದೊಡ್ಡದಾದಾಗ ಅದಕ್ಕು ಧೃತಿಗೆಡದೆ ಅನ್ಯರ ಸಹಾಯವನ್ನು ಕೇಳದೆ ತನ್ನ ಮಾತು ಮತ್ತು ಚಾಣಾಕ್ಷತನದ ಮೂಲಕ ಸಮಸ್ಯೆಯನ್ನು ನಿವಾರಿಸಿಕೊಳ್ಳುತ್ತಾಳೆ. ಹಾಗೇ ತಪ್ಪು ಮಾಡಿದ ಗಂಡ ತನ್ನ ತಪ್ಪಿಗಾಗಿ ಕ್ಷಮೆ ಕೇಳಬೇಕೆಂದು ಇವಳು ಯಾವತ್ತು ಬಯಸುವುದಿಲ್ಲ. ಸೂಳೆಯ ಸಹವಾಸ ಮಾಡಿದ ಗಂಡ ಅವಳಿಂದ ತನ್ನ ತಪ್ಪನ್ನು ಅರಿತುಕೊಂಡು ಕ್ಷಮೆ ಕೇಳಿದಾಗ ಆಕೆ

> "ನನಕಾಲ ಬೀಳಲಾಕ ನನ್ನ ಕೈ ಜೋಡಿಸಲಕ
> ಯಾರೀಗಿ ಯೇನಽ ಮಾಡಿಽದಿ ಮಾರಾಯ
> ಹೋಗೋನು ನಡೀರಿ ಮಾರಾಯ
> ಹೋಗೋನ ನಡೀರಿ"[೨]

ಎಂದು ಆತ ಯಾವ ತಪ್ಪನ್ನು ಮಾಡಿಯೇ ಇಲ್ಲವೇನೋ ಎನ್ನುವಂತೆ ಅವನನ್ನು ಮನೆಗೆ ಕರೆದೊಯ್ಯುತ್ತಾಳೆ. ಅಂತಹ ತಪ್ಪು ಮಾಡಿದ ಅವನ ಬಗ್ಗೆ ಯಾವ ಸಿಟ್ಟನ್ನು ಇಟ್ಟುಕೊಳ್ಳದೆ, ಅದನ್ನು ಮರೆಯುವ, ಆತನನ್ನು ಕ್ಷಮಿಸುವ, ಉದಾರ ಮನಸ್ಸು ಕೊರವಂಜಿಯದು. ಆತನಿಗೆ ಶಿಕ್ಷೆಕೊಡುವುದಕ್ಕಿಂತ ತನ್ನ ಸಂಸಾರವನ್ನು ಸರಿಪಡಿಸಿಕೊಳ್ಳುವದೇ ಅವಳಿಗೆ ಮುಖ್ಯ. ಇತರ ಮಹಿಳೆಯರಂತೆ ತನಗೆ ಬಂದ ಇಂತಹ ಸಮಸ್ಯೆಯಿಂದ ಬದುಕಿನ ಬಗ್ಗೆ ಕಠಿಣ ನಿರ್ಧಾರ ತೆಗೆದುಕೊಳ್ಳುವ ಅಥವಾ ಅನ್ಯರ ಮೊರೆ ಹೋಗುವ ನಿರ್ಧಾರ ಮಾಡದೇ ತನ್ನ ಸಮಸ್ಯೆಯನ್ನು ತಾನೆ ಬಿಡಿಸಿಕೊಳ್ಳುತ್ತಾಳೆ. ಅನ್ಯ ಮಹಿಳೆಯರಂತೆ ಸಮಸ್ಯೆಯಲ್ಲಿ ಮುಳುಗದೆ ಸಮಸ್ಯೆಯನ್ನು ಬಿಡಿಸಿಕೊಂಡು ಮೇಲೆದ್ದು ಬರುವ ಪ್ರಯತ್ನ ಮಾಡುತ್ತಾಳೆ.

ಕೆಳವರ್ಗಕ್ಕೆ ಸೇರಿದ ಕೊರವಂಜಿಯ ಆರ್ಥಿಕ ಪರಿಸ್ಥಿತಿ ದುರ್ಬಲವಾಗಿರುವುದರಿಂದ ದುಡಿಮೆ ಇವಳಿಗೆ ಅನಿವಾರ್ಯ. ಕುಟುಂಬದ ರಚನೆಯಲ್ಲಿ ಇವಳು ಭೌತಿಕವಾಗಿ ಅಧಿಕಾರವನ್ನು ಹೊಂದಿರದಿದ್ದರೂ, ಕುಟುಂಬದ ಅಸ್ತಿತ್ವಕ್ಕಾಗಿ ಕುಟುಂಬದ ಜವಾಬ್ದಾರಿ ಹೊರುವುದು ಅನಿವಾರ್ಯ. ಹೀಗಾಗಿ ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸಲು ಇವಳು ಹೊರಗೆ ಹೋಗಿ ದುಡಿಯಲೇ ಬೇಕು. ದುಡಿಮೆಗಾಗಿ ಹೊರಹೋದಾಗ ದುಡಿಮೆ ಮುಗಿಸಿಕೊಂಡು ಬರುವ ವೇಳೆಯಲ್ಲಿ ಹೆಚ್ಚು ಕಡಿಮೆ ಆಗುವದು ಸಹಜ. ಆದರೆ ಕುಟುಂಬದವರು ಇದನ್ನು ಸಹಿಸುವುದಿಲ್ಲ. ದುಡಿಮೆಗೆ ಹೋದ ಇವಳು ಒಂದಿಷ್ಟು ತಡವಾಗಿ ಬಂದರೂ ಸಾಕು, ಮನೆಯವರೆಲ್ಲ ಇವಳನ್ನು ಅನುಮಾನದಿಂದಲೇ ನೋಡುತ್ತಾರೆ. ಅವಳ ಬಗ್ಗೆ ಇಲ್ಲಸಲ್ಲದ ಮಾತುಗಳನ್ನಾಡುತ್ತಾರೆ. ಪರಪುರುಷನ ಜೊತೆ ಮಾತನಾಡುತ್ತಾ ನಿಂತಿದ್ದರೆ ಸಾಕು, ಅವರ ಜೊತೆ ಅನೈತಿಕ ಸಂಬಂಧದ ಆರೋಪ ಹೊರಿಸುತ್ತಾರೆ.

ಅಂತಹ ಘಟನೆ ಏನಾದರು ನಡೆದರೆ ಸಾಕು ಅವಳಿಗೆ ಘೋರ ಶಿಕ್ಷೆ ಕೊಡುತ್ತಾರೆ. ಇಲ್ಲವೇ ಕುಟುಂಬದಿಂದಲೇ ಹೊರಹಾಕುತ್ತಾರೆ. ಕುಟುಂಬದ ಜನರ ಇಂಥ ನಡವಳಿಕೆಯ ಅರಿವಿರುವ ಕೊರವಂಜಿ ಸದಾ ತನಗೆ ಆ ಪರಿಸ್ಥಿತಿ ಬರದಂತೆ ಎಚ್ಚರವಹಿಸುತ್ತಾಳೆ. ತಾನಾಯಿತು ತನ್ನ ಕೆಲಸವಾಯ್ತು ಎಂಬಂತೆ ತನ್ನ ದುಡಿಮೆಯನ್ನು ಮುಗಿಸಿಕೊಂಡು ಆದಷ್ಟು ಬೇಗ ಮನೆ ಸೇರಲು ತವಕಿಸುತ್ತಾಳೆ. ಇವಳ ಬಡತನದ ಅರಿವಿರುವ ಜನ ಇವಳಿಗೆ ಸಂಪತ್ತಿನ ಆಸೆ ತೋರಿಸಿ ಅವಳನ್ನು ತಮ್ಮ ಊರಲ್ಲಿ ಇಟ್ಟುಕೊಳ್ಳಲು ಪ್ರಯತ್ನಿಸುತ್ತಾರೆ. ಅವಳಿಗೆ

"ಬಿಂದಿಗ್ಹೊನ್ನ ಕೊಟ್ಟೇನು ಇರು ನಮ್ಮ ಪುರದಾಗೆ
ಎಂದೆಂದೋ ಉಣ್ಣೊ ನಿದುನಾವ॥ ಕಟ್ಟಿಮುಂದೆ
ಎಂದೆಂದೋ ಉಣ್ಣೋ ನಿದ್ನಾವ॥ ಕೊಟ್ಟೆವು
ನಾಳೆ ನಮ್ಮ ಪುರದಾಗಿರು ಕೊರಮಿ"[೩]

ಎಂದು ಅವಳು ಜೀವನ ಪರ್ಯಂತ ದುಡಿದರೂ ಸಂಪಾದಿಸಲು ಸಾಧ್ಯವಾಗದ ಸಂಪತ್ತಿನ ಆಸೆ ತೋರಿಸಿ, ಅವಳನ್ನು ತಮ್ಮ ಭೋಗಕ್ಕಾಗಿ ಊರಲ್ಲಿಯೇ ಉಳಿಸಿಕೊಳ್ಳಲು ಪ್ರಯತ್ನಿಸುತ್ತಾರೆ.

ಕೊರವಂಜಿಗೆ ಬಡತನವಿರಬಹುದು. ಆದರೆ ಶ್ರಮವಿಲ್ಲದೆ ಬರುವ ಸಂಪತ್ತನ್ನು ಪಡೆಯುವ ಆಸೆ ಅವಳಿಗಿಲ್ಲ. ತನ್ನ ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಮಾತ್ರ ಬಯಸುವವಳು. ಹೀಗಾಗಿ ಅವಳು ಸಂಪತ್ತಿನ ಮೋಹಕ್ಕೆ ಒಳಗಾಗುವುದಿಲ್ಲ.

"ನಾಳಿದ್ರೆ ನಮ್ಮ ಪಾಳ್ಯಾವು
ಸರಪ ನಮ್ಮ ಸುತ್ತಲು ನಮ್ಮ ಕೊರಳಿಗೆ
ಕೆಂಡ ಹುಸ್ಯಾರು ನಮ್ಮ ಬಗಸೀಗೆ"[೪]

ಎಂದು ತನ್ನ ಮನೆಯ ಪರಿಸ್ಥಿತಿಯನ್ನು ಅವರಿಗೆ ತಿಳಿಸಿ ಅಲ್ಲಿಂದ ಮರಳಿ ಬರುತ್ತಾಳೆ. ಅವಳಿಗೆ ಬಿಂದಿಗೆ ಹೊನ್ನು, ಎಂದೆಂದೂ ಕುಳಿತು ಉಣ್ಣುವ ಸಂಪತ್ತು ಮುಖ್ಯವಲ್ಲ. ಅದಕ್ಕಿಂತ ತನ್ನ ಕುಟುಂಬದ ಜನರ ನಂಬಿಕೆಯನ್ನು ಉಳಿಸಿಕೊಳ್ಳುವುದೇ ಅವಳಿಗೆ ಮುಖ್ಯ. ಅದಕ್ಕಾಗಿ ಎಲ್ಲವನ್ನು ನಿರಾಕರಿಸಿ ಬರುತ್ತಾಳೆ. ಅವಳು ತನ್ನ ಕುಟುಂಬದ ಆರ್ಥಿಕಸ್ಥಿತಿಯನ್ನು ಸುಧಾರಿಸಿ ತನ್ನ ಚಾರಿತ್ರ್ಯ ಹಾಗೂ ತನ್ನ ಕುಟುಂಬವನ್ನು ಶ್ರೀಮಂತಗೊಳಿಸುವಲ್ಲಿ ಸೋತಿರಬಹುದು. ಆದರೆ ತನ್ನ ಕುಟುಂಬದ ಶ್ರೀಮಂತ ಪ್ರೀತಿಯನ್ನು ಪಡೆಯುವಲ್ಲಿ ಅವಳು ಯಾವತ್ತೂ ಸೋಲುವುದಿಲ್ಲ. ಅಲ್ಲಿ ಸದಾ ಗೆಲ್ಲುತ್ತಾಳೆ.

ಕೊರವಂಜಿ ತನ್ನ ಸರಕುಗಳನ್ನು ಮಾರಾಟ ಮಾಡುವುದು ಮತ್ತು ಶಕುನ ಹೇಳುವುದು ಹೆಣ್ಣುಮಕ್ಕಳ ಹತ್ತಿರ ಮಾತ್ರ. ವ್ಯಾಪಾರಕ್ಕಾಗಿ ತರುವುದು ನೆಲುವು, ಹಗ್ಗ, ಸಿಂಬೆ, ಕಸಬರಿಗೆ, ಗಿಲಗಿಂಚೆ, ಬಾಚಣಿಕೆ ಮುಂತಾದ ಹೆಣ್ಣುಮಕ್ಕಳು ಖರೀದಿಸುವ ವಸ್ತುಗಳನ್ನು. ಭವಿಷ್ಯ ಕೇಳುವವರು ಸಹ ಹೆಣ್ಣುಮಕ್ಕಳೇ. ಹೀಗೆ ಇವಳ ವ್ಯವಹಾರವೇನಿದ್ದರೂ ಹೆಣ್ಣುಮಕ್ಕಳ ಜೊತೆಯೇ.

ಕುಟುಂಬದ ಹೊಟ್ಟೆಪಾಡಿಗಾಗಿ ಹೊರಗೆ ದುಡಿಯುವ ಕೊರವಂಜಿ ಹಾಗೆ ದುಡಿದು ತಂದ ಹಣವನ್ನು ತನ್ನ ಯಜಮಾನನ ಕೈಗೆ ಕೊಡಬೇಕು. ದುಡಿಮೆ ತನ್ನದಾದರೂ ತಾನು ದುಡಿದು ತಂದ ಹಣದ ಮೇಲೆ ಇವಳಿಗೆ ಯಾವುದೇ ಅಧಿಕಾರವಿಲ್ಲ. ಅದರ ಮೇಲೆ ಅಧಿಕಾರ ಇರುವದು ಮಾತ್ರ ಆಕೆಯ ಗಂಡನಿಗೆ. ಒಂದು ವೇಳೆ ಇವಳು ದುಡಿದು ತಂದದ್ದನ್ನು ಸಂಸಾರಕ್ಕೆ ಬೇಕೆಂದು ಎತ್ತಿಟ್ಟುಕೊಂಡರೆ ಅಥವಾ ಮಕ್ಕಳ ಹಸಿವಿಗೆ ಬಳಸಿದರೆ ಇವಳು ಗಂಡನಿಂದ ಶಿಕ್ಷೆಗೆ ಗುರಿಯಾಗಬೇಕಾಗುತ್ತದೆ. ಗಂಡ ಅವಳು ದುಡಿದು ತಂದ ಹಣವನ್ನು ಹೆಂಡದಂಗಡಿಗೆ ಸುರಿದರೂ ಪರವಾಗಿಲ್ಲ. ಆ ಹಣ ಮಾತ್ರ ಗಂಡನಿಗೆ ಸಲ್ಲಬೇಕು. ಈ ವಿಷಯದಲ್ಲಿ ಮಾತ್ರ ಇವಳು ದುಡಿದದ್ದನ್ನು ರಕ್ಷಿಸಿಕೊಳ್ಳಲು ಸಾಧ್ಯವಾಗದೆ ಸೋಲು ಅನುಭವಿಸುತ್ತಾಳೆ.ಆದರೆ ತನ್ನ ಗಂಡನ ಚಟದ ಅರಿವಿರುವ ಇವಳು ತನ್ನ ದುಡಿವ ುಯಿಂದ ಹಣವನ್ನಷ್ಟೆ ತರುವುದಿಲ್ಲ. ತಾನು ತಂದ ಹಣವೆಲ್ಲ ಗಂಡನ ಪಾಲಾಗುತ್ತದೆ. ಹಾಗಾಗಿ ನಮಗೆ ಉಪವಾಸವೇ ಗತಿ ಎಂಬ ತಿಳುವಳಿಕೆ ಅವಳಿಗಿದೆ. ಹಾಗಾಗಿ ಅವಳು ತನ್ನ ವಸ್ತುಗಳನ್ನು ಕೊಂಡುಕೊಂಡವರ ಹತ್ತಿರ, ತನ್ನಿಂದ ಭವಿಷ್ಯ ಕೇಳಿದವರ ಹತ್ತಿರ ತಾನು ಪ್ರೀತಿ ತುಂಬಿದ, ಒತ್ತಾಯದ ಮಾತುಗಳನ್ನಾಡಿ ಅವರ ಮನಸ್ಸನ್ನು ಗೆದ್ದು, ಅವರಿಂದ ಜೀವನಾವಶ್ಯಕ ವಸ್ತುಗಳನ್ನು ಬೇಡಿ ಪಡೆಯುತ್ತಾಳೆ.

"ಉಣ್ಣಲಿಕ್ಕೆ ಅನ್ನ ಉಡಲಿಕ್ಕೆ ಬಣ್ಣ
ಸಣ್ಣ ಸೀರೆ ಎನಗೆ ಸಣ್ಣವಾಗೆ
ಬೆಣ್ಣಿ ಎಣ್ಣೆಯ ಕೊಡಮ್ಮಾ ಹಬ್ಬ ಎನಗೆ
ಪುಣ್ಯದ ಮಾತೆಲ್ಲ ಈ ಘನವಾಯಿತಮ್ಮ"[3]

ಹೀಗೆ ನಿತ್ಯ ತನ್ನ ಅಡುಗೆಗೆ ಬೇಕಾದ ಪದಾರ್ಥಗಳು, ಉಣ್ಣುವ ಆಹಾರ, ಉಡುವ ಬಟ್ಟೆ, ಮಗುವಿಗೆ ಬೇಕಾದ ಎಣ್ಣೆ, ಬೆಣ್ಣೆ, ಮುಂತಾದ ವಸ್ತುಗಳನ್ನು ಕೇಳಿ ಪಡೆಯುತ್ತಾಳೆ. ಉಟ್ಟಬಟ್ಟೆಯಾದರೆ ಗಂಡ ಕಿತ್ತುಕೊಂಡು ಒಯ್ಯುವುದು ಇಲ್ಲ. ಇವನ್ನು ಮಾರಲೂ ಬರುವುದಿಲ್ಲ ಎಂಬ ನಂಬಿಕೆಯಿಂದ. ಕೊರವಂಜಿ ಹೀಗೆ ತನಗೆ ಬೇಕಾದ ಜೀವನಾವಶ್ಯಕ ವಸ್ತುಗಳನ್ನು ಬೇಡಿ ತಂದು ತನ್ನ ಕುಟುಂಬದ ಹೊಟ್ಟೆ ಹೊರೆಯುತ್ತಾಳೆ. ಈ ಮೂಲಕ ಕುಟುಂಬದ ಹಸಿವನ್ನು ತಾನು ಬೇಡಿ ತಂದ ವಸ್ತುಗಳ ಮೂಲಕ ನೀಗಿಸಿ ತನ್ನ ಕುಟುಂಬನ್ನು ಪೋಷಿಸುತ್ತಾಳೆ. ಹಣದ ಮೇಲಿನ ಅಧಿಕಾರದ ವಿಷಯದಲ್ಲಿ ಕೊರವಂಜಿ ಸಮಸ್ಯೆಯಲ್ಲಿ ಮುಳುಗಿದ್ದರೂ, ಕುಟುಂಬ ಪೊರೆಯುವ ವಿಷಯದಲ್ಲಿ ಆರ್ಥಿಕ ಅಧಿಕಾರವಿರದಿದ್ದರೂ ಮುಳುಗದೇ ಮೇಲೆದ್ದು ಬರುತ್ತಾಳೆ.

ಕುಟುಂಬದಲ್ಲಿ ತಾನು ಸಾಕಷ್ಟು ಕಷ್ಟವನ್ನು ಹೊಂದಿದ್ದರೂ ಕೊರವಂಜಿ ತಾನು ದುಡಿಮೆಗೆ ಹೋದಾಗ ತಾನು ಕಷ್ಟಗಳಿಂದ ಪಡೆದ ಅನುಭವ, ಅಲೆಮಾರಿತನದಿಂದ ಸಂಪಾದಿಸಿದ ಜ್ಞಾನ, ತನ್ನ ಸಹನೆ, ತಾಳ್ಮೆಯ ಗುಣ, ಪ್ರೀತಿ, ಅಂತಃಕರಣ ತುಂಬಿದ ಮಾತುಗಳಿಂದ ಕಷ್ಟದಲ್ಲಿರುವವರಿಗೆ ತನ್ನೆಲ್ಲ ಕಷ್ಟಗಳನ್ನು ಮರೆತು ಸಾಂತ್ವನ ಮಾಡುತ್ತಾಳೆ. ಕಷ್ಟದಲ್ಲಿರುವವರ ನೋವು, ಸಮಸ್ಯೆಗಳನ್ನು ತನ್ನೆಲ್ಲ ನೋವುಗಳನ್ನು ಮರೆತು ತನ್ಮಯತೆಯಿಂದ ಆಲಿಸಿ ಅರ್ಧ ನೋವು ಕಳೆದರೆ "ಉಮ್ಮಯಗೊಳಬೇಡವೆ

ಕೇಳಮ್ಮಯ್ಯ"[೬] ಎಂಬಂತ ಪ್ರೀತಿ ಅಂತಃಕರಣ ತುಂಬಿದ ಆತ್ಮೀಯತೆಯ ಮಾತುಗಳಿಂದ ಅವರ ನೋವನ್ನು ಪರಿಹರಿಸುತ್ತಾಳೆ.

"ಧರೆಯೊಳು ಜೀವರಾಶಿಗಳ ಪ್ರಾರಬ್ಧವ
ಬರೆವಂತ ಕೊರವಿ ಕಾಣೆ
ಹುಸಿಯನಾಡುವಳಲ್ಲವೆ ಎನ್ನಯ ಮಾತ
ಹಸನಾಗಿ ಲಾಲಿಸಮ್ಮ"[೭]

ಎಂದು ತನ್ನ ಬಗ್ಗೆ ಹೇಳಿ ಕಣಿ ಕೇಳುತ್ತಿರುವವಳು ತನ್ನ ಮಾತನ್ನು ದಿಟವಾಗಿ ನಂಬಿ ತನ್ನ ಕನಸುಗಳೆಲ್ಲ ಇವಳ ಮಾತಿನಂತೆ ನೆರವೇರುತ್ತವೆಂಬ ವಿಶ್ವಾಸ ಹೊಂದಿ ನೋವನೆಲ್ಲ ಮರೆಯುವಂತೆ ಮಾಡುತ್ತಾಳೆ.

"ಉಡಿಯ ಕಂದನಾಣೆ ಇಡುವೆ ನಂಬೆ ರುಕ್ಮಿಣಿ ನಾ
ನುಡಿವ ನಾಮದಾಣೆ ಇಡುವೆ ನಂಬು ರುಕ್ಮಿಣಿ"[೮]

ಎಂದು ತಾನು ನಂಬಿದ ದೈವ, ಹೆತ್ತ ಮಗುವಿನ ಆಣೆ ಹಾಕಿ ತನ್ನ ಮಾತು ಸತ್ಯವೆಂದು ಅವಳು ಸಂಪೂರ್ಣವಾಗಿ ನಂಬುವ ಹಾಗೆ ಮಾಡುತ್ತಾಳೆ. ನಂಬಿಕೆಗೆ ಎಂಥ ನೋವನ್ನಾದರೂ ಮರೆಸುವ ಶಕ್ತಿ ಇದೆ. ಕೊರವಂಜಿ ತನ್ನ ಬಗ್ಗೆ ನೊಂದವರು ವಿಶ್ವಾಸವಿಡುವ ಹಾಗೆ ಮಾಡಿ ಅವಳಿಗೆ ಭವಿಷ್ಯದ ಬಗ್ಗೆ ನಂಬಿಕೆ ಭರಿಸಿ, ಅವಳು ನೋವು ಮರೆಯುವ ಹಾಗೆ ಮಾಡುತ್ತಾಳೆ. ಕೊರವಂಜಿ ತನ್ನ ಕೌಟುಂಬಿಕ ಕಷ್ಟಗಳು ಸಾಕಷ್ಟಿದ್ದರೂ ಅವನ್ನೆಲ್ಲ ಮರೆತು ನೊಂದಿರುವ ಹೆಣ್ಣುಮಕ್ಕಳಲ್ಲಿ ತನ್ನ ಮಾತಿನ ಮೂಲಕ ಭರವಸೆ ತುಂಬಿ ಅವರ ನೋವನ್ನು ಮರೆಸುತ್ತಾಳೆ.

### ೮.೨. ಜಾತಿ ಸಮಸ್ಯೆಗಳು

ಜಾತಿ ಅಪಮಾನ ಕೊರವಂಜಿ ಬದುಕಿನ ಮತ್ತೊಂದು ಸಮಸ್ಯೆ. ಸಮಾಜದ ಎಲ್ಲ ಮಹಿಳೆಯರು ಅಪಮಾನಿತರೆ, ಶೋಷಿತರೆ. ಆದರೆ ಅವರೆಲ್ಲರ ಅಪಮಾನಗಳು ಒಂದೇ ತೆರನಾಗಿಲ್ಲ. ಮೇಲ್ವರ್ಗದ ಮಹಿಳೆಯರು ಕೇವಲ ಕುಟುಂಬದಿಂದ ಮಾತ್ರ ಅಪಮಾನ, ಶೋಷಣೆಗೆ ಒಳಗಾಗುತ್ತಾರೆ. ಆದರೆ ಅಂಚಿನ ಸಮುದಾಯದ ಮಹಿಳೆಯಾದ ಕೊರವಂಜಿ ಕುಟುಂಬದ ಜೊತೆಗೆ ಜಾತಿ ವಿಷಯದಿಂದ ಸಮುದಾಯ, ಸಮಾಜಗಳಿಂದಲೂ ಅಪಮಾನ, ಶೋಷಣೆಗಳನ್ನು ಎದುರಿಸಬೇಕಾಗುತ್ತದೆ. ಅವಳೆಷ್ಟೇ ಮಾನಸಿಕವಾಗಿ, ದೈಹಿಕವಾಗಿ ಸಮರ್ಥಳಾಗಿದ್ದರೂ, ಬೌದ್ಧಿಕವಾಗಿ ಸಾಂಸ್ಕೃತಿಕವಾಗಿ ಪ್ರಬುದ್ಧತೆಯನ್ನು ಪಡೆದಿದ್ದರೂ, ಸಮಾಜದ ಮೇಲ್ಜಾತಿಯವರೆಲ್ಲ ಇವಳನ್ನು ಕೀಳಾಗಿಯೇ ಕಾಣುತ್ತಾರೆ. ಭರತನ ಅಸ್ಥಾನದಲ್ಲಿ ಕೊರವಂಜಿ ನೃತ್ಯವನ್ನು ನೋಡಿದ ರಾಣಿಯರು ಹೇಳುವ "ಕೊರವಂಜಿ ಕಟ್ಟಣೆಯೆಂಬ ತಿರುಕವೇಷದೆರಕವ ತೊಟ್ಟವೆ ನಾವು"[೯] ಎಂಬ ಮಾತು ಅವರು ಕಲೆಯಲ್ಲಿ ಎಷ್ಟೇ ಪ್ರಬುದ್ಧತೆಯನ್ನು ಪಡೆದಿದ್ದರೂ ಜಾತಿ ವಿಷಯದಲ್ಲಿ ಮಾತ್ರ ಸಮಾಜ ಅವಳನ್ನು ಕೀಳಾಗಿಯೇ ಕಾಣುತ್ತದೆ ಎಂಬುದನ್ನು ಸೂಚಿಸುತ್ತದೆ. ಸಮಾಜ ಅವಳ ಕಲೆಯನ್ನು ನೋಡಿ ಆಸ್ವಾದಿಸಿ,

ಆನಂದಪಟ್ಟು ಗೌರವಿಸಿದರೂ, ಜಾತಿ ವಿಷಯದಲ್ಲಿ ಮಾತ್ರ ಅವಳನ್ನು ಅನಾದರದಿಂದಲೇ ಕಾಣುತ್ತದೆ.

ಕೊರವಂಜಿ ತರುವ ವಸ್ತುಗಳನ್ನು ಕೊಳ್ಳುವ ಜನ ಇವಳನ್ನು ಮುಟ್ಟಿಸಿಕೊಳ್ಳಲು ಮಾತ್ರ ಹಿಂಜರಿಯುತ್ತಾರೆ. ಇವಳನ್ನು ಮುಟ್ಟಿಸಿಕೊಂಡರೆ ತಾವು ಮೈಲಿಗೆಯಾಗುತ್ತೇವೆ, ತಮ್ಮ ಜಾತಿ ಕೆಡುತ್ತದೆ ಎಂದೇ ಭಾವಿಸುತ್ತಾರೆ. ಜೊತೆಗೆ ಕೆಳಜಾತಿಯವಳಾದ ಇವಳು ಸುಳ್ಳು ಹೇಳುತ್ತಾಳೆ, ಮೋಸ ಮಾಡುತ್ತಾಳೆ, ಆ ಮೂಲಕ ಹೊಟ್ಟೆ ಹೊರೆಯುತ್ತಾಳೆ ಎಂದು ಅವಳ ಬಗ್ಗೆ ಕೀಳರಿಮೆಯನ್ನೇ ಬೆಳಸಿಕೊಂಡಿರುತ್ತಾರೆ.

ಕೃಷ್ಣನ ಆಗಮನದ ಬಗ್ಗೆ ದುಗುಡ ಹೊಂದಿರುವ ರುಕ್ಮಿಣಿ ಅದನ್ನು ನಿವಾರಿಸಿಕೊಳ್ಳುವುದಕ್ಕಾಗಿ ದಾಸಿಯರ ಮೂಲಕ ಕೊರವಂಜಿಯನ್ನು ತನ್ನ ಅರಮನೆಗೆ ಕರೆಸಿ ಕಣಿ ಕೇಳಲು ನಿಲ್ಲುತ್ತಾಳೆ. ಆದರೆ ಕಣಿ ಕೇಳುವಾಗ ಮಾತ್ರ ಅವಳ ಜಾತಿಯ ಬಗೆಗಿನ ಕೀಳುರಿಮೆಯಿಂದ ಅವಳಿಗೆ "ಅಂಟಾದೆ ಮುಂಟಾದೆ ಕಣಿ ಹೇಳು ನನಗೆ"[೧೦] ಎಂದು ಅವಳನ್ನು ಮುಟ್ಟಿಸಿಕೊಳ್ಳದೆ ಕಣಿ ಹೇಳಲು ಕೇಳುತ್ತಾಳೆ. ಆಗ ಸ್ವಾಭಿಮಾನಿಯಾದ ಕೊರವಂಜಿ "ಅಂಟಾದೆ ಮುಂಟಾದೆ ಕಣಿ ಹೇಳೊದಿಲಾನು"[೧೧] ಎಂದು ಅವಳಿಗೆ ಪ್ರತ್ಯುತ್ತರ ಕೊಡುತ್ತಾಳೆ. ಪುರಷರಿಲ್ಲದ ಮನೆ, ಮಕ್ಕಳಿಲ್ಲದ ಮನೆ ತಾ ಹೊಕ್ಕವಳಲ್ಲ ಎಂದು ಹೇಳಿದರೂ, ರುಕ್ಮಿಣಿಯ ಧೂತೆಯರು ನಮ್ಮ ರುಕ್ಮಿಣಿ ಕಣಿ ಕೇಳುವಳೆಂದು ಒತ್ತಾಯ ಮಾಡಿ ಕರೆದುಕೊಂಡು ಬಂದು, ಕಣಿ ಕೇಳುವಾಗ ನನ್ನ ಮುಟ್ಟದೆ ಕಣಿ ಹೇಳು ಎಂದು ಕೇಳಿದಾಗ ಅಪಮಾನಿತಗೊಂಡ ಕೊರವಂಜಿ ಅಂಟಾದೆ ಮುಂಟಾದೆ ಕಣಿ ಹೇಳುವದಿಲ್ಲ ಎಂದು ದಿಟ್ಟ ಉತ್ತರ ಕೊಡುತ್ತಾಳೆ. ಅವಶ್ಯಕತೆ ಇದ್ದದ್ದು ನಿನಗೆ ನನಗಲ್ಲ. ಬೇಕಿದ್ದರೆ ಕೇಳು ಇಲ್ಲದಿದ್ದರೆ ಬಿಡು ಎಂಬ ಭಾವ ಅವಳಲ್ಲಿದೆ. ಕೆಳಜಾತಿಯವಳು ಹೇಳುವ ಭವಿಷ್ಯಬೇಕು. ಆದರೆ ಅವಳು ಬೇಡ ಎಂಬ ಧೋರಣೆ ರುಕ್ಮಿಣಿಯದು. ಅದಕ್ಕಾಗಿ ಅವಳಿಗೆ ತನ್ನ ನಿಲುವನ್ನು ತಿಳಿಸಿ ರುಕ್ಮಿಣಿಯೇ ಸೋತು ಕೈಕೊಟ್ಟು ಕಣಿ ಕೇಳುವ ಹಾಗೆ ಮಾಡುತ್ತಾಳೆ.

ಇವಳ ಜಾತಿಯನ್ನು ಹಿಡಿದು ಅಪಮಾನ ಮಾಡದವರು ಇಲ್ಲವೆಂದೇ ಹೇಳಬಹುದು. ಕೊರವಂಜಿಯ ಜಾತಿ ಸುಳ್ಳು ಹೇಳುವುದೆಂದು ಅಪಮಾನ ಮಾಡಿದಾಗ ಕೊರವಂಜಿ ಅದನ್ನು ಯಾವತ್ತು ಸಹಿಸುವುದಿಲ್ಲ. ಬದಲಾಗಿ ಹಾಗೆ ಹೇಳಿದವರಿಗೆ,

"ಸಟೆಯ ಮಾತುಗಳಾಡಿ ಸೆಳೆದುಕೊಂಡು ಹೋಗಿ
ಹೊಟ್ಟೆಯ ಹೊರೆವ ಕೊರವಿ ನಾನಲ್ಲವಮ್ಮ
ನೆಟ್ಟನೆ ಸದಾಶಿವನ ತಟ್ಟಿ ಬಂದ ಕೊರವಿಯ ಮಾತ
ದಿಟವೆಂದು ಸೆರಗ ಗಂಟಿಕ್ಕಿಕೊಳ್ಳಮ್ಮ"[೧೨]

ಎಂದು ದಿಟ್ಟ ಉತ್ತರ ಕೊಟ್ಟು, ತನ್ನದು ಸುಳ್ಳು ಹೇಳುವ ಜಾತಿಯಲ್ಲ ಎಂದು ಸಾಬೀತು ಮಾಡುತ್ತಾಳೆ. "ಇಂದ ವಾರ್ತೆ ತಪ್ಪಿನಾಲ್ ನಾಂ ಕೊರ್ತಿಯೇ ಅಲ್ಲ"[೧೩] ಎಂಬ ಮಾತಿನ ಮೂಲಕ ತಮ್ಮ ಜಾತಿ ಯಾವತ್ತು ಸುಳ್ಳು ಹೇಳಿ ಹೊಟ್ಟೆಹೊರೆಯುವದಲ್ಲ ಎಂದು ಸಮರ್ಥಿಸಿಕೊಳ್ಳುತ್ತಾಳೆ.

ಹಾಗೇ ತಾವು ಹೇಳಿದ ಮಾತು ಯಾವತ್ತು ತಪ್ಪುವದಿಲ್ಲ. ಹಾಗೆ ತಪ್ಪಿದರೆ ತಾನು ತಮ್ಮ ಜಾತಿಗೆ ಸೇರಿದವಳೇ ಅಲ್ಲ ಎನ್ನುತ್ತಾಳೆ. ತಮ್ಮ ಮಾತು ತಪ್ಪದೆಂಬ ನಂಬಿಕೆ ಮತ್ತು ಜಾತಿಯ ಬಗ್ಗೆ ಅಪಾರ ಅಭಿಮಾನ ಕೊರವಂಜಿಗಿದೆ.

ಕೆಳಜಾತಿಗೆ ಸೇರಿದ ಕೊರವರಲ್ಲಿ ಮಾಂಸಾಹಾರ ಸೇವನೆ ಸಾಮಾನ್ಯ ಇವರ ಆಹಾರ ಪದ್ಧತಿಯನ್ನು ಆಧಾರವಾಗಿಟ್ಟುಕೊಂಡು ಕೆಲವರು ಅವಳನ್ನು ತುಚ್ಛವಾಗಿ ಕಾಣುತ್ತಾರೆ. ಅವರವರ ಆಚಾರ, ವಿಚಾರ ಆಹಾರ ಪದ್ಧತಿಗಳು ಅವರವರಿಗೇ ಶ್ರೇಷ್ಠವೆ. ಕೊರವಂಜಿಗೂ ಸಹ ಅವಳ ಆಹಾರ ಪದ್ಧತಿ ಅವಳಿಗೇ ಶ್ರೇಷ್ಠ. ಕೊರವಂಜಿ ಗೌಡ್ತಿ ನಾಗಮ್ಮನಿಗೆ ಕಣಿ ಹೇಳುವುದಕ್ಕೆ ಪ್ರತಿಯಾಗಿ ಬೆಕ್ಕು, ಮಂಗುಲಿಯನ್ನು ಕೊಡಲು ಕೇಳುತ್ತಾಳೆ. ಆಗ ಮಾಂಸಾಹಾರ ಸೇವಿಸದ ನಾಗಮ್ಮ, ನಾವು ಅವನ್ನು ತಿನ್ನುವುದಿಲ್ಲ ಎಂದು ಹೇಳುವುದರೊಂದಿಗೆ ಮಾಂಸಾಹಾರ ಸೇವಿಸುವ ಇವಳನ್ನು ತುಚ್ಛವಾಗಿ ಕಾಣುತ್ತಾಳೆ. ಅದಕ್ಕೆ ಪ್ರತಿಯಾಗಿ ಕೊರವಂಜಿ

"ಬದನೆಕಾಯಿದಾಗ ಹುಳಾಬಿದ್ದರೆ ನೀನು ತಿಂಬುದಿಲ್ಲಾ ಆಹಾ
ಬೆಂಡೆ ಆ ಕಾಯಿದಾಗ ಹುಳಬಿದ್ದರೆ ನೀನು ತಿಂಬಾದಿಲ್ಲಾ ಆಹಾ
ಒಂದನ್ನ ಬಿಳಾದಿಲ್ಲಾ ವರುಷಕ್ಕಾ ಒಂದು ಸರ್ತಿ ಅನ್ನಾ
ಒಂದು ಹುಳಕನ್ನಾ ಬೀಳದಿಲ್ಲ
ಒಂದು ನೋಣ ಅನ್ನಾ ಬೀಳಾದಿಲ್ಲಾ ಆಹಾ"[೧೪]

ಎಂದು ಅವಳನ್ನು ಪ್ರಶ್ನಿಸುತ್ತಾಳೆ. ನಾನು ಮಾಂಸಾಹಾರ ತಿನ್ನುವುದರಿಂದ ಕೀಳಾದರೆ, ತರಕಾರಿಯಲ್ಲಿ ಬಿದ್ದ ಹುಳುಗಳನ್ನು ನೀನು ಸೇವಿಸಿದ್ದಿಯಲ್ಲಾ, ಹಾಗಾದರೆ ನೀನು ಸಹ ಮಾಂಸಾಹಾರ ಸೇವನೆ ಮಾಡಿದಂತಾಗಲಿಲ್ಲವೇ? ಎಂದು ಜಾತಿ ನೀತಿಗಳನ್ನು ಸೂಕ್ಷ್ಮವಾಗಿ ಪ್ರಶ್ನಿಸುತ್ತಾಳೆ. ಹೀಗೆ ಕೊರವಂಜಿ ತನ್ನ ಜಾತಿ, ತನ್ನ ಜಾತಿಯ ಆಹಾರ, ನಡೆನುಡಿ, ಮಾತಿನ ಬಗ್ಗೆ ಯಾರಾದರೂ ಜರಿದು ಮಾತನಾಡಿದಾಗ ತನ್ನ ಮಾತಿನ ಮೂಲಕ ತನ್ನ ಜಾತಿ, ಅದರ ನಡೆ, ನುಡಿ, ಆಹಾರ ಪದ್ಧತಿ ಎಲ್ಲವು ಶ್ರೇಷ್ಠವೆಂದೇ ಸಮರ್ಥನೆ ಮಾಡಿಕೊಳ್ಳುವುದು ಗಮನಾರ್ಹ.

ಕೆಳಜಾತಿಯವರು ಮೋಸ ಹಾಗು ವಂಚನೆ ಮಾಡುವವರೆಂದು ವಸಾಹತು ಸಮಾಜ ಭಾವಿಸಿಕೊಂಡಿತ್ತು. ಹಾಗೆಯೇ ಕೊರವಂಜಿಯರ ಬಗೆಗೂ ಸಮಾಜದಲ್ಲಿ ಅದೇ ನಿಲುವಿದೆ. ಆದರೆ ಈ ರೀತಿಯ ನಡವಳಿಕೆ ಹೊಂದದ ಕೊರವಂಜಿ ಅಂಥ ಆರೋಪವನ್ನು ಎಂದೂ ಸಹಿಸಳು. ಅಂಥ ಆರೋಪವನ್ನು ತನ್ನ ಮೇಲೆ ಮಾಡಿದರೆ ಅಥವಾ ಅವಳನ್ನು ಆ ದೃಷ್ಟಿಕೋನದಿಂದ ನೋಡಿದರೆ ಅಥವಾ ಅವಳ ಭವಿಷ್ಯದ ಬಗ್ಗೆ ಸಂದೇಹ ಪಟ್ಟರೆ ತಾನು ಅಂಥವಳಲ್ಲ ಎಂದು ತನ್ನ ಮಾತಿನ ಮೂಲಕ ಸಮರ್ಥಿಸಿಕೊಳ್ಳುತ್ತಾಳೆ. ಕಣಿ ಕೇಳುವ ಆಕಾಶ ರಾಜನ ಪತ್ನಿ ಧಾರಣಿದೇವಿ ಬೇಕಾದನ್ನು ಕೊಡವೇನು ಸತ್ಯವನ್ನೆ ಹೇಳು ಎಂದು ಒತ್ತಾಯಿಸಿದಾಗ,

"ಮನ್ನಿಸ್ಯರಸಿಯ ಮಾತು ಮುನ್ನ ನುಡಿದಳು
ಕೊರವಿ ಎನ್ನವ್ವ ನೀ ಕೇಳೆ

ನಿನ್ನನ್ನ ನಾ ಉಂಡು ನಿನ್ನೊಳು ವಂಚನೆಯ
ಇನ್ನು ನಾ ಮಾಡಿದರೆ
ಅನ್ನ ಹುಟ್ಟದು ಎನಗೆ ಅನ್ಯಾಯದಿಂದಾ
ಎನ್ನ ಬುಟ್ಟಿಯೊಳಿರುವ
ಧ್ಯಾನದೇವತೆಯ ಆಣೆ ಎನ್ನ ತಂದೆಯ
ಆಣೆ ಚನ್ನ ಬದರಿಯೊಳಿರುವ
ಎನ್ನ ಒಡೆಯನ ಆಣೆ ಎನ್ನ ಗುರುವಿನ
ಆಣೆ ಎನ್ನಾಣೆ ಆಳಿ ಮತ್ತೆ
ಎನ್ನ ಕೂಸಿನ ಆಣೆ ಮುನ್ನಣೇ ಬೇಡಿದ್ದು ಇನ್ನ ಆಣೆಯು
ಕೊಡವೆ ಎನ್ನ ವಚನವು ಸತ್ಯ ಚೆನ್ನಾಗಿ ತಿಳಿಯೆ"[೧೫]

ಎಂದು ತಾನು ವಂಚನೆ ಮಾಡಲಾರೆನೆಂಬುದಕ್ಕೆ ಧಾನ್ಯ ದೇವತೆ, ತಂದೆ, ದೇವ, ಗುರುವಿನ ಆಣೆಯನ್ನು ಹಾಕುತ್ತಾಳೆ. ಹೀಗೆ ಇವಳು ಆಣೆ ಹಾಕುವುದು ತನ್ನ ಬದುಕಿಗೆ ಅಮೂಲ್ಯವಾದ ವಸ್ತುಗಳ ಮೇಲೆ. ತನ್ನಲ್ಲಿ ಸತ್ಯವಿದ್ದಾಗ ಮಾತ್ರ, ಆಣೆ ಹಾಕಲು ಸಾಧ್ಯ. ಇವೆಲ್ಲದರ ಮೇಲೆ ಆಣೆ ಹಾಕಿದ ಅವಳು ಕೊನೆಗೆ ತಾನು ಹೆತ್ತ ಮಗುವಿನ ಮೇಲೆಯೇ ಆಣೆ ಹಾಕುತ್ತಾಳೆ. ಹೀಗೆ ಮಗುವಿನ ಮೇಲೆ ಆಣೆ ಮಾಡುವುದು ತನ್ನಲ್ಲಿ ಸತ್ಯವಿದ್ದಾಗ ಮಾತ್ರ. ಸುಳ್ಳು ಆಣೆ ಮಾಡಿದರೆ ಮಗುವಿಗೆ ಕೇಡಾಗುತ್ತದೆಂಬ ನಂಬಿಕೆ ನಮ್ಮ ಜನಪದರಲ್ಲಿದೆ. ತಾಯಿ ತನ್ನ ಮಗುವಿಗೆ ಯಾವತ್ತು ಕೇಡನ್ನು ಬಯಸುವುದಿಲ್ಲ. ತಪ್ಪು ಆಣೆ ಮಾಡಿದರೆ ಕೇಡಾಗುತ್ತದೆಂದು ಗೊತ್ತಿದ್ದು ಅವಳು ಮಗುವಿನ ಮೇಲೆ ಆಣೆ ಹಾಕುತ್ತಾಳೆಂದರೆ ಅವಳ ಮಾತಿನಲ್ಲಿ ಸತ್ಯವಿದೆ. ಆದ್ದರಿಂದ ಅವಳು ತನ್ನ ಮಗುವಿನ ಮೇಲೆ ಆಣೆ ಹಾಕುವ ಮೂಲಕ ತನ್ನ ಬಗ್ಗೆ ಭರವಸೆ ಮೂಡಿಸುತ್ತಾಳೆ. ಆ ಮೂಲಕ ಕಣಿ ಕೇಳುವವರಲ್ಲಿ ತನ್ನ ಜಾತಿಯ ಬಗ್ಗೆ ಇದ್ದ ಕೀಳು ಭಾವನೆಯನ್ನು ಕಿತ್ತು ಒಗೆಯುತ್ತಾಳೆ.

ಕೆಲವೊಂದು ಜನ ಇವಳ ಮಾತನ್ನು ನಂಬಬೇಕೋ, ಬೇಡವೋ, ಇವಳ ಭವಿಷ್ಯ ನಿಜವಾಗುತ್ತದೋ ಇಲ್ಲವೋ ಎಂಬ ಅಪನಂಬಿಕೆಯಲ್ಲಿ ಇರುತ್ತಾರೆ. ಆಗ ಕೊರವಂಜಿ ಅವರಿಗೆ ನಂಬಿಕೆ ಬರುವಂತಹ ಮಾತುಗಳನ್ನು ಹೇಳುತ್ತಾಳೆ. ಏಳು ಜನ ಮಕ್ಕಳನ್ನು ಅಣ್ಣನ ದೆಸೆಯಿಂದ ಕಳೆದುಕೊಂಡ ದೇವಕಿ ಎಂಟನೆಯ ಮಗುವು ಅವನಿಂದ ಸಾಯುತ್ತದೆ ಎಂದೇ ನಂಬಿರುತ್ತಾಳೆ. ಕೊರವಂಜಿ ನಿನ್ನ ಮಗು ಸಾಯುವದಿಲ್ಲ ಬದುಕುತ್ತದೆ ಎಂದು ಹೇಳಿದಾಗ, ಅವಳಿಗೆ ಕೊರವಂಜಿ ಮಾತಿನಲ್ಲಿ ನಂಬಿಕೆ ಬರುವುದಿಲ್ಲ. ಅಣ್ಣನ ಕ್ರೂರತೆಯನ್ನು ಕಂಡ ಅವಳು ಕೊರವಂಜಿಯ ಮಾತಿಗೆ ಅಪನಂಬಿಕೆ ವ್ಯಕ್ತಪಡಿಸುತ್ತಾಳೆ. ಆಗ ಕೊರವಂಜಿ ಅವಳನ್ನು ಕುರಿತು

"ಎಂದಿನವಳಲ್ಲ ನಾನು ಅನಾದಿಕಾಲದ ಕೊರವಿ
ಹಿಂದಣ ಸಮಸ್ತವೆಲ್ಲ ಒಂದು ಲಾಲಿಸೆ
ಅಂದು ಬಲಿಚಕ್ರವರ್ತಿ ಭೂಮಿಯನಾಳುವಾಗಳೆ

ಬಂದಿತು ಕೇಡೆಂದು ಆತಗೆ ಪೇಳಿ ಬಂದೆನೆ
ಹಿಂದೆ ರಾವಣೇಶ್ವರನು ಲಂಕೆಯನಾಳುವಾಗಳೆ
ಬಂದಿತು ಕೇಡೆಂದು ಆತಗೆ ಪೇಳಿಬಂದೆನು"೧೭

ಎಂದು ತಾನು ಯಾರು ಯಾರಿಗೆ ಕಣಿ ಹೇಳಿ ಬಂದೆ, ಅದರ ಪರಿಣಾಮ ಏನಾಯಿತು ಎಂಬುದನ್ನು ಹೇಳಿ ತನ್ನ ಮಾತನ್ನು ನಂಬುವಂತೆ ಮಾಡುತ್ತಾಳೆ.

"ಆ ನಾಡದ ಕೊರಿವ್ಯಲ್ಲ ಈ ನಾಡದ ಕೊರಿವ್ಯಲ್ಲ
ದೇವಲೋಕದ ಕೊರಿವಿದ್ದೊ ಜಾಣ ನಾ
ದ್ಯಾವರ್ಥಳತೇನೋ। ಕೈ ತಾ"೧೭

ಇವಳ ಇಂತಹ ಮಾತುಗಳಿಂದ ಕಣಿ ಕೇಳುವವರಿಗೆ ಇವಳ ಮೇಲೆ ಸಂಪೂರ್ಣ ವಿಶ್ವಾಸ ಬರುತ್ತದೆ. ಆಗ ಕೇಳುವವಳು ಇವಳ ಮೇಲೆ ನಂಬಿಕೆ ಇಟ್ಟು ಅತಿಯಾದ ವಿಶ್ವಾಸದಿಂದ,

"ಕೊರವಿ ನಿನ್ನ ಮಾತು ಖರೆಯಾದರೆ ಎನ್ನ ಸೆರೆಮನೆ ಹಿಂಗಿದರೆ
ಹಿಂದಿನ ಭಾಪುರಿ ಕೊಡುವೆನು ನಿನಗೆಯೆಂದು ಕರದಿ ವೀಳ್ಯವನಿತ್ತಳು
ಮಿತ್ರೆಯಾಡಿದ ಮಾತು ಸತ್ಯವಾದರೆ ಎನ್ನ ಕಷ್ಟಗಳ್ಹಿಂಗಿದರೆ
ಮುತ್ತಿನ ಭಾಪುರಿ ಕೊಡವೆನು ನಿನಗೆಯೆಂದು ಹಸ್ತದಿ ವೀಳ್ಯವನಿತ್ತಳು"೧೮

ಕೊರವಿ ಮಾತು ಖರೆಯಾದರೆ ನಿಶ್ಚಿತ ಉಡುಗೊರೆಗಳನ್ನು ಕೊಡುವುದಾಗಿ ಭರವಸೆ ನೀಡುತ್ತಾಳೆ. ಜೊತೆಗೆ ಮಿತ್ರೆ ಎಂದು ಅವಳನ್ನು ತನ್ನ ಸಖಿಯನ್ನಾಗಿ ಭಾವಿಸುತ್ತಾಳೆ. ಹೆಣ್ಣು ತನ್ನೆಲ್ಲ ಅಂತರಂಗದ ಮಾತುಗಳನ್ನು ಬಿಚ್ಚಿಡುವುದು ತಾಯಿ, ಗಂಡ ಮತ್ತು ಸಖಿಯ ಹತ್ತಿರ ಮಾತ್ರ. ಆದರೆ ಮಾತಿಗೆ, ನೋವು, ನಲಿವಿಗೆ ಸ್ಪಂದಿಸುವವಳು ಮಾತ್ರ ಸಖಿಯೇ. ಹೀಗಾಗಿ ಹೆಣ್ಣು ಬಹುತೇಕವಾಗಿ ಸಖಿಯೆದುರಿಗೆ ಮಾತ್ರ ತನ್ನ ಅಂತರಂಗವನ್ನು ಬಿಚ್ಚಿಡುತ್ತಾಳೆ. ಅವರಿಂದ ತಮ್ಮ ನೋವನ್ನು ಮರೆತು ಸಮಾಧಾನಗೊಳ್ಳುತ್ತಾರೆ. ಹಾಗೆಯೇ ಕೇಳುಗರು ಸಹ ಇವಳೆದುರು ತಮ್ಮ ಅಂತರಂಗವನ್ನು ಬಿಚ್ಚಿಡುತ್ತಾರೆ. ಹೀಗೆ ಕೊರವಂಜಿ ತನ್ನನ್ನು ಕೀಳಾಗಿ ಕಂಡವರ ವಿಶ್ವಾಸಗಳಿಸಿ ಅವರ ಅಂತರಂಗದ ಆಪ್ತಸಖಿಯಾಗುತ್ತಾಳೆ. ಅವರು ಯಾರಲ್ಲಿಯೂ ಹೇಳದಂತಹ ವಿಷಯಗಳನ್ನು ತನ್ನ ಹತ್ತಿರ ಹೇಳುವ ಹಾಗೆ ಮಾಡಿಕೊಳ್ಳುತ್ತಾಳೆ. ಈ ಮೂಲಕ ತನ್ನ ಜಾತಿಯ ಬಗೆಗೆ ಸಮಾಜದಲ್ಲಿರುವ ಕೀಳರಿಮೆಯಿಂದ ಮೇಲೇರಿ ಬರುತ್ತಾಳೆ.

### ೮.೩. ಲಿಂಗ ಅಸಮಾನತೆ

ಸಮಾಜದ ದೃಷ್ಟಿಯಿಂದ ಕೊರವಂಜಿ ಜಾತಿಯಿಂದ ಮಾತ್ರವಲ್ಲ ಲಿಂಗದ ದೃಷ್ಟಿಯಿಂದಲೂ ಕೀಳು. ಇವಳು ಸಮಾಜದಲ್ಲಿ ಜಾತಿ ಮತ್ತು ಪುರಷ ಎಂಬ ಎರಡು ಅಲುಗಿನ ಕತ್ತಿಯ ಮೇಲೆ ನಡೆಯಬೇಕು. ಎಲ್ಲ ವರ್ಗದ ಮಹಿಳೆಯರು ಜೈವಿಕವಾಗಿ ಭಾವನೆಗಳಿಂದ ಸಾಮ್ಯತೆಯನ್ನು ಪಡೆದಿದ್ದರೂ, ಅವರು ಎದುರಿಸುವ ಸಮಸ್ಯೆಗಳು ಮಾತ್ರ ಭಿನ್ನ. ಜಾತಿ ಮತ್ತು ಅಂತಸ್ತಿನಿಂದ

ಕೀಳಾದ ಇವಳನ್ನು ಸಮಾಜದ ಇನ್ನಿತರ ಜಾತಿಯವರು ತಮ್ಮ ಉಪಭೋಗಕ್ಕೆ ಇರುವವಳು ಎಂದೇ ಭಾವಿಸುತ್ತಾರೆ. ಸಮಾಜದ ಎಲ್ಲ ಬಗೆಯ ಅಧಿಕಾರಗಳು ಅವಳನ್ನು ನಿಯಂತ್ರಿಸಲು ಪ್ರಯತ್ನಿಸುತ್ತವೆ. ಆದರೆ ತನ್ನ ಬದುಕಿಗಾಗಿ ತನ್ನದೇಯಾದ ನಿಯಮಗಳನ್ನು ರೂಢಿಸಿಕೊಂಡ ಇವಳು ಯಾವತ್ತು ತನ್ನ ಮನಸ್ಸಿಚ್ಛೆಗೆ ವಿರುದ್ಧವಾಗಿ ನಡೆದವಳಲ್ಲ. ಮೇಲ್ಜಾತಿಯ ನಾರಾಯಣಸ್ವಾಮಿ ಲೈಂಗಿಕ ಅಪೇಕ್ಷೆಯಿಂದ ಕೊರಾಚೆ ಕಂಚಿ

"ಇಲ್ಲಿ ಬಾರೆ ಕಂಚಿ ನೀನು
ಒಂದ ಎಲೀನಾರು ತಿನ್ವನಾ"[೧೯]

ಎಂದು ಎಲೆ ತಿನ್ನಲು ಕರೆಯುವ ಮೂಲಕ ತನ್ನ ಜೊತೆ ಸರಸಕ್ಕೆ ಆಹ್ವಾನಿಸುತ್ತಾನೆ. ಆದರೆ ಆತ ಮೇಲ್ಜಾತಿಯವನಾದರೂ, ಅವನ ಜೊತೆ ಸೇರಲು ಬಯಸದ ಕಂಚಿ

'ನಿವ್ ನಾರಾಯ್ಣಸ್ವಾಮಿ ಎಂಬರು
ನಾ ಕೊರ್ರಕಂಚಿ ಎಂಬಳು
ನಾ ಕೊಟ್ ಸುಣ್ಣವ
ನೀವಾರು ತಿನ್ನ ಬಾರ್ದು"[೨೦]

ಎಂದು ಅವನನ್ನು ನಿರಾಕರಿಸುತ್ತಾಳೆ. ತನ್ನ ಇಚ್ಛೆಗೆ ವಿರುದ್ಧವಾಗಿ ಅವನನ್ನು ಸೇರುವ ಮನಸ್ಸಿಲ್ಲ. ಹಾಗೆಂದು ಅವನಿಗೆ ಹೇಳಿ ಮೇಲ್ಜಾತಿಯ ಪ್ರಬಲರ ವಿರೋಧವನ್ನು ಕಟ್ಟಿಕೊಳ್ಳಲು ಸಾಧ್ಯವಿಲ್ಲ. ಹೀಗಾಗಿ ಸಮಾಜ ತನ್ನನ್ನು ಹೀನವಾಗಿ ಕಾಣಲು ಕಾರಣವಾದ ಜಾತಿಯನ್ನೇ ಮುಂದುಮಾಡಿ ಅವಳು ತನ್ನನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಕೆಳಜಾತಿಯ ಹೆಣ್ಣೆಂದರೆ ತನ್ನ ಅನುಭೋಗಕ್ಕೆ ಇರುವವಳು ಎಂದು ಭಾವಿಸಿದ ಆತ ಇದನ್ನು ಮೀರಿ ಮತ್ತೆ

"ಚಿಪ್ಪೆಯ ಸುಣ್ಣವೂ
ಚಪ್ಪ್ರದ ಬೆಳೆಯಲಿ
ವಾಜಿಲ್ಲೆ ಕಂಚಿ ತಿಂಬೋವಾ"[೨೧]

ಎನ್ನುವಲ್ಲಿ ಭೋಗಕ್ಕೆ ಯಾವುದೇ ಬಣ್ಣ, ಜಾತಿ ಅಡ್ಡ ಬರುವುದಿಲ್ಲ ಎಂದು ಸೂಚ್ಯವಾಗಿ ತಿಳಿಸುತ್ತಾನೆ. ಆತನ ದೃಷ್ಟಿಯಲ್ಲಿ ಜಾತಿ ಅಡ್ಡಬರುವುದು ವೈವಾಹಿಕ ಸಂಬಂಧ ಬೆಳೆಸಲು ಮಾತ್ರವೇ ಹೊರತು, ಲೈಂಗಿಕ ಸಂಬಂಧ ಬೆಳೆಸಲಲ್ಲಾ. ಆತನ ಮಾತಿನಿಂದ ಆತ ತನ್ನನ್ನು ಬಿಡುವುದಿಲ್ಲ ಎಂದು ಅರಿತ ಕಂಚಿ ಆತನಿಂದ ಪಾರಾಗಲು ತಾನೇ ಉಪಾಯ ಮಾಡಿ ಗಂಡನಿಗೆ ಊಟಕ್ಕೆ ಕೊಟ್ಟು ಮರಳಿ ಬರುವೆ ಎಂದು ತಿಳಿಸಿ, ಗುರುತಿಗಾಗಿ ಆತನ ಮುದ್ರೆಯುಂಗುರ ಒಯ್ದು ಮಾಲಕ್ಷ್ಮಿಯನ್ನು ಅವನ ಹತ್ತಿರ ಕಳಿಸಿ ತನ್ನನ್ನು ತಾನೇ ರಕ್ಷಿಸಿಕೊಳ್ಳುತ್ತಾಳೆ.

ಲಿಂಗ ಹಾಗೂ ಜಾತಿಯನ್ನು ಆಧಾರವಾಗಿಟ್ಟುಕೊಂಡು ಕೊರವಂಜಿಯ ಮೇಲೆ ದೈಹಿಕ ಆಕ್ರಮಣಕ್ಕೆ ಬಂದ ನಾರಾಯಣಸ್ವಾಮಿಯನ್ನು ಕೊರವಂಜಿ ಜಾತಿಯನ್ನು ಮುಂದಿಟ್ಟುಕೊಂಡೆ

ನಿವಾರಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಅದು ಸಾಧ್ಯವಾಗದಾಗ ಆತ ಯಾವ ಜಾತಿ, ಲಿಂಗವನ್ನು ಆಧಾರವಾಗಿಟ್ಟುಕೊಂಡು ತನ್ನನ್ನು ಲೈಂಗಿಕವಾಗಿ ಬಳಸಿಕೊಳ್ಳಲು ಬಂದಿದ್ದನೋ ಅದೇ ಜಾತಿ ಲಿಂಗವನ್ನು ಅಸ್ತ್ರವಾಗಿ ಬಳಸಿ ಆತನನ್ನು ಎದುರಿಸುತ್ತಾಳೆ. ತನ್ನ ಬದಲು ಆತನ ಹೆಂಡತಿಯನ್ನು ತನ್ನದೆ ಜಾತಿಯ ವಸ್ತ್ರವನ್ನು ಹಾಕಿ ಅವನ ಹತ್ತಿರ ಕಳಿಸಿ ತನ್ನ ಪಾತಿವೃತ್ಯವನ್ನು ರಕ್ಷಣೆ ಮಾಡಿಕೊಳ್ಳುತ್ತಾಳೆ. ಹೆಣ್ಣಿಗೆ ಹೆಣ್ಣೆ ಶತ್ರು ಎಂಬ ನಾಣ್ಣುಡಿಗೆ ವಿರುದ್ಧವಾಗಿ ಇಲ್ಲಿ ಹೆಣ್ಣೆ ಹೆಣ್ಣನ್ನು ರಕ್ಷಣೆ ಮಾಡುತ್ತಾಳೆ. ಕೆಳಜಾತಿಯವಳೆಂದು ತನ್ನನ್ನು ಕೀಳಾಗಿ ಕಂಡ ನಾರಾಯಣಸ್ವಾಮಿಯನ್ನು ಆತನ ಹೆಂಡತಿಯೇ ಜಾತಿಯಿಂದ ಬಹಿಷ್ಕಾರ ಹಾಕುವ ಹಾಗೆ ಮಾಡುತ್ತಾಳೆ.

ತನ್ನನ್ನು ಸೇರಬಯಸುವ ವ್ಯಕ್ತಿ ತನಗೆ ಒಪ್ಪಿತವಾಗಿದ್ದರೆ ಮಾತ್ರ ಆತನನ್ನು ಸ್ವೀಕರಿಸುತ್ತಾಳೆ. ಆದರೆ ಆತ ಮೇಲ್ಜಾತಿಯವನಾಗಿದ್ದು, ಇವಳ ಜಾತಿಯನ್ನು ಕೀಳಾಗಿ ಕಂಡರೆ ಇವಳು ಅವನ ಜಾತಿಯನ್ನು ಶುದ್ಧೀಕರಿಸಿ ಆತ ತನ್ನ ಜಾತಿಯ ಸಂಕೇತಗಳನ್ನು ಮೀರಿ ಬಂದರೆ ಮಾತ್ರ ಆತನನ್ನು ಸೇರುವುದಾಗಿ ನಿರ್ಬಂಧ ಹಾಕುತ್ತಾಳೆ. ಚಾಮುಂಡಿ ತನ್ನನ್ನು ಸೇರಲು ಬಂದದ್ದು ದೇವ ನಂಜುಂಡನಾದರೂ ಅವನಿಚ್ಛೆಯಂತೆ ಆಕೆ ನಡೆಯುವುದಿಲ್ಲ. ಬದಲಾಗಿ ಆತನಿಗೆ

"ಅಗಣೀಯ ತೆಗ್ಯಾಕೆ ತೆಗಿಬಹ್ದೆನಸ್ವಾಮಿ
ಹೊದ್ದ ದೇವಾಂಗ ಅಳಿದೀಡಿ
ಹೊದ್ದ ದೇವಾಂಗ ಅಳಿಬಿಟ್ರೆ
ನಂಜುಂಡ ಈವಾಗ್ಲೆ ಕದವಾ ತೆಗೆದೇನೋ"[೨೨]

ಎಂದು ಕದ ತೆಗೆಯಲು ನಿರ್ಬಂಧನೆಗಳನ್ನು ಹಾಕುತ್ತಾಳೆ. ಆತ ತನ್ನ ಮೂಲಜಾತಿಯ ಸಂಕೇತಗಳನ್ನು ಮೀರಿ ತನ್ನ ಜಾತಿಯವನಂತೆ ಬಂದಾಗ ಮಾತ್ರ ತಾನು ಅವನನ್ನು ಸ್ವೀಕರಿಸುವುದಾಗಿ ಷರತ್ತು ಹಾಕುತ್ತಾಳೆ.

ಹೀಗೆ ಕೊರವಂಜಿಯರು ತಮ್ಮ ಜಾತಿ ಲಿಂಗವನ್ನು ಆಧರಿಸಿ ತಮ್ಮ ಮೇಲೆ ಆಕ್ರಮಣ ಮಾಡಲು ಬಂದಾಗ ನಯವಾದ ಮಾತುಗಳ ಮೂಲಕ ಅವರನ್ನು ನಿರಾಕರಿಸುತ್ತಾರೆ. ಆದರೆ ಅದನ್ನು ತಿಳಿಯದೇ ತಮ್ಮ ಮನಸ್ಸಿನ ಇಚ್ಛೆಗೆ ವಿರುದ್ಧವಾಗಿ ನಡೆದರೆ ಅವರಿಗೆ ತಕ್ಕ ಪಾಠ ಕಲಿಸಿ ತಮ್ಮನ್ನು ತಾವು ರಕ್ಷಣೆ ಮಾಡಿಕೊಳ್ಳುತ್ತಾರೆ. ತನ್ನ ಗಂಡ ಅಥವಾ ಅನ್ಯ ಪುರುಷರ ಸಹಾಯ ಪಡೆಯದೆ ತನ್ನನ್ನು ತಾನೇ ರಕ್ಷಣೆ ಮಾಡಿಕೊಳ್ಳುವುದು ಇಂಥ ಮುಳುಗಿ ಏಳುವ ವಿಧಾನಗಳಲ್ಲೊಂದು.

**೮.೪. ಸಾಮಾಜಿಕ ಸಮಸ್ಯೆಗಳು**

ಸಮಾಜವು ಕೊರವಂಜಿಯನ್ನು ಕೆಳಜಾತಿಯ ಹೆಣ್ಣು, ಊರೂರು ಸುತ್ತುವವಳು, ಜ್ಞಾನವಿಲ್ಲದ ಅಜ್ಞಾನಿ, ಹೊಟ್ಟೆ ಹೊರೆಯಲು ಭಿಕ್ಷೆಗೆ ಬಂದವಳು ಎಂಬ ಅನೇಕ ಕಾರಣಗಳಿಂದ ಅವಳನ್ನು ಕೀಳಾಗಿಯೇ ಕಾಣುತ್ತದೆ. ಕೆಲವೊಮ್ಮೆ ದೇವರೇ ಅವಳ ರೂಪದಲ್ಲಿ ಬಂದಿದ್ದರೂ ಅವಳು ಹೇಳುವ ಮಾತುಗಳೆಲ್ಲ ಸತ್ಯ ಎಂದು ಅವಳನ್ನು ಉನ್ನತೀಕರಿಸಿದರೂ, ಮತ್ತೊಮ್ಮೆ ಅವಳ ಜಾತಿ ಹಾಗೂ

ಬಡತನದಿಂದ ಅವಳನ್ನು ತುಚ್ಛವಾಗಿ ಕಂಡು ಅವನತೀಕರಿಸಲಾಗುತ್ತದೆ. ಕೃಷ್ಣ ಕೊರವಂಜಿ ವೇಷಧರಿಸಿದಾಗ

"ಶಂಕರಮಣಿ, ತಾವರೆಯುಮಣಿ, ಕರ್ಪೂರಮಣಿ
ಬಿಂಕದಾ ತುಳಸಿಮಣಿ, ಶ್ರೀಗಂಧಮಣಿಯು
ಪೊಂಕಾದಿ ಪಟಕದಾ ಮಣಿಗಳ್ಹಾರಗಳಾ ಬಿರು
ದಂಕಾ ಕೊರವಂಜಿ ಧರಿಸಿದಳು ಕೊರಳಿಂಗೆ
ಗುಲಗಂಜಿ ಹಾರವ ಗುರುತಿಗ್ಹಾಕಿದಳು"[೨೩]

ಹೀಗೆ ಎಲ್ಲ ತರಹದ ಹಾರಗಳನ್ನು ಹಾಕಿಕೊಳ್ಳುತ್ತಾಳೆ. ಮೊದಲು ಬೆಲೆ ಬಾಳುವ ಹಾರಗಳನ್ನು ಹಾಕಿದ ಕೊರವಂಜಿ ಕೊನೆಗೆ ತನ್ನ ಜಾತಿ, ಬಡತನದ ಗುರುತಾಗಿ ಗುಲಗಂಜಿ ಹಾರವನ್ನು ಹಾಕಿಕೊಳ್ಳುತ್ತಾಳೆ. ಕೃಷ್ಣ ದೇವರು. ಆದರೆ ಕೊರವಂಜಿಯಾದಾಗ ಅವಳು ಕೆಳಜಾತಿಯ ಕೆಳವರ್ಗದ ಹೆಣ್ಣುಮಗಳು. ಕೃಷ್ಣನ ದೈವತ್ವ ಸೂಚಿಸಲು ತುಳಸಿಮಣಿ, ಕರ್ಪೂರಮಣಿ, ಶ್ರೀಗಂಧಮಣಿ ಧರಿಸಿದರೆ ಅವನ ಶ್ರೀಮಂತಿಕೆ ತೋರಿಸಲು ಪಟಕದ ಮಣಿ ಹಾರಗಳನ್ನು ಧರಿಸುತ್ತಾಳೆ. ಇವೆಲ್ಲ ಧರಿಸಿದ ಆಕೆಗೆ ಕೊರವಂಜಿ ಎಂದು ಗುರುತಿಸಲು ಗುಲಗಂಜಿ ಹಾರ ಹಾಕುತ್ತಾರೆ. ಬಂಗಾರ, ಬೆಳ್ಳಿ, ಮುತ್ತು, ರತ್ನಗಳೆಲ್ಲವೂ ಮೇಲ್ಜಾತಿ, ಮೇಲ್ವರ್ಗದವರು ಧರಿಸುವ ವಸ್ತುಗಳು. ಅವನ್ನು ಕೆಳವರ್ಗದವರು ಧರಿಸುವಂತಿಲ್ಲ. ಹಾಗಾಗಿ ಕೊರವಂಜಿಯ ಜಾತಿ, ಬಡತನ, ಸೂಚಿಸಲು ಗುಲಗಂಜಿ ಹಾರ ಅನಿವಾರ್ಯ ಎಂಬ ಭಾವ ಇಲ್ಲಿದೆ. ಕೊರವಂಜಿಯನ್ನು ಅವಳ ಬಡತನ ಹಾಗೂ ಜಾತಿಯಿಂದಲೇ ಗುರುತಿಸುವ ಪ್ರಯತ್ನ ಮಾಡಲಾಗುತ್ತದೆ. ಅದೇ ರೀತಿ ನಾರದನೇ ರುಕ್ಮಿಣಿಗೆ ಕಣಿ ಹೇಳಲು

ಹಲವು ಕೊರವಿಯರ ಕೂಡಿ ಸಿಂಗರದಿ
ಬೆಲೆ ಇಲ್ಲದುಡಿಗೆ ತೊಡಿಗೆ ಇಟ್ಟು ಮುದದಿ"[೨೪]

ಬರುವುದು ಕೊರವಂಜಿ ಜಾತಿಯನ್ನೆ ಪ್ರತಿನಿಧಿಸುತ್ತದೆ. ಬೆಲೆಯಿಲ್ಲದ ಉಡುಗೆ ತೊಡುಗೆಗಳು ಕೊರವಂಜಿಯದು. ನಾರದ ದೇವರಾದರೂ ಕೊರವಂಜಿಯಾದಾಗ ಕನಿಷ್ಠಳೆಂಬ ಭಾವ ಸಮಾಜದ್ದು. ಹೀಗಾಗಿ ಆತ ಕೊರವಂಜಿಯದಾಗ ಕೀಳುಜಾತಿಯ ವಸ್ತ್ರಗಳನ್ನು ಧರಿಸುತ್ತಾನೆ.

### ೮.೫. ಲೋಕಜ್ಞಾನ

ಮಹಿಳೆಯನ್ನು ಸಮಾಜ ಅಕ್ಷರ ಲೋಕದಿಂದ ದೂರವಿಡುವ ಪ್ರಯತ್ನವನ್ನೇ ಮಾಡುತ್ತ ಬಂದಿದೆ. ಅದರಲ್ಲೂ ಕೆಳವರ್ಗ ಕೆಳಜಾತಿಯ ಮಹಿಳೆ ಅಕ್ಷರಲೋಕದಿಂದ ಇನ್ನೂ ದೂರ. ಇನ್ನು ಶಾಸ್ತ್ರ ಪಾಂಡಿತ್ಯಗಳೆಲ್ಲವೂ ಕೇವಲ ಮೇಲ್ವರ್ಗದ ಪುರುಷರ ಸ್ವತ್ತು. ಅವೆಲ್ಲವನ್ನು ಪಡೆಯಲು ಕೆಳಜಾತಿಯ ಪುರುಷರೇ ಅರ್ಹರಲ್ಲ. ಇನ್ನು ಮಹಿಳೆಯರ ಮಾತಂತೂ ದೂರವೇ ಉಳಿಯಿತು. ಹೀಗೆ ಅಕ್ಷರ ಇತರ ಪಾಂಡಿತ್ಯಗಳ ಜ್ಞಾನವಿಲ್ಲದ ಕೆಳಜಾತಿಯ ಜನರನ್ನು ಅಜ್ಞರು, ತಿಳುವಳಿಕೆ ಇಲ್ಲದವರು ಎಂದೇ ಸಮಾಜ ಭಾವಿಸುತ್ತದೆ. ಆದರೆ ಕೊರವಂಜಿಯರು ಸಮಾಜ ತಿಳಿದಂತೆ

ಪಾಂಡಿತ್ಯ ಹೀನರು, ಅರಿವಿಲ್ಲದವರಲ್ಲ. ಅವರು ತಮ್ಮ ಅಲೆಮಾರಿತನದ ಅನುಭವದಿಂದ ಅನೇಕ ಪಾಂಡಿತ್ಯಗಳನ್ನು ಗಳಿಸಿರುತ್ತಾರೆ. ಪಾಂಡಿತ್ಯದಿಂದ ದೂರವಿಟ್ಟಿರುವ ಸಮಾಜದ ನಡುವಳಿಕೆಯನ್ನು ಮೀರಿ ಅವರು ಪಾಂಡಿತ್ಯ ಗಳಿಸಿರುತ್ತಾರೆ. ತಾನು ಬಲ್ಲ ಶಾಸ್ತ್ರಗಳನ್ನು ಕುರಿತು ಕೊರವಂಜಿ

"ಸಾಮುದ್ರಿಕೆ ಬಲ್ಲೆ, ಶಕುನ ಹೇಳಲು ಬಲ್ಲೆ
ಪ್ರೇಮದಿಂ ಬಿಟ್ಟ ಗಂಡನ್ನ ಒಲಿಸಿ ಕೊಡಬಲ್ಲೆ
ವೃದ್ಧ ಯೌವ್ವನವ ಅಭಿವೃದ್ಧಿ ಮಾಡಲು ಬಲ್ಲೆ
ಪೊದ್ದು ತೀರಿಸುವ ಒಲಿಸುವ ಮದ್ದುಗಳ ಬಲ್ಲೆ
ಕೆಟ್ಟ ಸಂವತಿಯ ಬಾಯಿ ಕಟ್ಟು ಮಾಡಲು ಬಲ್ಲೆ
ಹುಟ್ಟು ಬಂಜೆಗೆ ದಿಟ್ಟ ಮಕ್ಕಳನು ಕೊಡಬಲ್ಲೆ
ಲಗ್ನ ಹಿಡಿಯಲು ಬಲ್ಲೆ, ನವಗ್ರಹ ಯಂತ್ರಗಳ ಬಲ್ಲೆ
ಶೀಘ್ರ ಫಲವೀವ ಭಾಡ ಮುಹೂರ್ತಗಳ ಬಲ್ಲೆ
ಆನಂದ ಯೋಗಗಳ ಆಯ್ದು ಕೊಡಬಲ್ಲೆ
ಸ್ವಾನಂದಗಳ ಕೊಡುವ ಧೂರ್ತ ಲಕ್ಷಣ ಬಲ್ಲೆ
ಹಕ್ಕಿ ಶಕುನವ ಬಲ್ಲೆ, ಪಕ್ಷಿ ವ್ಯಾಳವ ಬಲ್ಲೆ
ಎಕ್ಕ ಬೆನಕುಂಟು ನೆನಸಿಕೋ ಹೇಳಬಲ್ಲೆ
ಚಿಂತಾಮಣಿಯ ಬಲ್ಲೆ ಚಿಲ್ಲ ಹೊತ್ತಿಗೆಯ ಬಲ್ಲೆ
ರಂತರ ಬಲವ ಪೇಳ್ವ ಜ್ಯೋತಿಷ್ಯಗಳ ಬಲ್ಲೆ
ಕಪ್ಪನಿಡಬಲ್ಲೆ ಕೈಚಳಕವ ಬಲ್ಲೆ
ತಪ್ಪದಲೆ ವೇತಾಳನೊಶ ಮಾಡಿಕೊಡಬಲ್ಲೆ
ಸಾದೇವ ಎನ್ನ ದಾಸರ ದಾಸ ಸಂಜಯನು
ಯಾದ್ರೀಶ ತಾದ್ರೀಶ ಎನ್ನ ಶಿಷ್ಯರೊಳಗವನೊಬ್ಬ
ಆಕಾಶವಾಣಿಯನ್ನಾಶ್ರಿತಳು
ಬೇರಾದರೆನ್ನ ಮಾತು ಭಯ ಭಕ್ತಿಯಲಿ ಕೇಳು
ನಾಡಾಡ ಕೊರವಿ ನಾನಲ್ಲ ನಿರ್ಮಳಾತ್ಮಳು ನಾನು"[೨೫]

ಎಂದು ಹೇಳಿ ಸಮಾಜಕ್ಕೆ ತನ್ನ ಜ್ಞಾನದ ವಿಸ್ತಾರತೆಯನ್ನು ತಿಳಿಸುತ್ತಾಳೆ. ಯಾವ ಜ್ಞಾನ ಕೇವಲ ಪುರುಷರ ಹಕ್ಕೆಂದು ಪ್ರತಿಪಾದಿತವಾಗಿದ್ದವೋ ಅವೆಲ್ಲವನ್ನು ತಾನು ಸಂಪಾದಿಸಿ ಇಡೀ ಸಮಾಜವೇ ಇವಳ ಜ್ಞಾನಕ್ಕೆ ಆಶ್ಚರ್ಯ ಪಡುವಂತೆ ಮಾಡುತ್ತಾಳೆ. ಜ್ಞಾನದ ನೆಲೆಯಿಂದ ತನ್ನನ್ನು ಕೀಳಾಗಿ ಕಾಣುವ ಮೇಲ್ಜಾತಿ ಪುರುಷ ಸಮಾಜದ ಅಹಂಕಾರವನ್ನು ಇವಳು ಒಡೆಯುತ್ತಾಳೆ.

ಕುಟುಂಬ ನಿರ್ವಹಣೆಗಾಗಿ ಮನೆ ಬಿಟ್ಟು ಹೊರಗೆ ಬಂದ ಇವಳಿಗೆ ತನ್ನ ದುಡಿಮೆಗಾಗಿ ಕೇವಲ ತನ್ನೂರನ್ನು ಮಾತ್ರ ಅವಲಂಬಿಸಲು ಸಾಧ್ಯವಿಲ್ಲ. ವ್ಯಾಪಾರ ಮತ್ತು ಕಣಿ ಹೇಳುವಿಕೆಗಾಗಿ

ಊರೂರು ಅಲೆಯುವುದು ಇವಳಿಗೆ ಅನಿವಾರ್ಯ. ದೇಶ ಸುತ್ತು ಕೋಶ ಓದು ಎಂಬಂತೆ ಕೋಶ ಓದದಿದ್ದರೂ ತನ್ನ ದೇಶ ಸಂಚಾರದಿಂದ ಇವಳು ಅಪಾರವಾದ ಜ್ಞಾನವನ್ನು ಪಡೆಯುತ್ತಾಳೆ. ಊರೂರು ಅಲೆಯುತ್ತಾ ಅಲ್ಲಿಯ ಜನರಿಂದ ಪಡೆದ ಮಾಹಿತಿಯಿಂದ ತನ್ನ ಜ್ಞಾನವನ್ನು ವಿಸ್ತರಿಸಿಕೊಳ್ಳುತ್ತಾ ಹೋಗುತ್ತಾಳೆ. ಆದರೆ ಇವಳ ಅಲೆಮಾರಿತನವನ್ನು ಕಂಡ ಸಮಾಜ ಇವಳು ಊರೂರು ಸುತ್ತುವವಳು, ಸ್ಥಿರವಾದ ನೆಲೆಯಿಲ್ಲದವಳು ಎಂದು ಅಪಹಾಸ್ಯ ಮಾಡುತ್ತದೆ. ಇದರಿಂದ ನೊಂದರೂ ಎದೆಗುಂದದ ಕೊರವಂಜಿ ತನ್ನ ಅಲೆದಾಟದ ಸಾಮರ್ಥ್ಯ ಅದರಿಂದ ತನಗಾದ ಲಾಭವನ್ನು ಕುರಿತು

"ಅಂಗವಂಗ ಕಳಿಂಗ ಕಾಶ್ಮೀರ ಕಾಂಭೋಜ
ಸಿಂಧೂ ದೇಶವನೆಲ್ಲ ತಿರುಗಿ ಬಂದೆನಮ್ಮಾ
ಮಾಳವ ಸೌರಾಷ್ಟ್ರ ಮಗದ ಬಾಹ್ಲೀಕಾದಿ
ಚೋಳ ಮಂಡಲವನ್ನೆಲ್ಲ ಚರಿಸಿ ಬಂದೆನಮ್ಮ
ಲಾಟ ಮರಾಟ ಕರ್ಣಾಟ ಸೌಮೀರಾದಿ
ಅಶೇಷ ಭೂಮಿಯ ನಾನು ನೋಡಿ ಬಂದೆನಮ್ಮಾ
ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚಿ
ಅವಂತಿಕಾಪುರೀ ದ್ವಾರಾವತಿ ಚೇದಿ
ಇವು ಮೊದಲಾದ ಪುರಣ್ಯಪುರಗಳೆಲ್ಲ
ಮೆಚ್ಚಿ ಬಂದ ಕೊರವಿ ನಾನಮ್ಮ
ಪುರಗಳಿಗೆ ಹೋಗಿ ನರಪತಿಗಳಿಗೆ
ಸಾರಿ ಬರಹೇಳಿ ನಾ ಕಪ್ಪವ ತಂದೆ"[೨೬]

ಎಂದು ಹೇಳುತ್ತಾಳೆ. ತಾನು ಇಷ್ಟೆಲ್ಲ ನಾಡನ್ನು ಸುತ್ತಿ ಅಪಾರವಾದ ಲೋಕಜ್ಞಾನವನ್ನು ಪಡೆದು ಬಂದಿದ್ದೇನೆ. ಜೊತೆಗೆ ಆ ಎಲ್ಲ ಅರಸರಿಗೆ ಕಣಿ ಹೇಳಿ ಅವರನ್ನು ಮೆಚ್ಚಿಸಿ ಅದಕ್ಕೆ ಅವರು ನನ್ನನ್ನು ಗೌರವಿಸಿ ಕೊಟ್ಟ ಕಪ್ಪ ಉಂಬಳಿಗಳನ್ನು ಹೊತ್ತು ತಂದಿದ್ದೇನೆ. ಹೀಗಾಗಿ ನನ್ನದು ನಿಮ್ಮಂತೆ ಸೀಮಿತವಾದ ಜ್ಞಾನವಲ್ಲ. ಅಪಾರವಾದ ಲೋಕಜ್ಞಾನ ಎಂದು ಅರಹುತ್ತಾಳೆ.

ಹೀಗೆ ಊರೂರು ಸುತ್ತುವಿಕೆಯಿಂದ ಅವಳು ಪಡೆಯುವುದು ಕೇವಲ ದೇಶಗಳ ಮಾಹಿತಿ, ಬದುಕಿನ ಬಗೆಗಿನ ಜ್ಞಾನ ಮಾತ್ರವಲ್ಲ. ಅದರಿಂದ ಅವಳು ಇಡೀ ಸೃಷ್ಟಿ ಬ್ರಹ್ಮಾಂಡದ ಬಗ್ಗೆಯೂ ವಿಸ್ತಾರವಾದ ಜ್ಞಾನವನ್ನು ಪಡೆಯುತ್ತಾಳೆ. ತಾನು ಪಡೆದ ಜ್ಞಾನದಿಂದ ಸೃಷ್ಟಿ ಹೇಗೆ ನಿರ್ಮಾಣವಾಗಿದೆ ಎಂಬುದನ್ನು ಕುರಿತು ಸಮಾಜಕ್ಕೆ

"ಅತ್ತಿತ್ತ ನಾಲ್ಕು ಕಡೆ ಮತ್ತೆ ಮೇಲಕೆ
ಕೆಳಗೆ ಎತ್ತ ನೋಡಿದರೇನು
ಸುತ್ತಲೆ ಬೈಲುಂಟು ಮತ್ತಲ್ಲೆ ಪರಮ

ಪುರುಷನೆಂಬ ಹರಿ ತಾನು
ಅಂತರಂತಿ ಕುಳಿತಿರುವ ಅಂತತಿಳಿಗೊಡದೆ
ಶಕ್ತಿನಾಮಕಳಾದ
ಚಿತ್ತದೊಲ್ಲಭೆಯನ್ನು ಸುತ್ತಿ ಶಿಂಬಿಯ
ಮಾಡಿ ನೆತ್ತಿಯ ಮೇಲಿಟ್ಟು
ಪೊತ್ತಿಹನು ಬ್ರಹ್ಮಾಂಡ ಸುತ್ತಲಿರುವುದು ಅದಕೆ
ಸಪ್ತದರ್ಶ ಆವರಣ ಕ್ಲಪ್ತನಾಗಿ’’[೨೭]

ಎಂದು ಬ್ರಹ್ಮಾಂಡ ಹೊತ್ತು ಶ್ರೀಹರಿ ಅದರ ಸುತ್ತಲೂ ಸುತ್ತುತ್ತಿರುವ ಹದಿನೇಳು ಆವರಣಗಳನ್ನು ಕುರಿತು ವಿವರಿಸುತ್ತಾಳೆ. ಜೊತೆಗೆ ಸೃಷ್ಟಿಕರ್ತನಿಂದ ನಿರ್ಮಾಣವಾದ ಬ್ರಹ್ಮಾಂಡದಲ್ಲಿ ಯಾವ ಲೋಕಗಳಿವೆ ಎಂಬುದನ್ನು

“ಈ ಲೋಕದ ಕೆಳಗೆ ಏಳು ಲೋಕಗಳುಂಟು
ಈ ಲೋಕದಾರಭ್ಯ
ಮೇಲೇಳು ಲೋಕಗಳು ಕೇಳು ಅವುಗಳು
ಹೆಸರು ಭೂಲೋಕ ಮೇಲಕ್ಕೆ
ತಪಲೋಕ ಮೇಲುಂಟು ಸತ್ಯಯೆಂಬೋಲೋಕ
ತಿಳಿಯೇ ಮಾತೆ
ಈ ಲೋಕದ ಕೆಳಗೆ ಲೋಕಗಳು ನೀ
ತಿಳಿಯೆ ಅವು ಅತಳ ವಿತಳ
ಸುತಳವು ಮತ್ತೆ ತಳಾತಳ ಮಹಾತಳ
ರಸಾತಳವು ಮೂಲದಲಿ
ಪಾತಾಳ ಎಂದೆನಿಸಿ ನಾಥ ಶ್ರೀಹರಿಯಂಗ
ಜಾತವಾಗಿಹವಲ್ಲೆ ಆತನೆವಿರಾಟ
ರೂಪಿ ಖ್ಯಾತನಾಗಿರುವ’’[೨೮]

ಎಂದು ಹದಿನಾಲ್ಕು ಲೋಕಗಳು ಕ್ರಮವಾಗಿ ಯಾವ ರೀತಿ ಇವೆ ಎಂದು ವಿವರವಾಗಿ ಕೊಡುತ್ತಾಳೆ.

ಹೊಟ್ಟೆ ಹೊರೆಯಲು ಭಿಕ್ಷೆಗಾಗಿ ಊರೂರು ಅಲೆಯುವಳು ಎಂದು ಸಮಾಜ ಕೀಳಾಗಿ ಕಂಡಾಗ ತಾನು ತನ್ನ ಅಲೆಮಾರಿತನದಿಂದ ಸಂಪಾದಿಸಿದ ಅಪಾರವಾದ ಜ್ಞಾನ ಮತ್ತು ಪಾಂಡಿತ್ಯದ ಮೂಲಕ ತನ್ನ ಬಗ್ಗೆ ಸಮಾಜದಲ್ಲಿದ್ದ ಕೀಳರಿಮೆಯನ್ನು ಕಳೆಯಲು ಪ್ರಯತ್ನಿಸುತ್ತಾಳೆ. ಕೀಳಾಗಿ ಕಂಡ ಸಮಾಜವೇ ಅವಳ ಜ್ಞಾನದಿಂದ ಅವಳಿಗೆ ಗೌರವ ಕೊಡುವ ಹಾಗೆ ಮಡುತ್ತಾಳೆ. ಅವಳ ವಿದ್ಯೆ ಮತ್ತು ಕಲೆಗಳಿಂದ ಸಮಾಜದಲ್ಲಿ ಅವಳಿಗೆ ಗೌರವಾದರಗಳು ಸಿಗುತ್ತವೆ.

## ೮.೬. ಧಾರ್ಮಿಕ ಸಮಸ್ಯೆ

ಧಾರ್ಮಿಕ ಅಪಮಾನ ಕೊರವಂಜಿ ಬದುಕಿನ ಮತ್ತೊಂದು ಸಮಸ್ಯೆ. ಪ್ರಾರಂಭದಲ್ಲಿ ಗ್ರಾಮದೈವಗಳ ಮೂಲಕ ಕೆಳಜಾತಿಯವರು ತಮ್ಮ ಅಸ್ತಿತ್ವದ ಸ್ಥಾನವನ್ನು ಉಳಿಸಿಕೊಂಡಿದ್ದರು. ಕೆಳಜಾತಿಯವರು ಧರ್ಮದ ದೃಷ್ಟಿಯಲ್ಲಿ ಕೀಳು ಎಂಬ ಮನೋಭಾವವನ್ನು ಸಮಾಜದಲ್ಲಿ ಬಿತ್ತಿತ್ತು. ಧಾರ್ಮಿಕ ಆಚರಣೆಗಳನ್ನು ಮಾಡುವ ಹಕ್ಕನ್ನು ಇವರಿಂದ ಕಸಿದುಕೊಂಡಿತು. ಇವಳು ಮೋಕ್ಷಕ್ಕೆ ಅರ್ಹಳಲ್ಲ ಎಂದು ತಿಳಿಸಿತು. ಇಲ್ಲಿಯವರೆಗೆ ಧಾರ್ಮಿಕವಾಗಿ ಅಸ್ತಿತ್ವವನ್ನು ಪಡೆದ ಕೆಳಜಾತಿಯವರು ಈಗ ಧರ್ಮದಿಂದಲೇ ಹೊರಗಿಡಲ್ಪಟ್ಟರು. ಆದರೆ ಕೆಳಜಾತಿಯ ಕೊರವಂಜಿ ಇದನ್ನು ಒಪ್ಪಲಿಲ್ಲ. ಸಮಾಜದ ಧಾರ್ಮಿಕ ವ್ಯವಸ್ಥೆಯಿಂದ ನೊಂದರೂ ಆ ಅಪಮಾನವನ್ನು ಸಹಿಸಿ ಸುಮ್ಮನೆ ಕೂಡಲಿಲ್ಲ. ಆ ಧಾರ್ಮಿಕ ವ್ಯವಸ್ಥೆಯನ್ನು ಖಂಡಿಸಿ ಅದಕ್ಕೆ ಪ್ರತಿಯಾಗಿ

ಅಂಕಟಂಕಿಣಿ ನಮಗೆ ಗೌರಮ್ಮಳಿಯಾಳು
ಆದಿಗಣೇಶ್ವರನ ಮಗಳಲ್ಲವೇನೆ?
ಸಿದ್ಧಲಿಂಗೇಶ್ವರನು ಚಿಕ್ಕಪ್ಪ ಎನಗೆ
ವಯ್ಯಾರಪುರದಿಂದ ನಾ ಒಬ್ಬಳೆ ಬಂದೆ"[೨೯]

ಎನ್ನುವ ಮೂಲಕ ತಾನು ದೇವರ ಸಂಬಂಧಿ ಎಂದು ಗುರುತಿಸಿಕೊಂಡಳು. ಯಾವ ಧಾರ್ಮಿಕ ವ್ಯವಸ್ಥೆ ಇವಳು ದೇವರ ಪೂಜೆಗೆ ಅರ್ಹಳಲ್ಲವೆಂದು ಸೂಚಿಸಿತ್ತೋ ಅದೇ ಧರ್ಮಕ್ಕೆ ನಾನು ದೇವರ ಸಂಬಂಧಿ ನಾನು ನಿಮಗಿಂತ ಶ್ರೇಷ್ಠ ಎನ್ನುವ ಉತ್ತರ ಕೊಡುತ್ತಾಳೆ. ಕೀಳಾಗಿ ಕಾಣುವ ಧರ್ಮವನ್ನು ಬಿಟ್ಟು ತನ್ನದೇ ಆದ ಮಾನವೀಯತೆಯ ಧರ್ಮವನ್ನು ರೂಪಿಸಿಕೊಳ್ಳುತ್ತಾಳೆ. ಇಡೀ ಸಮಾಜವೇ ತನ್ನ ಕುಟುಂಬ ಎಂದು ಭಾವಿಸುತ್ತಾಳೆ. ಕೀಳಾಗಿ ಕಂಡ ಧರ್ಮವೇ ತನ್ನ ನಡವಳಿಕೆಯಿಂದ ತನ್ನನ್ನು ಮೆಚ್ಚುವ ಹಾಗೇ ಮಾಡುತ್ತಾಳೆ.

ಕೊರವಂಜಿ ನಾನಾ ರೀತಿಯ ಸಮಸ್ಯೆಗಳು ಬಂದರೂ ಅದನ್ನೆಲ್ಲ ಮೀರಿ ಬೆಳೆಯುತ್ತಾಳೆ. ಜಾತಿ, ಅಲೆಮಾರಿತನ, ವೃತ್ತಿಯನ್ನು ತನ್ನ ಅರಿವಿನ ಶಕ್ತಿಯಾಗಿ ಪರಿವರ್ತಿಸಿಕೊಂಡು ಜ್ಞಾನವಂತಳಾಗಿ ಬೆಳೆಯುತ್ತಾಳೆ. ತಾನು ಪಡೆದ ಜ್ಞಾನವನ್ನು ತನ್ನ ಸರಳ ಮಾತಿನ ಶೈಲಿಯ ಮೂಲಕ ಮತ್ತೊಬ್ಬರಿಗೆ ತಿಳಿಸಿ ಅವರಲ್ಲಿ ಅರಿವನ್ನುಂಟು ಮಾಡುತ್ತಾಳೆ. ಈ ಮೂಲಕ ತಾನು ಮುಗುಳುವ ಸಂದರ್ಭಲ್ಲಿಯೂ ತನ್ನ ಜ್ಞಾನ ಮಾತಿನ ಶಕ್ತಿಯ ಮೂಲಕ ಮೇಲೆಳುವ ಪ್ರಯತ್ನ ಮಾಡುತ್ತಾಳೆ. ಹಾಗೆಯೇ ಆ ಸಮಸ್ಯೆಗಳನ್ನು ಮೀರಿ ಬೆಳೆಯುತ್ತಾಳೆ.

**ಕೊನೆಟಿಪ್ಪಣಿ**

೧. ಡಾ. ಚಲುವರಾಜು(ಸಂ), ಜುಂಜಪ್ಪ, ಪು.೫೮, ೧೯೯೭
೨. ಕಾಪಸೆ ರೇವಪ್ಪ(ಸಂ), ಮಲ್ಲಿಗೆದಂಡೆ(ಚತುರ್ಥ ಮುದ್ರಣ), ಪು.೩೪, ೧೯೯೦
೩. ಕ.ರಾ.ಕೃ(ಸಂ), ಜನಪ್ರಿಯ ಜಾನಪದ ಗೀತೆಗಳು(೨ನೇ ಮುದ್ರಣ), ಪು.೩೭, ೧೯೮೩
೪. ಅದೇ, ಪು.೩೭
೫. ಡಾ. ನಾಗರತ್ನ ಟಿ.ಎಸ್., ಸಮಗ್ರ ದಾಸಸಾಹಿತ್ಯ ಸಂಪುಟ.೨, ಪು.೪೦೦, ೨೦೦೩
೬. ಇಂದುಬಾಯಿ ಟಿ.ಕೆ., ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪು.೧೩೩, ೧೯೮೭
೭. ಇಂದುಬಾಯಿ ಟಿ.ಕೆ., ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪು.೧೩೯, ೧೯೮೭
೮. ಇಂದುಬಾಯಿ ಟಿ.ಕೆ., ಸಮಗ್ರ ದಾಸಸಾಹಿತ್ಯ ಸಂಪುಟ-೮, ಪು.೪೭೫, ೨೦೦೩
೯. ಬ್ರಹ್ಮಪ್ಪ ಜಿ., ಹಂಪ ನಾಗರಾಜಯ್ಯ (ಸಂ), ವಿಶ್ವಕವಿ ರತ್ನಾಕರನ ಭರತೇಶ ವೈಭವ, ಪು.೧೨೯, ೧೯೬೭
೧೦. ಕೃಷ್ಣಸ್ವಾಮಿ ಕೆ.ಆರ್., ಹಾಡು ಚೆಲ್ಲ್ಯಾವೆ ನಾಡಿಗೆ, ಪು.೨೨೯, ೧೯೯೫
೧೧. ಅದೇ, ಪು.೨೨೯
೧೨. ಇಂದುಬಾಯಿ ಟಿ.ಕೆ., ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪು.೧೩೨, ೧೯೮೭
೧೩. ಇಂದುಬಾಯಿ ಟಿ.ಕೆ., ಸಮಗ್ರ ದಾಸಸಾಹಿತ್ಯ ಸಂಪುಟ-೮, ಪು.೪೭೧, ೨೦೦೩
೧೪. ರಮೇಶ ಸ.ಚಿ.(ಸಂ), ಸ್ಯಾಸಿ ಚಿನ್ನಮ್ಮನ ಕಾವ್ಯ, ಪು.೧೩೯, ೧೯೯೯
೧೫. ಬಸವರಾಜ ಸಬರದ(ಸಂ), ಸಮಗ್ರ ದಾಸಸಾಹಿತ್ಯ ಸಂಪುಟ-೨೯, ಪು.೭೧-೭೨, ೨೦೦೩
೧೬. ಇಂದುಬಾಯಿ ಟಿ.ಕೆ., ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪು.೧೪೦, ೧೯೮೭
೧೭. ಕಾಪಸೆ ರೇವಪ್ಪ(ಸಂ), ಮಲ್ಲಿಗೆದಂಡೆ(ಚತುರ್ಥ ಮುದ್ರಣ), ಪು.೩೩, ೧೯೯೦
೧೮. ಇಂದುಬಾಯಿ ಟಿ.ಕೆ., ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪು.೧೪೧, ೧೯೮೭
೧೯. ಕೃಷ್ಣಮೂರ್ತಿ ಹನೂರು(ಸಂ), ಜನಪದ ಮತ್ತು ಬುಡಕಟ್ಟು ಗೀತೆಗಳು, ಪು.೧೪೦, ೧೯೯೮
೨೦. ಅದೇ, ಪು.೧೪೦
೨೧. ಕೃಷ್ಣಮೂರ್ತಿ ಹನೂರು(ಸಂ), ಜನಪದ ಮತ್ತು ಬುಡಕಟ್ಟು ಗೀತೆಗಳು, ಪು.೧೪೦-೧೪೧, ೧೯೯೮

೨೨. ಅರ್ಚಕ ಬಿ.ರಂಗಸ್ವಾಮಿ, ಹುಟ್ಟಿದ ಹಳ್ಳಿ, ಪು.೧೦೫, ೨೦೦೧

೨೩. ಡಾ. ಕೃಷ್ಣಕಟ್ಟಿ ಶ್ರೀಕೃಷ್ಣ ಪಾರಿಜಾತ, ಪು.೯೨, ೧೯೯೭

೨೪. ಇಂದುಬಾಯಿ ಟಿ.ಕೆ., ಸಮಗ್ರ ದಾಸಸಾಹಿತ್ಯ ಸಂಪುಟ-೮, ಪು.೪೫೮, ೨೦೦೩

೨೫. ಡಾ. ಕೃಷ್ಣಕಟ್ಟಿ ಶ್ರೀಕೃಷ್ಣ ಪಾರಿಜಾತ, ಪು.೧೧೧, ೧೯೯೭

೨೬. ಡಾ. ನಾಗರತ್ನ ಟಿ.ಎಸ್., ಸಮಗ್ರ ದಾಸಸಾಹಿತ್ಯ ಸಂಪುಟ-೨, ಪು.೩೯೩, ೨೦೦೩

೨೭. ಬಸವರಾಜ ಸಬರದ(ಸಂ), ಸಮಗ್ರ ದಾಸಸಾಹಿತ್ಯ ಸಂಪುಟ-೨೯, ಪು.೭೮, ೨೦೦೩

೨೮. ಬಸವರಾಜ ಸಬರದ(ಸಂ), ಸಮಗ್ರ ದಾಸಸಾಹಿತ್ಯ ಸಂಪುಟ-೨೯, ಪು.೮೦-೮೧, ೨೦೦೩

೨೯. ಕೃಷ್ಣಸ್ವಾಮಿ ಕೆ.ಆರ್., ಹಾಡು ಚೆಲ್ಲ್ಯಾವೆ ನಾಡಿಗೆ, ಪು.೨೨೭, ೧೯೯೫

* * *

ಕೊರವಂಜಿ ಕುರಿತ ಪ್ರದರ್ಶನ ಕಲೆಗಳು ಇರುವುದು ಬಹಳ ಅಪರೂಪ. ತಮಿಳು ಕನ್ನಡ ಸಾಹಿತ್ಯದಲ್ಲಿ ಪ್ರಾಚೀನ ಕಾಲದಿಂದಲೂ ಕಂಡರೂ, ಒಂದು ಆಟದ ರೂಪದಲ್ಲಿ ಕಾಣದೆ ಬೇರೆ ಬೇರೆ ಪ್ರಸಂಗಗಳಲ್ಲಿ ಸಾಂದರ್ಭಿಕವಾಗಿ ಕೊರವಿಯ ಪ್ರಾತಿನಿಧ್ಯ ಕಾಣಿಸುತ್ತದೆ. ಕೊರವಿಯರೆಂದರೆ ಕೀಳುಕುಲದವರೆಂದು ಭಾವಿಸುವ ಜಾತಿ ಹಾಗೂ ಲಿಂಗ ಅಸಮಾನತೆಯ ನೆಲೆಯಲ್ಲೆ ಅವಳ ಪ್ರಾತಿನಿಧ್ಯವನ್ನು ಗ್ರಹಿಸಲಾಗಿದೆ. ಕೆಳಕಾಣಿಸಿದ ಸೀಮಿತ ಪ್ರದರ್ಶನ ಕಲೆಗಳಲ್ಲಿ ಕೊರವಿಯ ಅಸ್ತಿತ್ವ ಕಾಣುವುದು ಅವಳ ಪ್ರಭುದ್ಧತೆಯನ್ನು ಹೇಳಲು ಅಲ್ಲ. ಬದಲಾಗಿ ಅವಳ ಕೆಳ ಅಂತಸ್ಥನ್ನು ಸೂಚಿಸುವ ಸಂಗತಿಯಾಗಿ ಎನ್ನುವುದು ಗಮನಾರ್ಹ. ಜಾನಪದ ಅಭಿವ್ಯಕ್ತಿಗಳು ಹಗಲಿನ ಸಮಸ್ಯೆಗಳನ್ನು ರಾತ್ರಿ ಮೀರುತ್ತವೆ ಎನ್ನುವ ಮಾತಿನಂತೆ ಕೊರವಿ ಹಗಲು ಜಾತಿ ಹಾಗೂ ಲಿಂಗದ ಅಸಮಾನತೆಗಳನ್ನು ತನ್ನ ಕಲೆಯ ಮೂಲಕ ಮೀರುವುದನ್ನು ಕಲಾ ಪ್ರಕಾರಗಳಲ್ಲಿ ಸೂಕ್ಷ್ಮವಾಗಿ ಗಮನಿಸಬಹುದು.

### ೯.೧. ಕೊರವಂಜಿ ನೃತ್ಯ

ಕೊರವಂಜಿ ನೃತ್ಯ ಕೊರವ ಮಹಿಳೆಯರಾದ ಕೊರವಂಜಿಗಳು ಆಡುವ ನೃತ್ಯವಾಗಿದೆ. "ಕನ್ನಡದಲ್ಲಿಯ ಒಂದು ಬಗೆಯ ನಾಟ್ಯಕ್ಕೆ ಕೊರವಂಜಿ ನಾಟ್ಯವೆಂಬ ಹೆಸರಿದೆ. ಇದು ಕಣಿ ಹೇಳುವ ಪಾತ್ರದ ನಾಟ್ಯವೇ."[೧] ಪ್ರಾಚೀನ ಕಾಲದಲ್ಲಿ ಈ ನೃತ್ಯ ರಾಜರ ಅರಮನೆಗಳಲ್ಲಿ ನಡೆಯುತ್ತಿದ್ದುದರ ಬಗ್ಗೆ ನಮಗೆ ರತ್ನಾಕರವರ್ಣಿಯ 'ಭರತೇಶ ವೈಭವ' ಕೃತಿಯಲ್ಲಿ ಉಲ್ಲೇಖಗಳು ಸಿಗುತ್ತವೆ. ಅರಮನೆಯಲ್ಲಿ ನಾಟ್ಯ ನಡೆಯುವ ಸಂದರ್ಭದಲ್ಲಿ ಹಿಮ್ಮೇಳದಲ್ಲಿ ನಾಟ್ಯ ಮಾಡುತ್ತಿದ್ದ ಎಳೆಕನ್ಯೆಯರು ಕೊರವಂಜಿ ವೇಷವನ್ನು ತೊಟ್ಟು ಕಣಿ ಹೇಳಿಹೋಗುತ್ತಾರೆ. ನಂತರ ನೃತ್ಯ ಮಾಡಿದ ರೂಪಾಣಿ, ಪದ್ಮಿನಿಯರ ನೃತ್ಯವನ್ನು ಗಮನಿಸದೆ ಮಂತ್ರಿಯತ್ತ ನೋಡುತ್ತಿದ್ದ ರಾಜ ಅವರಿಗೆ ಉಡುಗೊರೆ ಕೊಡಲು ಹೋದಾಗ, ತಮ್ಮ ನೃತ್ಯ ನೋಡದೆ ಉಡುಗೊರೆ ಕೊಟ್ಟು ಅಪಮಾನಿಸುವೆಯಲ್ಲಾ, ಹಾಗೆ ಮಾಡಲು ತಾವೇನು

"ಉತ್ತರನಾಟಕಕೊಪ್ಪುವ ಗಂಭೀರ । ವೃತ್ತನಾಟ್ಯವನಾಡಿದೆಮ್ಮ
ಮತ್ತೇನು ರಚ್ಚೆಯ ಪೂರ್ವನಾಟಕದೊಂದು । ವೃತ್ತಾಂತವನೆ ಕಂಡೆಯಲ್ಲ
ಕೊರವಂಜಿ ಕಟ್ಟಣೆಯೆಂಬ ತಿರುಕವೇಷ । ದೆರಕವ ತೊಟ್ಟೆವೆ ನಾವು"[೨]

ಎಂದು ತಾವು ಕೊರವಂಜಿ ಕಟ್ಟಣಿಯ ತಿರುಕವೇಷ ತೊಟ್ಟಿಲ್ಲ ಎನ್ನುತ್ತಾರೆ. ಇಲ್ಲಿ ಬಳಸಿರುವ 'ಕೊರವಂಜಿ ಕಟ್ಟಣೆ' ಕೊರವಂಜಿ ನೃತ್ಯವೇ ಆಗಿರಬಹುದು. ನೃತ್ಯ ನಡೆಯುತ್ತಿರುವ ಸಂದರ್ಭದಲ್ಲಿಯೇ ಎಳೆಗನ್ನೆಯರು ಕೊರವಂಜಿ ಕಣಿ ಹೇಳಿ ಹೋಗುತ್ತಾರೆ. ಹಾಗೆಯೇ ರೂಪಾಣಿ, ಪದ್ಮಾನಿಯರು ಸಹ ತಮ್ಮ ನೃತ್ಯದ ವಿಷಯವನ್ನೆ ಪ್ರಸ್ತಾಪಿಸುತ್ತಾ ಈ ಮಾತನ್ನು ಹೇಳುತ್ತಾರೆ. ಹೀಗಾಗಿ ಭರತೇಶ ವೈಭವದ ಕೊರವಂಜಿ ಕಟ್ಟಣೆ 'ಕೊರವಂಜಿ ನೃತ್ಯ'ವಾಗಿರುವ ಸಾಧ್ಯತೆಯೇ ಹೆಚ್ಚಾಗಿದೆ.

ಈ ಕಲೆಯನ್ನು ಕುರಿತು ರೂಪಾಣಿ, ಪದ್ಮಾನಿಯರು 'ತಿರುಕ ವೇಷ' ಎಂಬ ಪದ ಬಳಸಿರುವುದು ನೋಡಿದರೆ ಕೊರವಂಜಿ ನೃತ್ಯವು ಕೀಳು ಕಲೆ ಎಂದು ಪರಿಗಣಿತವಾಗಿತ್ತೆ? ಎನ್ನುವ ಅನುಮಾನ ಮೂಡುತ್ತದೆ. ಆದರೆ ಇದು ಪ್ರದರ್ಶನಗೊಂಡದ್ದು ರಾಜನ ಅರಮನೆಯಲ್ಲಿ. ಅದು ರಾಜ ರಾಣಿ ಮಂತ್ರಿ ಮುಂತಾಗಿ ರಾಜಪರಿವಾರದವರ ಮನರಂಜನೆಗಾಗಿ ನಡೆಯುತ್ತಿರುವುದು ಗಮನಾರ್ಹ. ನೃತ್ಯಗಾರ್ತಿಯರಾದ ರೂಪಾಣಿ, ಪದ್ಮಾನಿಯರು ಮಹಾಸ್ವಾಭಿಮಾನಿಗಳು. ರಾಜ ತಮ್ಮ ಕಲೆಯನ್ನು ವೀಕ್ಷಿಸದೆ ಮಂತ್ರಿಯತ್ತ ಗಮನಹರಿಸಿದಾಗ, ತಮ್ಮ ಪ್ರದರ್ಶನವನ್ನು ರಾಜ ನೋಡದೇ ಮನನೊಂದು ಅವರು ಈ ಮಾತು ಹೇಳಿದ್ದಾರೆ. ಜೊತೆಗೆ ರಾಜ ಇದಕ್ಕೂ ಪೂರ್ವದಲ್ಲಿ ಕೊರವಂಜಿ ವೇಷದಲ್ಲಿ ಬಂದು ಕಣಿ ಹೇಳುವ ಕೊರವಂಜಿ ನೃತ್ಯವನ್ನು ಆಸೆಯಿಂದ ನೋಡಿ ಇವರ ನೃತ್ಯವನ್ನು ಮಾತ್ರ ಆಸಕ್ತಿಯಿಂದ ನೋಡದೆ ಇರಬಹುದು. ಅವರ ನೃತ್ಯ ನೋಡಿ ತಮ್ಮ ನೃತ್ಯ ನೋಡದ ತಾತ್ಸಾರ ತೋರಿದ ರಾಜನ ಮೇಲಿನ ಮುನಿಸು, ರಾಜನ ಆಸಕ್ತಿ ಸೆಳೆದ ಕೊರವಂಜಿ ನೃತ್ಯದ ಮೇಲಿನ ದ್ವೇಷದಿಂದ ಅವರು ಈ ಮಾತನ್ನ ಹೇಳಿರುವ ಸಾಧ್ಯತೆಗಳಿವೆ.

ಬಿ.ಪಿ. ರಾಮಯ್ಯನವರು ತಮಿಳುನಾಡಿನಲ್ಲಿಯೂ ಸಹ 'ಕೊರವಂಜಿ ನೃತ್ಯ' ಎಂಬ ನೃತ್ಯವಿದ್ದು ಅದು ಇಂದಿಗೂ ತಂಜಾವೂರು ಭಾಗದಲ್ಲಿ ಜನಪ್ರಿಯತೆಗಳಿಸಿದೆ. ತಮಿಳು ಸಾಹಿತ್ಯದ ನಾಟಕದಲ್ಲಿ 'ಕುರವಟ್ಟಿ' ಪಾತ್ರ ಪ್ರಮುಖವಾದ ನಾಟಕಗಳಿದ್ದು, ಇಂಥ ನಾಟಕಗಳಿಗೆ 'ಕುರುವಂಜಿ'ಗಳು ಎಂಬ ಹೆಸರಿದ್ದು ಇಂಥ ೩೬ 'ಕುರುವಂಜಿ'ಗಳು ತಮಿಳು ಸಾಹಿತ್ಯದಲ್ಲಿರುವದಾಗಿ ತಿಳಿಸುತ್ತಾರೆ. ಅಂತೆಯೇ ಅಜಗರ ಕುರವಂಜಿ, ಕುಟ್ಟಲ ಕುರವಂಜಿ, ಸರಭೇದ್ರ ಭೂಪಾಲ ಕುರವಂಜಿ, ಕುಂಭೇಶ್ವರ ಕುರವಂಜಿ, ಸಿತ್ರಂಬಲ ಕುರವಂಜಿ, ತ್ಯಾಗೆಕರ್ ಕುರವಂಜಿ, ರಾಜರಾಜ ಕುರವಂಜಿ, ಯರಕುಲ ಕಾಂಬೋಜಿ ಎಂಬ ೮ ಕುರವಂಜಿಗಳ ಹೆಸರುಗಳನ್ನು ಪ್ರಸ್ತಾಪಿಸಿ ಅವನ್ನು ಬರೆದವರ ಕಾಲದ ಬಗ್ಗೆಯೂ ತಿಳಿಸುತ್ತಾರೆ. ೧೦ನೇ ಶತಮಾನದಲ್ಲಿಯೇ ರಾಜಾರಾಜಚೋಳನ ಆಸ್ಥಾನದಲ್ಲಿ ರಾಜರಾಜ ಕುರವಂಜಿ ಪ್ರದರ್ಶಿತಗೊಂಡ ಬಗ್ಗೆ ತಂಜಾವೂರಿನ ಬೃಹದೇಶ್ವರ ದೇವಾಲಯದಲ್ಲಿ ಉಲ್ಲೇಖವಿದೆ ಎನ್ನುತ್ತಾರೆ.[೩]

ಕ್ರಿ.ಶ. ೩ನೇ ಶತಮಾನದ 'ಶಿಲಪ್ಪದಿಗಾರಂ' ತಮಿಳು ಕೃತಿಯಲ್ಲಿ ಕೊರವಂಜಿ ಕಣಿ ಹೇಳುವ ಪ್ರಸಂಗದ ಉಲ್ಲೇಖವಿದೆ. ೩ನೇ ಶತಮಾನದಲ್ಲಿ ತಮಿಳು ಸಾಹಿತ್ಯ ಪ್ರವೇಶಿಸಿದ ಕೊರವಂಜಿ ೧೦ನೇ ಶತಮಾನದ ಹೊತ್ತಿಗೆ ಅವಳ ಹೆಸರಿನಿಂದಲೇ 'ಕುರವಂಜಿ' ಎಂಬ ವಿಶಿಷ್ಟ ಪ್ರದರ್ಶನ ಹುಟ್ಟಿ, ಅದು ಪ್ರದರ್ಶನಗೊಂಡಿದ್ದರ ಬಗ್ಗೆ ಶಾಸನಗಳಲ್ಲಿ ದಾಖಲೆಯಾಗಿದೆ. ಆದರೆ ಕೊರವಂಜಿ ಕನ್ನಡ ಸಾಹಿತ್ಯವನ್ನು ಪ್ರವೇಶಿಸಿದ್ದು ೧೧೧೫ರ 'ನೇಮಿನಾಥ ಪುರಾಣ'ದ ಮೂಲಕ. ಇನ್ನು ಇವಳು ಜಾನಪದ ಕಲೆಯಲ್ಲಿ ಪ್ರವೇಶ ಪಡೆದದ್ದು ಅಪರಾಳ ತಮ್ಮಣ್ಣನ ಪಾರಿಜಾತ ಕೃತಿ ಕುಲಗೋಡು ತಮ್ಮಣ್ಣನಿಂದ ಆಟವಾಗಿ ಪರಿವರ್ತನೆ ಹೊಂದಿದಾಗ. ಅಂದರೆ ಕುಲಗೋಡು ತಮ್ಮಣ್ಣನ ಕಾಲ ೧೯ನೇ ಶತಮಾನದಲ್ಲಿ (೧೮೦೦-೧೮೭೩).[೪] ಇದಕ್ಕೂ ಮುಂಚಿನ ಜನಪದ ಕಲೆಗಳಲ್ಲಿ ಪ್ರವೇಶ ಪಡೆದ ಸಾಧ್ಯತೆ ಇಲ್ಲದಿಲ್ಲ. ಆದರೆ ನಿಖರವಾದ ದಾಖಲೆ ದೊರೆಯುವದು ಮಾತ್ರ ೧೯ನೇ ಶತಮಾನದಲ್ಲೆ. ದೊರೆತ ದಾಖಲೆಗಳನ್ನು ನೋಡಿದಾಗ ಕನ್ನಡಕ್ಕಿಂತ ಬಹಳ ಹಿಂದೆಯೇ ತಮಿಳು ಸಾಹಿತ್ಯ, ಕಲೆಗಳಲ್ಲಿ ಕೊರವಂಜಿ ಪ್ರವೇಶ ಪಡೆದಿದ್ದಾಳೆ. ಆದರೆ ತೆಲಗು ಸಾಹಿತ್ಯ, ಕಲೆಗಳಲ್ಲಿ ಇಂತಹ ದಾಖಲುಗಳು ವಿರಳ. ಹೀಗಾಗಿ ಕೊರವಂಜಿ ಕನ್ನಡ ಸಾಹಿತ್ಯ, ಕಲೆಗಳಲ್ಲಿ ತಮಿಳು ಸಾಹಿತ್ಯ, ಕಲೆಗಳ ಮೂಲಕವೇ ಪ್ರವೇಶ ಪಡೆದಿರುವ ಸಾಧ್ಯತೆಗಳೇ ಹೆಚ್ಚಾಗಿವೆ.

### ೯.೨. ಕೃಷ್ಣ ಕೊರವಂಜಿ

ಕೃಷ್ಣ, ರುಕ್ಮಿಣಿಯರ ಕುರಿತು ಹಾಡುತ್ತಾ, ನರ್ತಿಸುತ್ತ ಆಡುವ ಕೋಲಾಟವೇ 'ಕೃಷ್ಣಕೊರವಂಜಿ'. ಈ ಕೋಲಾಟವನ್ನು ಆಡುವಾಗ ೩ ಸಾಲುಗಳಲ್ಲಿ ನಾಲ್ಕು ನಾಲ್ಕು ಜನ ನಿಂತು ಕೋಲು ಹಾಕುತ್ತಾ ಹಾಡುತ್ತಿರುತ್ತಾರೆ. ಜೊತೆಗೆ ಹಿಮ್ಮೇಳದವರು ಹಾಡುತ್ತಿರುತ್ತಾರೆ. ಇನ್ನಿಬ್ಬರು ಕೃಷ್ಣ ಮತ್ತು ಕೊರವಂಜಿ ವೇಷ ಧರಿಸಿ ಕೃಷ್ಣಕೊರವಂಜಿಯ ಪ್ರಸಂಗವನ್ನು ಅಭಿನಯಿಸುತ್ತಾ, ಕೋಲು ಹಾಕುತ್ತಾ ಹಾಡನ್ನು ಮುಂದುವರೆಸುತ್ತಾರೆ. ಈ ಕೋಲಾಟ ಆಡುವಾಗ ಇವರು ಕೃಷ್ಣಕೊರವಂಜಿ ಹಾಡನ್ನು ಹಾಡುತ್ತಾರೆ. ಹಾಡು ಕೃಷ್ಣಕೊರವಂಜಿಯಾಗಿ ರುಕ್ಮಿಣಿಗೆ ಕಣಿ ಹೇಳುವ ಪ್ರಸಂಗವನ್ನು ಒಳಗೊಂಡಿದೆ.[೫]

ರುಕ್ಮಿಣಿ ಕೃಷ್ಣನ ನಿರೀಕ್ಷೆಯಲ್ಲಿರುತ್ತಾಳೆ. ಆಗ ಅವಳ ಮನಸ್ಸಿನಲ್ಲೇನಿದೆ ಎಂದು ತಿಳಿಯಬಯಸಿದ ಕೃಷ್ಣ, ತಾನೇ ಕೊರವಂಜಿ ವೇಷ ಧರಿಸಿ ಬರುತ್ತಾನೆ. ಕೊರವಂಜಿಯನ್ನು ನೋಡಿದ ರುಕ್ಮಿಣಿ ಅವಳನ್ನು ಕರೆಯಲು ಕಳಿಸುತ್ತಾಳೆ. ಗಂಡಸರಿಲ್ಲದ ಮನೆ ಪ್ರವೇಶಿಸುವುದಿಲ್ಲ ಎಂದು ಕೊರವಂಜಿ ಹೇಳಿದಾಗ, ನಮ್ಮ ರುಕ್ಮಿಣಿ ಇರುವಾಗ ಭಯಬೇಡ ಎಂದು ಕರೆತರುತ್ತಾರೆ. ಆಗ ಬಂದ ಕೊರವಂಜಿ 'ನಿನ್ನ ಸ್ವಾಮಿ ಬರುತ್ತಾನೆ' ಎಂದು ಕಣಿ ಹೇಳಿ ಅವಳ ಮನಸ್ಸನ್ನು ಪರೀಕ್ಷಿಸಿ, ದುಗುಡದಲ್ಲಿರುವ ಅವಳಿಗೆ ಸಮಾಧಾನ ಮಾಡಿ ತೆರಳುತ್ತಾಳೆ. ನಂತರ ಬಂದು ಅವಳನ್ನು ವರಿಸುತ್ತಾನೆ. ಹೀಗೆ ಕೃಷ್ಣ ಕೊರವಂಜಿ ವೇಷ ಧರಿಸಿ ಕಣಿ ಹೇಳುವ 'ಕೃಷ್ಣಕೊರವಂಜಿ' ಹಾಡನ್ನು ಹೇಳುತ್ತಾ ಇಲ್ಲಿ ಕೋಲಾಟ ಆಡುತ್ತಾರೆ.

ಈ ಜನಪದ ಕಥನಗೀತವನ್ನು ಬಯಲುನಾಡಿನ ಹಳ್ಳಿಗಳಲ್ಲಿ ಗೋಕುಲಾಷ್ಟಮಿಯ ದಿನ ಬೆಳದಿಂಗಳಲ್ಲಿ ಗೊಲ್ಲರು ಕೋಲು ಹಾಕುತ್ತಾ ಹಾಡುತ್ತಾರೆ.[೬] ಅಂತೆಯೇ ದೊಂಬಿದಾಸರು ಹಾಡುವ ಪೌರಾಣಿಕ ಹಾಡುಗಳಲ್ಲಿಯೂ ಈ ಹಾಡು ಇದೆ.[೭]

ಕೋಲಾಟ ಆಡುವಾಗ ಹೆಚ್ಚಾಗಿ ಚಿಕ್ಕ ಚಿಕ್ಕ ಹಾಡುಗಳನ್ನು ಹಾಡುತ್ತಾರೆ. ಆದರೆ 'ಕೃಷ್ಣಕೊರವಂಜಿ' ಕೋಲಿನ ಆಟದಲ್ಲಿ ಇಡೀ ಒಂದು ಕಥೆಯನ್ನು ಕೋಲಾಟದಲ್ಲಿ ಹಾಡುತ್ತಾರೆ. ಈ ಆಟದಲ್ಲಿ ಏಕಕಾಲಕ್ಕೆ ೩ ರೀತಿಯ ಕಲೆಗಳು ಪ್ರದರ್ಶನಗೊಳ್ಳುತ್ತಿರುತ್ತವೆ. ಕೋಲಾಟದಲ್ಲಿ ಕೋಲು ಹಾಕುತ್ತಾ ನೃತ್ಯ ಮಾಡುತ್ತಿರುತ್ತಾರೆ. ಜೊತೆಗೆ ಕೃಷ್ಣಕೊರವಂಜಿ ಹಾಡನ್ನು ಹಾಡುತ್ತಿರುತ್ತಾರೆ. ಇಲ್ಲಿ ರುಕ್ಮಿಣಿ ಹಾಗೂ ಕೊರವಂಜಿ ವೇಷಧರಿಸಿದವರು ಆ ಹಾಡನ್ನು ಅದೇ ರೀತಿ ಅಭಿನಯಿಸುತ್ತಾ ನೃತ್ಯ ಮಾಡುತ್ತಿರುತ್ತಾರೆ. ಕೃಷ್ಣಕೊರವಂಜಿ ಕೋಲಾಟದ ನೃತ್ಯ, ಹಾಡು, ಹಾಗೂ ಅಭಿನಯ ಹೀಗೆ ೩ ಕಲೆಗಳನ್ನ ಸಮನ್ವಯಗೊಳಿಸಿಕೊಂಡ ಪ್ರದರ್ಶನ ಕಲೆಯಾಗಿದೆ. ಕೊರವಂಜಿಯದೇ ಇಲ್ಲಿ ಪ್ರಧಾನ ಪಾತ್ರ ಇರುವದರಿಂದ ಇದಕ್ಕೆ 'ಕೊರವಂಜಿ ಕೋಲು' ಎನ್ನುತ್ತಾರೆ.[೮]

ಪ್ರಸನ್ನ ವೆಂಕಟದಾಸರ 'ನಾರದ ಕೊರವಂಜಿ', ವಾದಿರಾಜರ 'ನಾರದ ಕೊರವಂಜಿ' ಮುಂತಾದ ಕೃತಿಗಳಲ್ಲಿ ಕೃಷ್ಣನಿಗಾಗಿ ಕಾಯುತ್ತಿರುವ ರುಕ್ಮಿಣಿಯನ್ನು ಸಮಾಧಾನ ಪಡಿಸಲು ನಾರದ ಕೊರವಂಜಿ ವೇಷ ಧರಿಸುತ್ತಾನೆ.

### ೯.೩. ಕೊರವಂಜಿ ಕೋಲು

ಇದು ಶ್ರೀಕೃಷ್ಣ ಮತ್ತು ಆತನ ಪ್ರೇಯಸಿ ಸತ್ಯಭಾಮಳ ಕಥೆಯನ್ನು ಒಳಗೊಂಡ ಕೋಲಾಟ. ಇಲ್ಲಿ ಕೊರವಂಜಿ ವೇಷದ ಸತ್ಯಭಾಮೆಯನ್ನು ಪುರುಷ ವೇಷದ ಕೊರವಂಜಿ ಹಿಡಿಯಲು ಪ್ರಯತ್ನಿಸುತ್ತಾನೆ. ಆಗ ಕೊರವಂಜಿ ವೇಷದ ಸತ್ಯಭಾಮೆ ಕೋಲು ಆಡುತ್ತಿರುವವರ ಮಧ್ಯದಲ್ಲಿ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಅವಳನ್ನು ಅಟ್ಟಿಸಿಕೊಂಡು ಹೋಗಿ ಕೊನೆಗೆ ಅವಳನ್ನು ಹಿಡಿಯುತ್ತಾನೆ. ಇದು ಹಾಡು, ಕುಣಿತ, ಸಂಭಾಷಣೆ, ಹಾಸ್ಯ ಬೈಗುಳ ಎಲ್ಲವನ್ನು ಒಳಗೊಂಡ ನೃತ್ಯರೂಪಕವಾಗಿದೆ. ಈ ಆಟವು ಮಂಡ್ಯ, ಹಳೇ ಮೈಸೂರು, ಬೆಂಗಳೂರು, ಹಾಸನ, ತುಮಕೂರು, ಚಿತ್ರದುರ್ಗ ಮುಂತಾದ ಭಾಗಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ.[೯]

'ಕೃಷ್ಣಕೊರವಂಜಿ' ಕೋಲಾಟದಲ್ಲಿ ಕೃಷ್ಣ ಕಣಿ ಹೇಳಲು ಕೊರವಂಜಿ ವೇಷ ಧರಿಸುತ್ತಾನೆ. ಆದರೆ ಇಲ್ಲಿ ಸತ್ಯಭಾಮೆ ಕೊರವಂಜಿ ವೇಷ ಧರಿಸುತ್ತಾಳೆ. ಜೊತೆಗೆ ಪುರುಷ ಕೊರವಂಜಿ ಸಹ ಇರುತ್ತಾನೆ. ಹೀಗೆ ಇಬ್ಬರು ಕೊರವಂಜಿಗಳ ನಡುವೆ ಈ ಆಟ ನಡೆಯುವುದು ಕುತೂಹಲ ಮೂಡಿಸುತ್ತದೆ.

### ೯.೪. ಕೊರಮರ ಕೋಲು

ಚಕ್ರಾಕಾರವಾಗಿ ಸುತ್ತಿ ಕೋಲು ಆಡುವ ಕೋಲಾಟವನ್ನು ಕೊರಮರ ಕೋಲು ಎನ್ನುತ್ತಾರೆ. ಕೊರಮರೇ ಇದನ್ನು ಪ್ರಾರಂಭಿಸಿದ್ದರಿಂದ ಇದಕ್ಕೆ ಕೊರಮರ ಕೋಲು ಎಂದು ಹೆಸರು ಬಂದಿವೆ ಎಂದು ಹೇಳಲಾಗುತ್ತಿದೆ. ಇವರ ಕೋಲು ಪದಗಳಲ್ಲಿ ನಾಗರೀಕತೆಯ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ.[೧೦]

## ೯.೫. ಕೊರವಂಜಿ ಕೋಲಾಟ

ಕೃಷ್ಣ ಮತ್ತು ಸತ್ಯಭಾಮೆಯ ಕಥೆಯನ್ನೇ ಆಧಾರವಾಗಿಟ್ಟುಕೊಂಡು ಹುಟ್ಟಿಕೊಂಡ ಆಟವೇ ಕೊರವಂಜಿ ಕೋಲಾಟ. ನಾರದ ತಂದುಕೊಟ್ಟ ಪಾರಿಜಾತ ಪುಷ್ಪವನ್ನು ಕೃಷ್ಣ ರುಕ್ಮಿಣಿಗೆ ನೀಡಿದಾಗ ಅದು ತನಗೆ ಸೇರಬೇಕೆಂದು ಸತ್ಯಭಾಮೆ ಹಠ ತೆಗೆಯುತ್ತಾಳೆ. ಅವಳನ್ನು ಸಂತೈಸಲು ಕೃಷ್ಣ ಪಾರಿಜಾತದ ಮರವನ್ನೆ ನಿನಗೆ ತಂದು ನೀಡುವುದಾಗಿ ಭಾಷೆ ಕೊಟ್ಟಿರುತ್ತಾನೆ. ದೇವಲೋಕಕ್ಕೆ ತೆರಳಿದಾಗ ಪಾರಿಜಾತ ವೃಕ್ಷಕಂಡ ಭಾಮೆ ಮತ್ತೆ ಅದಕ್ಕಾಗಿ ಹಠ ಹಿಡಿಯುತ್ತಾಳೆ. ಇಂದ್ರನೊಂದಿಗೆ ಯುದ್ಧಮಾಡಿ ಪಾರಿಜಾತ ವೃಕ್ಷವನ್ನು ಭೂಲೋಕಕ್ಕೆ ತರುತ್ತಾಳೆ. ಆ ಕಥೆಯನ್ನೇ ಆಧಾರವಾಗಿಟ್ಟುಕೊಂಡು ಹಠಮಾರಿ ಹೆಂಡತಿಯಿಂದ ಬೆಸ್ತುಬಿಳುವ ಕೃಷ್ಣನ ಸ್ಥಿತಿಯನ್ನು ತೋರಿಸುವ ರೀತಿಯಲ್ಲಿ ಈ ಕೋಲಾಟ ರಚನೆಯಾಗಿದೆ.

ಈ ಕೋಲಾಟದಲ್ಲಿ ಕೊರಮಿ, ಕೊರಮ, ಕೊರಮಿ ಅಪ್ಪ, ಬುಡಬುಡಿಕೆಯವ, ಜೋಯಿಸ ಹೀಗೆ ೫ ಪಾತ್ರಗಳು ಬರುತ್ತವೆ. ಇಲ್ಲಿ ಪಾತ್ರಗಳು ಅವರವರ ಪಾತ್ರಕ್ಕೆ ತಕ್ಕಂತೆ ವೇಷಭೂಷಣಗಳನ್ನು ಧರಿಸಿರುತ್ತವೆ. ಇಲ್ಲಿನ ಕೊರವಂಜಿ ವೇಷ ಮಾತ್ರ ತುಂಬಾ ವಿಶಿಷ್ಟವಾಗಿರುತ್ತದೆ. ಆಕೆ ಮೊಣಕಾಲಿನವರೆಗೆ ಕಂಬಿ ಸೀರೆಯನ್ನು ಉಟ್ಟು, ಬಾಳಿಕಾಯಿ ನೀರಿಗೆ ಮಾಡಿ ಸೊಂಟಕ್ಕೆ ಗಂಟು ಕಟ್ಟಿಕೊಂಡಿರುತ್ತಾಳೆ. ಸೀರೆಯ ಎಡಭಾಗಕ್ಕೆ ಎಲೆಚೀಲ (ಪುಡಿಚೀಲ)ವನ್ನು ಸಿಕ್ಕಿಸಿರುತ್ತಾಳೆ. ತಲೆಯನ್ನು ಎಡಭಾಗಕ್ಕೆ ಗಂಟು ಹಾಕಿಕೊಂಡು, ಹಣೆ ಮೇಲೆ ಅಗಲವಾದ ಕುಂಕುಮವನ್ನು ಧರಿಸಿ, ದವಡೆಯಲ್ಲಿ ಎಲೆಯಡಿಕೆ ಇಟ್ಟುಕೊಂಡಿರುತ್ತಾಳೆ. ತಲೆಯ ಮೇಲೆ ಅಥವಾ ಕಂಕುಳಲ್ಲಿ ಮೂರು ನಾಮ ಹಚ್ಚಿ ಕವಡೆಸರ ಜೋತುಬಿದ್ದ ಬೇವಿನ ಸೊಪ್ಪಿನ ಹೆಡಿಗೆಯನ್ನು ಹೊತ್ತಿರುತ್ತಾಳೆ. ಕಾಲಲ್ಲಿ ಗೆಜ್ಜೆ ಧರಿಸಿ, ಕಣಿ ಹೇಳುವ ಕೋಲನ್ನು ಕೈಯಲ್ಲಿ ಹಿಡಿದಿರುತ್ತಾಳೆ. ಇಲ್ಲಿ ಕೊರವಂಜಿ ವೇಷ ಹಾಕುವವರು ಹೆಚ್ಚಾಗಿ ಪುರುಷರೇ

ಈ ಆಟ ನಡೆಯುವದು ಹೆಚ್ಚಾಗಿ ವಿಶಾಲವಾದ ಬಯಲ ಸ್ಥಳದಲ್ಲಿ. ಇದಕ್ಕಾಗಿ ಯಾವುದೇ ವಿಶೇಷ ವೇದಿಕೆ ಏರ್ಪಟ್ಟಿರುವುದಿಲ್ಲ. ಆಟ ಪ್ರಾರಂಭವಾಗುವ ಪೂರ್ವದಲ್ಲಿ ೨ ಸಾಲಿನಲ್ಲಿ ೮, ೮ ಜನರು ಕೋಲು ಹಿಡಿದು ಕುಳಿತಿರುತ್ತಾರೆ. ೨ ಸಾಲಿನ ನಡುವೆ ಸುಮಾರು ೧೦ ಅಡಿಯಷ್ಟು ಜಾಗ ಬಿಟ್ಟಿರುತ್ತಾರೆ. ಇವರ ಸುತ್ತಲೂ ಆಟ ನೋಡಲು ಪ್ರೇಕ್ಷಕರು ಸೇರಿರುತ್ತಾರೆ. ಪ್ರಾರಂಭದಲ್ಲಿ ಕೋಲಾಟಗಾರರು ತಾಳಗುಟುಕು ಹಾಕುತ್ತಾರೆ. ಆಗ ಕೊರವಂಜಿ ಕಣಿ ಹೇಳುವ ರೀತಿಯಲ್ಲಿ ವಯ್ಯಾರದಿಂದ ಸಾಗುತ್ತಾ ಬರುತ್ತಾಳೆ. ಆಕೆ ತಾನು ಆ ದೇಶ, ಈ ದೇಶ ಸುತ್ತಿಬಂದೆ, ಮೈಸೂರಿನಲ್ಲಿರುವ ಮಹಿಷಾಸುರನನ್ನು ನೋಡಿ ಬಂದೆ ಎಂದು ಹೇಳುತ್ತಾ ಬರುತ್ತಾಳೆ. ಆಗ ಎದುರಿಗೆ ಬಂದ ಕೊರಮ ತನ್ನ ಬಗ್ಗೆ ಮತ್ತು ತನ್ನ ಊರಿನ ಬಗ್ಗೆ ಕಣಿ ಹೇಳಲು ಕೇಳುತ್ತಾನೆ. ಇವಳ ದೇಶಸಂಚಾರದ ಮಾತು, ವಯ್ಯಾರಕ್ಕೆ ಮನಸೋತ ಆತ ಅವಳನ್ನು ಮದುವೆಯಾಗಲು ಬಯಸುತ್ತಾನೆ. ಆಗ ಕೊರಮಿಯ ತಂದೆಯನ್ನು ಒಪ್ಪಿಸುವ ಸಲುವಾಗಿ ಬುಡಬುಡಿಕೆಯ ವೇಷವನ್ನು ಧರಿಸಿಹೋಗುತ್ತಾನೆ. ಇಲ್ಲಿ ಬುಡಬುಡಿಕೆಯ ವೇಷಧಾರಣೆಯನ್ನು ಬೇರೊಬ್ಬ ಮಾಡುತ್ತಾನೆ.

ಕೊರಮಿಯ ತಂದೆಯ ಹತ್ತಿರ ಹೋದ ಬುಡಬುಡಿಕೆಯವ 'ನಿನ್ನ ಮನೆ ಉದ್ಧಾರವಾಗಬೇಕಾದರೆ, ನಿನ್ನ ಮಗಳನ್ನ ಇದೇ ಊರಿನ ಕೊರಮನಿಗೆ ಕೊಟ್ಟು ಲಗ್ನಮಾಡು' ಎಂದು ಹೇಳುತ್ತಾನೆ. ಬುಡಬುಡಿಕೆಯವನ ಮಾತಿಗೆ ಚಾಚೂತಪ್ಪದ ಕೊರಮನು ಮಗಳಾದ ಕೊರಮಿಯ ಮದುವೆ ಏರ್ಪಡಿಸುತ್ತಾನೆ. ಈ ಸಂದರ್ಭದಲ್ಲಿ ಹಾಜರಾದ ಬ್ರಾಹ್ಮಣ ಜೋಯಿಸ ಮದುವೆ ಮಾಡಿಸುತ್ತಾನೆ. ಆತನ ಪಾತ್ರ ವಿನೋದದಿಂದ ಕೂಡಿರುತ್ತದೆ. ಅಪಶಕುನದಿಂದ ಕೂಡಿದ ಕೊರಮ–ಕೊರಮಿಯ ಮದುವೆ ನೋಡಲು ತಮಾಷೆಯಾಗಿರುತ್ತದೆ. ಕೊರಮ–ಕೊರಮಿಯ ಮದುವೆಯ ನಂತರ ಅವರ ಸಂಸಾರ ಬಿಚ್ಚಿಕೊಳ್ಳುತ್ತದೆ. ಕೊರಮಿ ತನ್ನ ಗಂಡನ ಬಗ್ಗೆ

ಹಟ್ಟಿಯಲ್ಲಿ ಮಲಗದೆ ಚಾವಡಿಯಲ್ಲಿ ಮಲಗುತ್ತಾನೆ.
ಕಂಡವರ ಮಕ್ಕಳನ್ನು ಎತ್ತಿ ಮುದ್ದಿಸುತ್ತಾನೆ.
ಮೂಗಿಗೆ ತಕ್ಕ ಮೂಗೂತಿ ಇಲ್ಲ
ಹಿಟ್ಟು ಮಾಡಿದರೆ ರೊಟ್ಟಿ ಬೇಕೆನ್ನುತ್ತಾನೆ.[೧೧]

ಎಂದು ನೆರೆದಿರುವ ಪ್ರೇಕ್ಷಕರತ್ತ ಕೈಮಾಡುತ್ತಾ ದೂರುತ್ತಾಳೆ. ಕೊರಮ ಸಂತೆಯಿಂದ ತಂದ ವಿಳ್ಳೆದೆಲೆಯನ್ನು ಕೊರಮಿ ಬೇಕೆಂತಲೆ ಒಲೆ ತಡಿಯ ಮೇಲೆ ಇಡುತ್ತಾಳೆ. ತಲೆನೋವು, ಹೊಟ್ಟೆನೊವು, ಹಬ್ಬ, ಹುಣ್ಣಿಮೆಯ ನೆಪ ಹೇಳಿ ಅಪ್ಪನ ಮನೆಗೆ ಓಡಿಹೋಗುತ್ತಾಳೆ. ಹೀಗೆ ಓಡಿ ಹೋಗುವ ದೃಶ್ಯವನ್ನು ತೋರಿಸಲು ಕೊರಮಿ ಓಡಿಹೋಗಿ ಯಾರಾದರೂ ಪ್ರೇಕ್ಷಕರ ನಡುವೆಯೇ ಅವಿತು ಕುಳಿತುಕೊಳ್ಳುತ್ತಾಳೆ. ಕದ್ದು ಓಡಿಹೋದ ಕೊರವಂಜಿಯನ್ನು ಹುಡುಕುತ್ತಾ,

"ಮಾಯಕಾರ ಬಡ್ಡಿ ಇವಳು
ಮಂತ್ರಗಾರ ಬಡ್ಡಿ ಇವಳು
ಎತ್ತಗೋದಳಪ್ಪ ನೀವು ಕಂಡ್ರೆನ್ಯಾ"[೧೨]

ಎಂದು ಹಾಡಿ ಕೇಳುತ್ತಾ ಬರುತ್ತಾನೆ. ಅದನ್ನು ನೋಡಿ ಎಲ್ಲರೂ ನಾವು ನೋಡಿಲ್ಲ, ಎಂದು ಕೂಗಿದರೆ, ಮತ್ತೆ ಕೆಲವರು ಅಲ್ಲಿ ಕುಂತವ್ಳೆ, ಇಲ್ಲಿ ಕುಂತವ್ಳೆ ಎಂದು ತಮಾಷೆ ಮಾಡುತ್ತಾರೆ. ಕಡೆಗೆ ಬೇಸತ್ತ ಕೊರಮ ಇವಳ ಸಹವಾಸವೇ ಬೇಡವೆಂದು ಪ್ರೇಕ್ಷಕರತ್ತ ಕೈಮುಗಿಯುತ್ತಾನೆ. ಎಲ್ಲರೂ ನಗೆಗಡಲಲ್ಲಿ ತೇಲುತ್ತಾರೆ. ಹಾಡು, ಕಥನಗೀತೆ, ಒಡಬು, ಹೊಗಳಿಕೆ, ಬೈಗುಳ, ವ್ಯಂಗ್ಯ ಎಲ್ಲವನ್ನು ಒಳಗೊಂಡ ಈ ಆಟ ಒಂದೂವರೆಯಿಂದ ಎರಡು ಘಂಟೆ ನಡೆಯುತ್ತದೆ.

ಜನಪದರು ತಮ್ಮ ಬದುಕಿನ ಘಟನೆಗಳನ್ನು ದೇವತೆಗಳಿಗೂ ಹೋಲಿಸಿ ಕಥೆ ಕಾವ್ಯ ರಚಿಸಿದ್ದಾರೆ. ಗಂಗೆಗೌರಿ, ಕೃಷ್ಣರುಕ್ಮಿಣಿ, ಸತ್ಯಭಾಮೆಯರು ತಮ್ಮಂತೆ ಎಂದು ಭಾವಿಸಿ ನಮ್ಮ ಜೀವನದ ಘಟನೆಗಳನ್ನು ಅವರಿಗೆ ಆರೋಪಿಸಿದ್ದಾರೆ. ಹೀಗಾಗಿ ಗಂಗೆಗೌರಿಯರು, ರುಕ್ಮಿಣಿ ಸತ್ಯಭಾಮೆಯರು ಸವತಿಮಕ್ಕಳಾಗಿ ಜನರಂತೆ ಕಚ್ಚಾಡುತ್ತಾರೆ, ದ್ವೇಷ ಸಾಧಿಸುತ್ತಾರೆ. ಹೀಗೆ ಜನರ ಜೀವನವನ್ನು ದೇವರಿಗೆ ಹೋಲಿಸಿದ ಜನಪದರು ಇತ್ತ ದೇವತೆಗಳ ಜೀವನದ ಘಟನೆಗಳನ್ನು ತಮಗೆ ಹೋಲಿಸಿಕೊಂಡು ಆಟಮಾಡಿದ್ದಾರೆ. ಸತ್ಯಭಾಮೆಯ ಹಠಮಾರಿತನದಿಂದ ಸವತಿ ಮತ್ಸರ ಹುಟ್ಟಿತು. ಗಂಡನು ಕೋಪಗೊಂಡು ಕೆಲಕಾಲ ದೂರವೂ ಆದ. ಇದೆಲ್ಲವೂ ಆದದ್ದು ಅವಳ

ಹಠಮಾರಿ ಗುಣದಿಂದ. ಅದನ್ನು ಈ ಆಟದಲ್ಲಿ ಕೊರಮಿ ತನ್ನ ಹಠಮಾರಿತನದಿಂದ ತನ್ನ ಗಂಡನ ಬಗ್ಗೆ ತಾನೇ ದೂರು ಹೇಳಿ ತಮ್ಮ ಸಂಸಾರದ ಗುಟ್ಟನ್ನು ರಟ್ಟು ಮಾಡುತ್ತಾಳೆ. ಪದೇ ಪದೇ ತವರಿಗೆ ಓಡಿ ಹೋಗುತ್ತಾಳೆ. ಇವಳ ಈ ವರ್ತನೆಯಿಂದ ಬೇಸತ್ತ ಗಂಡ ಕೊನೆಗೆ ಅವಳಿಂದ ದೂರವೇ ಉಳಿಯುವ ನಿರ್ಧಾರಕ್ಕೆ ಬರುತ್ತಾನೆ.

ಸಂಸಾರದಲ್ಲಿ ಹೊಂದಾಣಿಕೆ ಮುಖ್ಯ ಎಂಬುದನ್ನು ಈ ಆಟ ತಿಳಿಸುತ್ತದೆ. ಈ ಆಟದಲ್ಲಿ ಕೋಲಾಟ, ಹಾಡು, ಅಭಿನಯ ಎಲ್ಲವು ಸಮ್ಮಿಳಿತಗೊಂಡಿವೆ. ಹಿ.ಚಿ. ಬೋರಲಿಂಗಯ್ಯ ಮತ್ತು ಸ.ಚಿ. ರಮೇಶ ಅವರು ತಮ್ಮ ಕೃತಿಗಳಲ್ಲಿ ಈ ಕಲೆಯನ್ನು ಸಮೃದ್ಧಿ ಹಾಗೂ ಫಲವಂತಿಕೆಯ ಆಚರಣೆಯ ಕಲೆಗಳ ಸಾಲಿನಲ್ಲಿ ಸೇರಿಸುತ್ತಾರೆ. ಬಹುಶಃ ಮಕ್ಕಳಿಗಾಗಿಯೋ, ಅಥವಾ ಮಳೆ ಬೆಳೆಗಾಗಿಯೋ ಈ ಆಟವನ್ನು ಆಡಿಸುವ ಪರಂಪರೆ ಇದ್ದಿರಬಹುದು. ಈ ಆಟ ಮಂಡ್ಯ ಜಿಲ್ಲೆಯಲ್ಲಿ ವ್ಯಾಪಕವಾಗಿ ಕಂಡುಬರುತ್ತದೆ. ಜೊತೆಗೆ ಮೈಸೂರು, ಬೆಂಗಳೂರು, ಹಾಸನ, ತುಮಕೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ಈ ಆಟವನ್ನು ಆಡುತ್ತಾರೆ.

**೯.೬. ಕುರುವನ್-ಕುರತ್ತಿ ಆಟ್ಟಮ್**

ನಮ್ಮ ಕೊರವಂಜಿ ಕೋಲಾಟವನ್ನು ಹೋಲುವ 'ಕುರುವನ್-ಕುರತ್ತಿ ಆಟ್ಟಮ್' ಎಂಬ ಪ್ರದರ್ಶನ ಕಲೆ ತಮಿಳುನಾಡಿನಲ್ಲಿದೆ.[೧೨] ಈ ಆಟದಲ್ಲಿ ಪಾತ್ರಧಾರಿಗಳು ಕೊರವ, ಕೊರವಿಯಂತೆ ವೇಷ ಹಾಕಿಕೊಂಡು ಆಟ, ಆಡುವುದರಿಂದ ಇದಕ್ಕೆ 'ಕೊರವ-ಕೊರತಿ ಆಟ' 'ನರಿ ಕೊರತಿ ಆಟ' ಎಂದು ಕರೆಯುತ್ತಾರೆ. ತಮಿಳುನಾಡಿನಲ್ಲಿ ರಾಜ ರಾಣಿ ಆಟ ಪ್ರಸಿದ್ಧವಾಗುವ ಮುನ್ನವೇ ಈ ಆಟ ಪ್ರಸಿದ್ಧವಾಗಿತ್ತು. ಇದು ರಾಜರಾಣಿ ಆಟದ ಮುಂದುವರಿದ ಭಾಗವಾಗಿಯೂ, ಕರಗ ಕುಣಿತದ ಸನಿಹದ ಆಟವಾಗಿಯೂ ಪ್ರದರ್ಶನವಾಗುತ್ತದೆ. ಮೊದಲು ಇದನ್ನು ಕೊರವ ಎಡಪಂಥಿಯರು, ಬಲಪಂಥಿಯರು ಆಡುತ್ತಿದ್ದರು. ಕಾಲಾನಂತರ ಬೇರೆ ಜಾತಿಯ ಜನರು ಆಡುತ್ತಿದ್ದಾರೆ.

ಕರಗ ಆಟದಲ್ಲಿ ಬರುವ ಕೊರವ ಕೊರತಿ ಆಟದಲ್ಲಿ ಇವರಿಗೆ ನಿರ್ದಿಷ್ಟ ಅಲಂಕಾರ, ವೇಷಭೂಷಣ ಇರುವುದಿಲ್ಲ. ಕರಗ ಕುಣಿತದಲ್ಲಿ ಹೆಂಗಸರೇ ಕೊರತಿ ವೇಷಧರಿಸುತ್ತಾರೆ. ಆದರೆ ರಾಜಾರಾಣಿ ಕೊರತಿ ಆಟದಲ್ಲಿ ಕೊರವ-ಕೊರತಿ ಆಟಗಳಿಗೆ ನಿರ್ದಿಷ್ಟ ಬಟ್ಟೆಗಳಿವೆ. ೪೦ವರ್ಷಗಳ ಹಿಂದೆ ಕೊರವ ಕೇವಲ ಲಂಗೂಟಿ, ಕೊರವಿ ೩ ಸೀರೆಯ ಲಂಗ ಧರಿಸಿ ಆಟ ಆಡುತ್ತಿದ್ದರು. ಇವತ್ತು ಕೊರವ ಟಾವೆಲು, ರುಮಾಲು, ಬಿಲ್ಲುಬಾಣ, ಮಣಿಸರ ಧರಿಸಿರುತ್ತಾನೆ. ಕೊರತಿ ಕುಪ್ಪಸ, ದಾವನಿ ಕಾಲ್ಗೆಜ್ಜೆ, ಬಣ್ಣಬಣ್ಣದ ಸರ, ತೋಳಲ್ಲಿ ಉದ್ದದ ಚೀಲ ಹಾಕಿಕೊಂಡಿರುತ್ತಾಳೆ.

ಕೊರಮ ಕೊರತಿ ಆಟದಲ್ಲಿ ಕೊರವನ ಬಳಿಯಿರುವ ತಗಡಿನ ಡಬ್ಬದಲ್ಲಿ ಮಾಂಸದ ಸಾರು, ಅನ್ನ ಇರುವಂತೆಯೂ ಅದಕ್ಕಾಗಿ ಇಬ್ಬರು ಜಗಳವಾಡುವಂತೆ ನಟಿಸುತ್ತಾರೆ. ಕೊರಮ ಮತ್ತು ಕೊರಮಿ ಮಧ್ಯ ಹಾಸ್ಯಗಾರನಿರುತ್ತಾನೆ. ಇವರಿಬ್ಬರೂ ತಮ್ಮ ಕತೆಯನ್ನು ಅವನ ಹತ್ತಿರ ಬಿಚ್ಚಿಡುತ್ತಾರೆ. ಕೊರತಿ ಸೂಜಿ ಮಣಿ, ಮಾರಿ ಮಗನ ಶಾಲೆಗೆಂದು ಗಲ್ಲೆಯಲ್ಲಿಟ್ಟಿದ ಹಣವನ್ನು ಕೊರಮ ಕದ್ದು

ಸಾರಾಯಿ ಕುಡಿದಿರುತ್ತಾನೆ. ಇದನ್ನು ಹಾಸ್ಯಗಾರನ ಹತ್ತಿರ ತೋಡಿಕೊಳ್ಳುತ್ತಾಳೆ. ಆತ ಕೊರಮನನ್ನು ಕಾರಣ ಕೇಳಿದಾಗ ಬೇಟೆ ಸಿಗದಕ್ಕೆ ಹಾಗೆ ಮಾಡಿದೆ ಈಗ ಮಗನ ಶಾಲೆಗೆ ಸೇರಿಸಲು ನಾನು ಒದ್ದಾಡುತ್ತಿದ್ದೇನೆ ಎಂದು ತಿಳಿಸುತ್ತಾನೆ. ಅನಗತ್ಯವಾಗಿ ಹಣ ಪೋಲು ಮಾಡಬಾರದು, ಸಾರಾಯಿ ಕುಡಿಯಬಾರದೆಂಬ ನೀತಿಯನ್ನು ಈ ಆಟ ತಿಳಿಸುತ್ತದೆ.

ದ್ರೌಪದಿ ಅಮ್ಮನ ದೇವಾಲಯಕ್ಕೆ, ಮುತ್ತಾರಮ್ಮನ ಜಾತ್ರೆಗೆ ಕೊರವ-ಕೊರತಿ ವೇಷಧರಿಸಿಕೊಂಡು ಹರಕೆ ತೀರಿಸುವ ಪದ್ಧತಿ ಇದೆ. ಆದ್ದರಿಂದ ಈ ಆಟ ಬೆಳೆದು ಬಂದಿದೆ. ಈ ಆಟಕ್ಕೆ ಜನಮನ್ನಣೆ ಇದ್ದು, ಮೇಲ್ವರ್ಗಕ್ಕೆ ಸೇರಿದ ಜನ ನಡೆಸುವ ಮನರಂಜನೆ ಕಾರ್ಯಕ್ರಮಗಳಲ್ಲಿ ಈ ಆಟ ಇರುತ್ತದೆ. ಮದುವೆ ಸಮಾರಂಭ, ಕಿವಿ ಚುಚ್ಚುವ ಶಾಸ್ತ್ರ, ರಾಜಕೀಯ ಕಾರ್ಯಕ್ರಮ, ವಿದೇಶಿ ಪ್ರವಾಸಿಗರ ಎದುರು, ಋತುಮತಿಯಾದಾಗಿನ ಆಚರಣೆಯ ವೇಳೆ ಈ ಆಟ ಪ್ರದರ್ಶಿಸುತ್ತಾರೆ.

ಈ ಆಟದಲ್ಲಿ ಕೊರವರ ಜೀವಿನ ವಿಧಾನ, ಕಸಬು, ಗಂಡಸರ ಹಾಗೂ ಹೆಂಗಸರ ಸಮಸ್ಯೆಗಳೇ ಹಾಡಾಗಿರುತ್ತವೆ. ಈ ಹಾಡಿಗೆ ತಕ್ಕಂತೆ ನಾದಸ್ವರ, ತಬಲ, ಪಂಬೈ, ಉರುಮಿ, ಗಿಡುಮಿಟ್ಟ ಮುಂತಾದ ವಾದ್ಯಗಳನ್ನು ಬಳಸುತ್ತಾರೆ. ಜೊತೆಗೆ ಕುಣಿತವು ಇರುತ್ತದೆ. ಹಾಡು, ಕುಣಿತ, ವಾದ್ಯಗಳ ಸಂಗೀತವನ್ನು ಮೇಳೈಸಿಕೊಂಡ ಕಲೆ ಇದಾಗಿದೆ. ಇಷ್ಟು ಪ್ರಸಿದ್ಧವಾದ ಕೊರವ-ಕೊರತಿ ಆಟ ಪ್ರಾಚೀನತೆಯನ್ನು ಹೊಂದಿದ್ದು ವಿಜಯನಗರ ಅರಸರ ಕಾಲದಲ್ಲಿ ಈ ಆಟ ನಡೆದಿದ್ದರ ಬಗ್ಗೆ ತಾಳೆಗರಿ ಪ್ರತಿಯಿಂದ ತಿಳಿದುಬರುತ್ತದೆ.

ತಮಿಳುನಾಡಿನ ಈ ಕೊರವ-ಕೊರತಿ ಆಟಕ್ಕೂ ನಮ್ಮ ಕೊರವಂಜಿ ಕೋಲಾಟಕ್ಕೂ ಒಂದಿಷ್ಟು ಸಾಮ್ಯತೆಗಳಿವೆ. ಕೊರವಂಜಿ ಕೋಲಾಟದಲ್ಲಿ ತಪ್ಪುಗಳನ್ನು ಮಾಡುವವಳು ಕೊರವಂಜಿ. ಆದರೆ ಕೊರವ-ಕೊರತಿ ಆಟದಲ್ಲಿ ತಪ್ಪುಗಳನ್ನು ಮಾಡುವವ ಕೊರವ. ಆದರೆ ಎರಡು ಕಲೆಗಳು ಹೇಳಹೊರಟಿರುವುದು ನೀತಿಪಾಠವನ್ನು. ಜನರು ತಪ್ಪು ಮಾಡಬಾರದು, ತಪ್ಪು ಮಾಡಿದರೆ ಜೀವನ ಹೇಗಾಗುತ್ತದೆ ಎಂಬುದನ್ನು ಈ ಎರಡು ಪ್ರದರ್ಶನ ಕಲೆಗಳು ತಿಳಿಸುತ್ತವೆ.

### ೯.೭. ಪಾರ್ವತಿ ಕೊರವಂಜಿ ಯಕ್ಷಗಾನ

ಮಳೆಯ ಕೋಟೆಯ ತಿರುಮಲೈಯನ ಕುಮಾರ ಗೋವಿಂದ ವೆಂಕಟ ಕವಿಯೂ 'ಪಾರ್ವತಿಕೊರವಂಜಿ' ಯಕ್ಷಗಾನವನ್ನು ಬರೆದಿದ್ದಾನೆ. 'ಪಾರ್ವತಿ ದೇವಿ ಕೌಸಲ್ಯಾದೇವಿಗೆ ರಾಮಜನನದ ವಿಷಯ ಹೇಳಿದ ಕೊರವಂಜಿ ಕಟ್ಲೆಯನ್ನು ಯಕ್ಷಗಾನ ಕಥಾ ಪ್ರಸಂಗದಿಂದ ಪೇಳೆನು' ಎನ್ನುತ್ತಾನೆ. ದಶರಥ ಮಹಾರಾಜನಿಗೆ ೩ ಜನ ಪತ್ನಿಯರಿದ್ದರು ಬಹಳ ದಿನವಾದರೂ ಮಕ್ಕಳಾಗಿರಲಿಲ್ಲ. ಮಕ್ಕಳ ಚಿಂತೆಯಲ್ಲಿರುವ ದಶರಥನಿಗೆ ನಾರದ ಬಂದು ನಿನಗೆ ಮಕ್ಕಳಾಗುತ್ತವೆಂದು ಹೇಳಿ ಹೋಗುತ್ತಾನೆ. ಗುರುಹಿರಿಯರನ್ನು ಇದರ ಬಗ್ಗೆ ವಿಚಾರಿಸಲು ಪುತ್ರಕಾಮೇಷ್ಠಿಯಾಗವನ್ನು ಮಾಡಲು ತಿಳಿಸುತ್ತಾರೆ. ಆಗ ಶಿವ ಪಾರ್ವತಿಗೆ ಕೊರವಂಜಿ ರೂಪದಲ್ಲಿ ಹೋಗಿ ರಾಮ ಜನನದ ವಿಷಯ ತಿಳಿಸಿ ಬಾ ಎಂದು ತಿಳಿಸುತ್ತಾನೆ. ಅವನ ಅಪ್ಪಣೆ ಮೇರೆಗೆ ಬಂದ ಪಾರ್ವತಿ

"ಒಂದು ಲೇಸಾ ನೆನೆದೆನಮ್ಮಾ ವನಿತೆ ನಿನ್ನ ಗರ್ಭದಲ್ಲಿ
ಮಂದರಾಧರನು ಜನಿಸ್ಯಾನು ಕೌಸಲ್ಯಾದೇವಿ ಕಂದನಾಗೀ ವಿಷ್ಣುರೂಪದಲ್ಲಿ"[೧೪]

ಎಂದು ಭವಿಷ್ಯ ನುಡಿಯುತ್ತಾಳೆ. ನಿಜವೇ ಎಂದು ಅನುಮಾನ ಪಟ್ಟ ಅವಳಿಗೆ ನಿಜವೆಂದು ಭರವಸೆ ನೀಡಿ, ಅಷ್ಟೊತ್ತಿಗೆ ಅಲ್ಲಿಗೆ ಬಂದ ಶಿವನೊಂದಿಗೆ ಕೈಲಾಸಕ್ಕೆ ತೆರಳುತ್ತಾಳೆ.

ಈ ಯಕ್ಷಗಾನ ಕೃತಿಯಲ್ಲಿ ವಚನ, ತ್ರಿಪದಿ, ದ್ವಿಪದಿ, ಕಂದಪದ್ಯ ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳು ಬಳಕೆಯಾಗಿವೆ. ಅಂತೆಯೇ ತ್ಯಾಗ ಮಾನೆ, ಆಟತಾಳ, ಏಕತಾಳ, ಯಾಲಪದ, ಭೂವಾಳಿ, ಸಂಗೀತವರ್ಣ ಮುಂತಾದ ರಾಗ ತಾಳಗಳು ಬಳಕೆಯಾಗಿವೆ.

**೯.೮. ಶ್ರೀಕೃಷ್ಣ ಪಾರಿಜಾತ**

ಪಾರಿಜಾತ ಕಥೆ ಭಾಗವತ, ಹರಿವಂಶ, ವಿಷ್ಣುಪುರಾಣಗಳಲ್ಲಿ ಬರುತ್ತದೆ. ಆ ಕಥೆಯನ್ನೆ ಅಲ್ಪಸ್ವಲ್ಪ ಮಾರ್ಪಾಟಿನೊಂದಿಗೆ ಅಪರಾಳ ತಮ್ಮಣ್ಣ ಕಾವ್ಯವಾಗಿ ಪರಿವರ್ತಿಸಿದ್ದಾನೆ. ಈ ಸಂದರ್ಭದಲ್ಲಿ ಆತ ಆ ಯಾವ ಪುರಾಣಗಳಲ್ಲಿಯೂ ಬರದ ಕೊರವಂಜಿ ಪಾತ್ರವನ್ನು ಮಾತ್ರ ವಿಶೇಷವಾಗಿ ತಂದಿದ್ದಾನೆ. ಹರಿದಾಸ ಪರಂಪರೆಯ ದ್ವೈತಮತವನ್ನು ಪ್ರಚಾರಪಡಿಸುವುದೇ ಆತನ ಮುಖ್ಯ ಉದ್ದೇಶ. ಆತನ ಕೃತಿಯಲ್ಲಿ ದ್ವೈತಭಾವ ಪ್ರಾಧಾನ್ಯತೆ ಪಡೆದಿದೆ. "ಭಕ್ತಿಯ ಪರಾಕಾಷ್ಠೆಯಲ್ಲಿ ಶೃಂಗಾರದ ಉತ್ಕಟಾವಸ್ಥೆಯಲ್ಲಿಯಂತೆ ದ್ವೈತಭಾವ ತಿಳಿದು ಹೋಗುತ್ತದೆ."[೧೫] ಆದರೆ ವಿರಹದ ಅವಸ್ಥೆಯಲ್ಲಿ ಮಾತ್ರ ದ್ವೈತಭಾವವೇ ಪ್ರಾಧಾನ್ಯತೆ ಪಡೆಯುತ್ತದೆ. ದ್ವೈತ ತತ್ವವನ್ನೇ ಪ್ರಧಾನವಾಗಿಟ್ಟುಕೊಂಡು ಈತ ಕೃತಿ ರಚಿಸಿದ್ದಾನೆ.

ಈ ಆಟವನ್ನು ಪ್ರೇಕ್ಷಕರ ಅಪೇಕ್ಷೆಯ ಮೇರೆಗೆ ಕಲಾವಿದರು ಹಿಗ್ಗಿಸಿ, ಕುಗ್ಗಿಸಿ ಆಡುತ್ತಾರೆ. ಹೆಚ್ಚಾಗಿ ಈ ಆಟ ಇಡೀ ರಾತ್ರಿ ನಡೆಯುತ್ತದೆ. ಕೌಜಲಗಿ ನಿಂಗವ್ವ ಈ ಆಟವನ್ನು ೩ ದಿನದವರೆಗೆ ವಿಸ್ತರಿಸಿ ಆಡಿದಳು. ೧ನೇ ದಿನ ಕೃಷ್ಣರುಕ್ಮಿಣಿ ಪ್ರಸಂಗ, ೨ನೇ ದಿನ ಕೃಷ್ಣ, ಸತ್ಯಭಾಮೆಯರ ಪ್ರಸಂಗ, ೩ನೇ ದಿನ ಕೊರವಂಜಿ ಪ್ರಸಂಗ, ಹೀಗೆ ೩ ದಿನಗಳವರೆಗೆ ಆಡಿದ್ದಳು. ಆದರೆ ಲೋಕಾಪುರದ ಕೃಷ್ಣಾಜಿ ದೇಶಪಾಂಡೆ ಕಂಪನಿಯವರು ಈ ಆಟವನ್ನು ಪಟ್ಟದಕಲ್ಲಿನಲ್ಲಿ ೫ ದಿನ ಆಡಿದ್ದು ದಾಖಲಾಗಿದೆ. ಕೊನೆಯ ೩ ದಿನ ಕೊರವಂಜಿ ಪ್ರಸಂಗವನ್ನೇ ಆಡಿದ್ದಾರಂತೆ. ಆದರೆ ಇತ್ತೀಚಿನ ಜನರು ರಾತ್ರಿಪೂರ್ತಿ ಕುಳಿತು ನೋಡುವ ಮನೋಭಾವ ಹೊಂದಿರದಿರುವುದರಿಂದ ಧಾರವಾಡದ ಬಸಲಿಂಗಯ್ಯ ಹಿರೇಮಠ ಅವರು ಅದನ್ನು ಪರಿಷ್ಕರಿಸಿ ೩ ತಾಸಿನ ಆಟವನ್ನಾಗಿ ಪರಿವರ್ತಿಸಿದ್ದು ಉಲ್ಲೇಖನೀಯ.

ಈ ಆಟದ ಮೊದಲ ಪ್ರಸಂಗ ಮಕ್ಕಳಿಗೂ, ೨ನೇ ಪ್ರಸಂಗ ವಯಸ್ಕರಿಗೂ ೩ನೇ ಪ್ರಸಂಗ ಮುದುಕರಿಗೂ ಹೆಚ್ಚು ಇಷ್ಟವಾಗುವ ಸಂಗತಿಗಳಾಗಿವೆ. ೧ನೇ ಪ್ರಸಂಗದ ಗಣೇಶಪೂಜೆ, ಗೊಲ್ಲ ಗೋಪಾಲರ ಪ್ರಸಂಗ ಹಾಸ್ಯದಿಂದ ಕೂಡಿದ್ದು ಮಕ್ಕಳಿಗೆ ಇಷ್ಟವಾಗುತ್ತದೆ. ೨ನೇ ಪ್ರಸಂಗ ರುಕ್ಮಿಣಿ ಕೃಷ್ಣರ ಸರಸ ಹೊಂದಿರುವುದರಿಂದ ಮಧ್ಯವಯಸ್ಕರಿಗೆ ಇಷ್ಟವಾಗುತ್ತದೆ. ೩ನೇ ಪ್ರಸಂಗದಲ್ಲಿ ಬರುವ ಕೊರವಿ ಆಧ್ಯಾತ್ಮಬೋಧನೆ ಮಾಡುವುದರಿಂದ ದೇವರತ್ತ ಮನಸ್ಸು ವಾಲಿದ ಹಿರಿಯರು ಇದನ್ನು

ಭಕ್ತಿಯಿಂದ ನೋಡುತ್ತಾರೆ. ಆದರೆ ಕೊರವಂಜಿ ವೇಷಭೂಷಣ, ಅವಳು ಕಣಿ ಹೇಳುವ ಶೈಲಿ ಮತ್ತು ಅವಳು ಬ್ರಹ್ಮಾಂಡದ ವರ್ಣನೆ ಮಾಡುವುದರಿಂದ ಈ ಪ್ರಸಂಗ ೩ ವರ್ಗದವರಿಗೂ ಮೆಚ್ಚುಗೆಯಾಗುತ್ತದೆ.

ಸತ್ಯಭಾಮೆಯನ್ನು ಅವಮಾನಿಸಿ ಕಳಿಸಿದ ಕೃಷ್ಣನಿಗೆ ನಂತರ ತನ್ನ ತಪ್ಪಿನ ಅರಿವಾಗಿ ಆತ್ಮಾವಲೋಕನಕ್ಕೆ ತೊಡಗಿಕೊಳ್ಳುತ್ತಾನೆ. 'ಇದು ಏನು ಸೋಜಿಗವೊ ಎನ್ನ ಜೀವ ಮರಗುತಿದೆ.' ಎಂದು ಚಿಂತಾಕ್ರಾಂತನಾಗುತ್ತಾನೆ. ಹೇಗಾದರೂ ಮಾಡಿ ಸತ್ಯಭಾಮೆಯನ್ನು ಸಂಧಿಸಿ ಅವಳಿಗೆ ಸಮಾಧಾನ ಹೇಳಬೇಕೆನ್ನುವ ಚಿಂತೆ ಕಾಡುತ್ತದೆ. ನೇರ ಹೋದರೆ ಭಾಮೆ ಕೋಪದಲ್ಲಿ ಸ್ವೀಕರಿಸಲಾರಳು ಎನ್ನುವ ಆತಂಕ ಕೃಷ್ಣನದು. ಈ ಕಾರಣಕ್ಕಾಗಿ ತನ್ನ ತಾನ ತಿಳಿದುಕೊಳ್ಳಲು ಹೆಂಡತಿಯ ಮನಸ್ಸನ್ನು ಅರ್ಥಮಾಡಿಕೊಳ್ಳಲು ಕೊರವಂಜಿ ವೇಷ ಧರಿಸುತ್ತಾನೆ. ಕೃಷ್ಣ ಕೊರವಂಜಿ (ಹೆಣ್ಣು) ಆಗುವುದೆಂದರೆ ದೈವತ್ವವನ್ನು ಕಳೆದುಕೊಂಡು ಮನುಷ್ಯತ್ವವನ್ನು ಪಡೆದುಕೊಳ್ಳುವ ನೆಲೆಯಾಗಿದೆ. ಕೃಷ್ಣ ದೇವರಾದರೂ, ಭಾಮೆ ದೇವಲೋಕದವಳಾದರು ಸಾಮಾನ್ಯ ಗಂಡ–ಹೆಂಡತಿಯರಾಗುವ ಮೂಲಕ ಮನುಷ್ಯತ್ವದ ನೆಲೆಗಳನ್ನು ಶೋಧಿಸಿಕೊಳ್ಳುತ್ತಾರೆ. ಮನುಷ್ಯಮಾತ್ರ ಸಂವೇದನೆಗಳಿಂದಲೇ ಏನನ್ನಾದರೂ ಪಡೆಯಲು ಸಾಧ್ಯ ಎನ್ನುವ ತತ್ವ ಇದಾಗಿದೆ.

ಕೃಷ್ಣ ಕೊರವಂಜಿಯಾಗುವ ಸಂಗತಿಯೇ ಪಾರಿಜಾತದ ಜನಪದೀಕರಣ ಹಾಗೂ ಸಾಮಾಜೀಕರಣದ ನೆಲೆಯಾಗಿದೆ. ಅವನ ವ್ಯಕ್ತಿತ್ವ ಕೊರವಂಜಿಯಲ್ಲಿ ಅಡಗುವುದು, ಕೃಷ್ಣನ ಅಂತರ್ಮುಖತೆ ಇಲ್ಲಿ ಹೊಸ ಅರ್ಥಗಳನ್ನು ಕಲ್ಪಿಸುತ್ತವೆ.

ಕೊರವಂಜಿಯ ಕೆಲಸ ಸತ್ಯಭಾಮೆಗೆ ಕಣಿ ಹೇಳುವದು, ಕೃಷ್ಣನ ಆಗಮನದ ಬಗ್ಗೆ ಅವಳಲ್ಲಿ ವಿಶ್ವಾಸ ಹುಟ್ಟಿಸುವುದು, ಸತ್ಯಭಾಮೆಯ ಕೃಷ್ಣದರ್ಶನದ ಆಸೆಯನ್ನು ತೀವ್ರಗೊಳಿಸುವುದು, ಪಾರಿಜಾತದ ಕೊರವಂಜಿಯ ಉದ್ದೇಶ. ಕೃಷ್ಣನನ್ನು ಪಡೆಯಲೇಬೇಕೆಂಬ ಹಟಕ್ಕೆ ಬಿದ್ದ ಸತ್ಯಭಾಮೆ ಕೂಡುವುದು ಶಕ್ತಿಪೂಜೆಗೆ ಹೊರತು ಲಕ್ಷ್ಮಿ ಪೂಜೆಗಲ್ಲ. ಶಕ್ತಿವ್ರತ ನಡೆಯುವಲ್ಲಿ ಗಂಡಸರಿಗೆ ಪ್ರವೇಶವಿಲ್ಲ. ಕೊರವಂಜಿ ವೇಷದ ಕೃಷ್ಣನ ಪ್ರವೇಶ ಮತ್ತೊಂದು ಪ್ರಶ್ನೆಯನ್ನು ಹುಟ್ಟಿಸುತ್ತದೆ. ಕೊರವಿ ಶೈವ ಸಂಪ್ರದಾಯಕ್ಕೆ ಹತ್ತಿರ. ಶಕ್ತಿ ಶಿವನ ಹೆಂಡತಿ. ಸತ್ಯಭಾಮೆಯ ಅಸ್ತಿತ್ವವನ್ನು ಶಕ್ತಿಯ ಪ್ರಭಾವವನ್ನು ಕುಂಠಿತಗೊಳಿಸಲು ಶಕ್ತಿ ಮೇಲಿಟ್ಟ ನಂಬಿಕೆಯನ್ನು ಕೃಷ್ಣನತ್ತ ಹೊರಳಿಸುವುದು ಕೊರವಂಜಿ ವೇಷದ ಕೃಷ್ಣನ ಮುಖ್ಯ ಉದ್ದೇಶ. ಬಹುಶಃ ಆ ಕಾಲದ ಶೈವ ಹಾಗೂ ವೈಷ್ಣವ ಮತಗಳ ಸಂಘರ್ಷ ಹಾಗೂ ಸಮನ್ವಯದ ಸಂಕೇತ ಇದಾಗಿರಬಹುದು.

ಇಲ್ಲಿ ಕೃಷ್ಣ ತನ್ನನ್ನು ತಾನು ಅರ್ಥಮಾಡಿಕೊಳ್ಳಲು, ಸತ್ಯಭಾಮೆಯನ್ನು ಸಂಧಿಸಲು ಧರಿಸುವ ಕೊರವಿಯ ವೇಷ ಅಲೆಮಾರಿ ಸ್ವರೂಪದ್ದು. ತಲೆ ಮೇಲೆ ಬುಟ್ಟಿ, ಬಗಲಲ್ಲಿ ಕೂಸು, ಇಂತಹ ವೇಷಭೂಷಣಗಳು ಕೊರವಿಯ ಬುಡಕಟ್ಟು ನೆಲೆಯನ್ನು ಪ್ರತಿಬಿಂಬಿಸುವಂತವಾಗಿವೆ. ಆ ಕಾಲಘಟ್ಟದಲ್ಲಿ ಬುಡಕಟ್ಟು ವರ್ಗಗಳು ವೈಷ್ಣವ ಧರ್ಮದತ್ತ ಆಕರ್ಷಿತವಾಗಿದ್ದ ನೆಲೆಯನ್ನು ಇವು ಸೂಚಿಸುತ್ತವೆ. ಇದಕ್ಕೆ ಸೋಲಿಗರು ಬಿಳಿಗಿರಿರಂಗನ ಭಕ್ತರಾಗುವುದು. ಕೊರಮ, ಕೊರಚರು ತಿರುಪತಿ ತಿಮ್ಮಪ್ಪನ ಒಕ್ಕಲಾಗಿರುವದು ಒಳ್ಳೆಯ ನಿದರ್ಶನ.

ಪಾರಿಜಾತದಲ್ಲಿ ಕಾಣುವ ಕೊರವಂಜಿಯ ರೂಪ ಅಸ್ತಿತ್ವರಹಿತವಾದದ್ದು ಮತ್ತು ಆಟದ ಸಾಧ್ಯತೆಗೆ ಪೋಷಕವಾಗಿರುವಂಥದ್ದು. ಇಲ್ಲಿನ ಕೃಷ್ಣ, ರುಕ್ಮಿಣಿ, ಸತ್ಯಭಾಮೆಯರಿಗೆ ಪೂರ್ವೇತಿಹಾಸವಿದೆ. ಆಟದ ಅವಶ್ಯಕತೆಗಾಗಿ ಹುಟ್ಟುವ ಕೊರವಂಜಿಗೆ ಈ ಯಾವ ಪೂರ್ವೇತಿಹಾಸದ ಸಂಬಂಧಗಳಿಲ್ಲ. ಅವಳ ಸಾಂಸಾರಿಕ ಕಲ್ಪನೆಗಳು ಕೂಡ ಇಲ್ಲಿ ಕಂಡುಬರುವುದಿಲ್ಲ. ಆದರೆ ಬಗಲಲ್ಲಿ ಎತ್ತಿಕೊಂಡ ಕೂಸು, ತಲೆಮೇಲೆ ಹೊತ್ತ ಬುಟ್ಟಿ, ಕೈಯಲ್ಲಿ ಹಿಡಿದ ಕಣಿ ಹೇಳುವ ಕೋಲುಗಳು ಕೊರವಿಯ ಬುಡಕಟ್ಟು ಸಂಬಂಧಗಳನ್ನು ದಟ್ಟವಾಗಿ ಪ್ರತಿಫಲಿಸುತ್ತವೆ. ರೂಪ ಕೊರವಿಯದಾದರೂ, ಅವಳಿಗೆ ಅಗಾಧವಾಗಿ ಬಂದಿರುವ ಜ್ಞಾನ ವೈದಿಕದ್ದು. ನಾಡೋಜ ಶ್ರೀಮತಿ ಯಲ್ಲಮ್ಮನಂಥ ಶೋಷಿತವರ್ಗದ ಹೆಣ್ಣುಮಕ್ಕಳ ಬಾಯಲ್ಲಿ ಅಸ್ಖಲಿತವಾಗಿ ಒಡಮೂಡಿ ಬರುವ ಬ್ರಹ್ಮಾಂಡ, ಪಿಂಡಾಂಡ, ಇವುಗಳ ವಿಸ್ತಾರ, ನೂರೆಂಟು ಲೋಕ, ದೇಶ, ನದಿ, ಪರ್ವತಗಳ ಮಾಹಿತಿಗಳು ಇವತ್ತಿನ ಆಧುನಿಕ ತಂತ್ರಜ್ಞಾನಕ್ಕೂ ಧಕ್ಕುವಂತವಲ್ಲ. ಆದರೆ ಕೊರವಂಜಿಯೆಂಬ ಹೆಣ್ಣುಮಗಳು ಚರಾಚರದ ವಿಷಯಗಳನ್ನು ನೆನಪಿಟ್ಟುಕೊಂಡು ಹೇಳುವ ಅಗಾಧ ನೆನಪಿನ ಶಕ್ತಿ ದುಡಿಯುವ ವರ್ಗಗಳ ಜ್ಞಾನಶಕ್ತಿಯಾಗಿದೆ.

ಹೀಗೆ ಬುಡಕಟ್ಟು ಮೂಲದ ಕೊರವಿಯನ್ನು ಧರ್ಮಪ್ರಚಾರದ ತಂತ್ರವಾಗಿ ಉನ್ನತೀಕರಿಸಿಕೊಂಡು ಪ್ರಚಾರಕ್ಕೆ ತಂದದ್ದು ಪಾರಿಜಾತದಲ್ಲಿ ಎದ್ದುಕಾಣುತ್ತದೆ. ಇದಕ್ಕೆ ಒಂದು ಉದಾಹರಣೆಕೊಡುವುದಾದರೆ ಲೋಕಾಪುರದ ಖ್ಯಾತಕಲಾವಿದೆ ನಾಡೋಜ ಯಲ್ಲವ್ವ ರೊಡಪ್ಪನವರು ಗಲಗಲಿ ಗ್ರಾಮದ ರಾಘವೇಂದ್ರ ಸ್ವಾಮಿ ಮಠದಲ್ಲಿ ಪಾರಿಜಾತದ ಕೊರವಂಜಿ ಭಾಗ ಅಭಿನಯಿಸುವ ಸನ್ನಿವೇಷದಲ್ಲಿ ಅಂಡಾಂಡ ಪಿಂಡಾಂಡ ಬಗೆಗಿನ ಅವಳ ಜ್ಞಾನದ ಹರುವನ್ನು ನೋಡಿ ರಂಗಸಜ್ಜಿಕೆಯ ಮೇಲೆಯೇ ಯಲ್ಲವ್ವನ ಪಾದಪೂಜೆ ಮಾಡಿದ್ದನ್ನು ಅವರು ಇವತ್ತಿಗೂ ಆನಂದ ಭರಿತರಾಗಿ ಸ್ಮರಿಸಿಕೊಳ್ಳುತ್ತಾರೆ.[೧೬] ಇಲ್ಲಿ ಯಲ್ಲವ್ವನಿಗಿಂತ ಅವಳ ಕೊರವಂಜಿಯ ಪಾತ್ರಕ್ಕೆ ಪ್ರಮುಖ ಆದ್ಯತೆ ಸಿಕ್ಕಿರುವಂಥದ್ದನ್ನು ಗಮನಿಸಬಹುದು. ಆದರೆ ವ್ಯಕ್ತಿಯ ಸಾಮಾಜಿಕ ಶ್ರೇಣೀಕರಣದಲ್ಲಿ ಆಕೆ ಇಂದಿಗೂ ಶೋಷಿತೆಯ ನೆಲೆಯಲ್ಲಿಯೇ ಇರುವದು ನಮ್ಮ ಸಾಮಾಜಿಕ ವ್ಯವಸ್ಥೆಗೆ ಹಿಡಿದ ಕೈಗನ್ನಡಿಯಾಗಿದೆ.

ಶ್ರೀಕೃಷ್ಣ ಪಾರಿಜಾತ ಕೊರವಂಜಿ ಪ್ರಸಂಗವನ್ನು ಹೆಚ್ಚು ಜನಪ್ರಿಯಗೊಳಿಸಿದ್ದು, ಕೌಜಲಗಿ ನಿಂಗವ್ವ, ಎಲ್ಲವ್ವ ರೊಡ್ಡಪ್ಪನವರಂಥ ಧೀಮಂತ ಕಲಾವಿದೆಯರು ಕೊರವಂಜಿಯನ್ನು ಜೀವಂತ ಗೊಳಿಸಿಕೊಂಡು ಬಂದಿದ್ದಾರೆ. ವಿಚಿತ್ರವೆಂದರೆ ಈ ರಂಗನಟಿಯರೆಲ್ಲರೂ ಕೆಳವರ್ಗದಿಂದಲೇ ಬಂದವರು.

ಮೇಲೆ ವಿವರಿಸಿದ ಎಲ್ಲ ಕಲಾ ಪ್ರಕಾರಗಳನ್ನು ಗಮನಿಸಿದಾಗ ಕೊರವಂಜಿ ಪಾತ್ರ ಭಿನ್ನಭಿನ್ನ ನೆಲೆಯಲ್ಲಿ ಅಭಿನೀತವಾಗಿರುವುದು ಕಂಡುಬರುತ್ತದೆ. ವ್ಯಕ್ತಿ ಅಥವಾ ಗಂಡು ಹೆಣ್ಣಿನ ಮಧ್ಯೆ ಸಮಸ್ಯೆ ತಲೆದೋರಿದಾಗ ಅದರ ಪರಿಹಾರ ರೂಪಿ ಪಾತ್ರವಾಗಿ ಕೊರವಂಜಿ ಪ್ರವೇಶವಾಗುತ್ತದೆ. ನಾರದನಂತಹ ಪಾತ್ರಗಳು ಕಲಹಪ್ರಧಾನವಾದರೆ ಕೊರವಂಜಿಯಂತಹ ಸಂಚಲನಶೀಲ ಪಾತ್ರಗಳು ಗಂಡು ಹೆಣ್ಣು, ವ್ಯಕ್ತಿ ವ್ಯಕ್ತಿ, ಕುಟುಂಬ ಕುಟುಂಬ, ಸಮುದಾಯ ಸಮುದಾಯ ಮಧ್ಯ ನಡೆಯುವ ಕಲಹಗಳನ್ನು ಪರಿಹರಿಸಿ ಪರ್ಯಾಯ ವ್ಯವಸ್ಥೆ ಮಾಡುವಂತ ಮಾನವೀಯ ಕಾಳಜಿಯನ್ನು ಕೊರವಂಜಿಯಲ್ಲಿ

ಕಾಣುತ್ತೇವೆ. ಬುಡಕಟ್ಟು ನೆಲೆಯ ಅಖಂಡತೆಯ ಪ್ರಜ್ಞೆಯುಳ್ಳ ಹೆಣ್ಣಿನ ಈ ಚಿತ್ರಣ ಅವಿಭಕ್ತ ಪ್ರಧಾನ ಸಾಮಾಜಿಕ ಜವಾಬ್ದಾರಿಯನ್ನು ಪ್ರತಿಬಿಂಬಿಸುವಂಥದ್ದಾಗಿದೆ. ಹೆಣ್ಣನ್ನು ಕೀಳೀಕರಿಸಿ ನೋಡುವ ಸಮಾಜದೊಳಗೆ ಇಂತಹ ಸಾಮಾಜಿಕ ಹಿತಚಿಂತನೆಗಳಿಂದಾಗಿ ಕುಲದ ನೆಲೆಗಳನ್ನೇ ಮೀರಿ ನಿಲ್ಲುತ್ತಾಳೆ. ಆ ಮೂಲಕ ಹೆಣ್ಣು ಮತ್ತು ಕುಲ ಸಂಬಂಧಿಯಾದ ನಕಾರಾತ್ಮಕ ಚಿಂತನೆಗಳಿಗೆ ಹೊಸ ಭಾಷ್ಯ ಬರೆಯುತ್ತಾಳೆ. ಹೀಗಾಗಿ ಇಲ್ಲಿ ಕಾಣುವ ಎಲ್ಲ ಕಲೆಗಳಲ್ಲಿ ಕೊರವಂಜಿಯ ಪಾತ್ರ ಆ ಕಲಾಪ್ರಕಾರವನ್ನು ಮಾನವೀಕರಿಸುತ್ತದೆ. ಆ ಮೂಲಕ ಜಾನಪದವಾಗಿಸುತ್ತದೆ. ಜಾನಪದ ಕಲೆಗಳ ಮುಖ್ಯ ಲಕ್ಷಣವೆಂದರೆ ಅದೇ.

ಕೊರವಂಜಿ ಪ್ರಸಂಗಗಳು ಇಂದಿನ ಆಧುನಿಕ ಸಂಸ್ಕೃತಿಯ ಸಂದರ್ಭದಲ್ಲಿ ವಿವಿಧ ನೆಲೆಗಳಲ್ಲಿ ಕಾಣುತ್ತಿರುವುದು ಗಮನಾರ್ಹ. ಉದಾಹರಣೆಗೆ ಹೇಳುವುದಾದರೆ, ಚಲನಚಿತ್ರ, ಧಾರವಾಹಿ, ಕಾರ್ಯಕ್ರಮ ನಿರೂಪಣೆಯಂಥ ಸಂದರ್ಭಗಳಲ್ಲಿ ಕೊರವಿಯ ವೇಷದಾರಿ ರೂಪಗಳನ್ನು ಕಾಣಬಹುದು.

### ೯.೯. ಚಲನಚಿತ್ರಗಳು

ಕೊರವಂಜಿ ಪಾತ್ರವು ಪ್ರಾಸಂಗಿಕವಾಗಿ ಕನ್ನಡ ಚಲನಚಿತ್ರಗಳಲ್ಲಿಯೂ ಸಹ ಪ್ರವೇಶಪಡೆದಿದೆ. ಧಾರ್ಮಿಕ ಕಥಾನಕವನ್ನುಳ ಚಲನಚಿತ್ರಗಳಲ್ಲಿ ಕೊರವಂಜಿ ಪ್ರವೇಶ ಪಡೆದು ಕಣಿ ಹೇಳಿದ್ದಾಳೆ. ಶ್ರೀ ವೆಂಕಟೇಶ್ವರ ಮಹಾತ್ಮೆ, ಶ್ರೀ ಧರ್ಮಸ್ಥಳದ ಮಂಜುನಾಥ, ಸತ್ಯಹರಿಶ್ಚಂದ್ರ ಮುಂತಾದ ಚಲನಚಿತ್ರಗಳಲ್ಲಿ ಕೊರವಂಜಿ ಪಾತ್ರವನ್ನು ಕಾಣಬಹುದು.

### ೯.೧೦. ಧಾರವಾಹಿಗಳು

ಧಾರವಾಹಿಗಳಲ್ಲಿಯೂ ಸಹ ಕೊರವಂಜಿ ಪ್ರವೇಶ ಪಡೆದಿದ್ದಾಳೆ. 'ಕಾದಿರುವೆ ನಿನಗಾಗಿ', ಎಂಬ ಧಾರವಾಹಿಯಲ್ಲಿ ಹೋದ ಜನ್ಮದ ಆತ್ಮದ ಕಾಟದಿಂದ ನರಳುತ್ತಿದ್ದ ತರುಣಿಗೆ ಅವಳ ನರಳಾಟಕ್ಕೆ ಆತ್ಮದ ಕಾಟವೇ ಕಾರಣ ಎಂದು ಕೊರವಂಜಿ ತಿಳಿಸುತ್ತಾಳೆ. ಜೊತೆಗೆ ಅವಳನ್ನು ಆ ದುಷ್ಟಶಕ್ತಿಯಿಂದ ಕಾಪಾಡಲು ಪೂಜೆಮಾಡಿ ಆ ಪೂಜೆಯಲ್ಲಿ ತಾನೇ ಆ ದುಷ್ಟಶಕ್ತಿಯಿಂದ ಮರಣಹೊಂದುತ್ತಾಳೆ. ಆದರೆ ಅವಳ ಪೂಜೆಯ ಪರಿಣಾಮದಿಂದ ದುಷ್ಟಶಕ್ತಿಯಿಂದ ನರಳುತ್ತಿದ್ದ ತರುಣಿ ಬದಕುತ್ತಾಳೆ. ಮತ್ತೊಬ್ಬರ ಜೀವ ಉಳಿಸಲು ತನ್ನ ಪ್ರಾಣವನ್ನು ಕೊಡಲು ಸಹ ಕೊರವಂಜಿಯರು ಸಿದ್ಧರಾಗಿರುತ್ತಾರೆಂಬುದನ್ನು ಈ ಧಾರವಾಹಿ ನಿರೂಪಿಸುತ್ತದೆ.

'ಶ್ರೀನಿವಾಸ ಕಲ್ಯಾಣ' ಧಾರಾವಾಹಿಯಲ್ಲಿ ಪದ್ಮಾವತಿಯನ್ನು ವರಿಸುವುದಕ್ಕಾಗಿ ಶ್ರೀನಿವಾಸನೇ ಕೊರವಂಜಿಯ ವೇಷ ಧರಿಸಿ ಬರುತ್ತಾನೆ. ಪದ್ಮಾವತಿಯನ್ನು ಶ್ರೀನಿವಾಸನಿಗೆ ಕೊಡಲು ತಿಳಿಸುತ್ತಾನೆ. ಬಕುಳೆಯಾಗಿ ಹುಟ್ಟಿದ ಯಶೋಧಳ ಹಿಂದಿನ ಜನ್ಮದ ಆಸೆಯನ್ನು ಈ ಮೂಲಕ ನೆರವೇರಿಸುತ್ತಾನೆ. 'ಕುಲವಧು' ಧಾರವಾಹಿಯಲ್ಲಿ ದ್ವಂದ್ವಗಳಿಂದ ಒದ್ದಾಡುತ್ತಿದ್ದ ನಾಯಕಿಯ ತಳಮಳವನ್ನು ಕೊರವಂಜಿ ಬಂದು ಕಣಿ ಹೇಳಿ ದೂರ ಮಾಡುತ್ತಾಳೆ.

## ೯.೧೧. ವೇಷಭೂಷಣ (ಫ್ಯಾನ್ಸಿಡ್ರೆಸ್)

ಶಾಲಾಕಾಲೇಜುಗಳಲ್ಲಿ ನಡೆಯುವ ವೇಷಭೂಷಣ ಸ್ಪರ್ಧೆಗಳಲ್ಲಿ, ಮಕ್ಕಳಿಗೆ ಕೊರವಂಜಿ ವೇಷವನ್ನು ಹಾಕುವ ಪದ್ಧತಿ ಇತ್ತೀಚೆಗೆ ಬೆಳೆದುಬಂದಿದೆ. ಪಾಲಕರು ತಮ್ಮ ಮಗುವಿಗೆ ಕೊರವಂಜಿ ರೀತಿಯಲ್ಲಿ ಸೀರೆ ಉಡಿಸಿ, ಕೈಯಲ್ಲಿ ಬುಟ್ಟಿ, ಕೋಲು ಕೊಟ್ಟು ಅಲಂಕರಿಸಿ ಸ್ಪರ್ಧೆಗೆ ಕಳಿಸುತ್ತಾರೆ. ಇದೊಂದು ಮನರಂಜನೀಯ ಪ್ರಸಂಗವಾಗಿದೆ.

## ೯.೧೨. ಮನರಂಜನೆ ಕಾರ್ಯಕ್ರಮಗಳಲ್ಲಿ

ಶಾಲಾ ಕಾಲೇಜು ಅಥವಾ ಜಾತ್ರೆ, ಉತ್ಸವಗಳಲ್ಲಿ ನಡೆಯುವ ಮನರಂಜನಾ ಕಾರ್ಯಕ್ರಮಗಳಲ್ಲಿಯು ಕೊರವಂಜಿ ವೇಷ ಧರಿಸುತ್ತಾರೆ. ಮನರಂಜನಾ ಕಾರ್ಯಕ್ರಮಗಳಲ್ಲಿ ನಡೆಯುವ ನಾಟಕ, ನೃತ್ಯ, ಹಾಸ್ಯ ಮುಂತಾದ ಕಲೆಗಳಲ್ಲಿ ಕೊರವಂಜಿ ವೇಷವನ್ನು ಧರಿಸಿ ಆಟ ಆಡುತ್ತಾರೆ.

## ೯.೧೩. ನಿರೂಪಣೆಯಲ್ಲಿ

ಕೆಲವೊಂದು ಕಾರ್ಯಕ್ರಮ ಅಥವಾ ಚಾನಲ್‌ಗಳ ನಿರೂಪಕರು ಕೊರವಂಜಿ ವೇಷಧರಿಸಿ ಜನರನ್ನು ರಂಜಿಸುತ್ತಾರೆ. 'ಉದಯ ಕಾಮಿಡಿ' ಚಾನಲ್‌ನಲ್ಲಿ ಬರುವ ಹಾಸ್ಯ ಕಾರ್ಯಕ್ರಮದಲ್ಲಿ, ನಿರೂಪಕಿ ಕೊರವಂಜಿ ವೇಷವನ್ನು ಧರಿಸಿ ತಮಗೆ ಕರೆಮಾಡಿದ ವೀಕ್ಷಕರೊಂದಿಗೆ ಕಣಿ ಹೇಳುವ ಶೈಲಿಯಲ್ಲಿ ಮಾತನಾಡಿಸಿದ್ದು ಇಲ್ಲಿ ಉಲ್ಲೇಖನೀಯ.

ಕೊರವಂಜಿ ಹೆಸರಿನಿಂದ ಕೊರವಂಜಿ ಕೋಲು, ಕೊರವಂಜಿ ಕೋಲಾಟ, ಪಾರಿಜಾತ, ಯಕ್ಷಗಾನ ಮುಂತಾದ ಪ್ರದರ್ಶನ ಕಲೆಗಳು ಪ್ರದರ್ಶಿತಗೊಳ್ಳುತ್ತಿವೆ. ಇವೆಲ್ಲ ಕಲೆಗಳು ಆಧುನಿಕ ಪ್ರಹಾರಕ್ಕೆ ಸಿಕ್ಕು ನಶಿಸುವ ಹಂತದಲ್ಲಿದ್ದರು, ಅವು ಇನ್ನೊಂದು ರೂಪದ ಮೂಲಕ ಮತ್ತೆ ಜನಮನವನ್ನು ಪ್ರವೇಶಿಸುತ್ತಿವೆ. ಕಲೆಗೆ ಯಾವತ್ತೂ ನಾಶವಿಲ್ಲ ಎಂಬುದನ್ನು ಇವು ಸಾಬೀತು ಮಾಡುತ್ತಿವೆ. ಹೀಗೆ ಕೊರವಂಜಿ ಹಲವು ಕಲಾಪ್ರಕಾರಗಳಲ್ಲಿ ಮರುರೂಪ ಪಡೆದದ್ದನ್ನು ನೋಡಬಹುದಾಗಿದೆ.

### ಕೊನೆಟಿಪ್ಪಣಿ


೧. ಎಂ.ಎಚ್. ಕೃಷ್ಣಯ್ಯ(ಸಂ), ಕರ್ನಾಟಕ ಕಲಾದರ್ಶನ ಸಂಪುಟ-೨, ಪುಟ;೯೭, ೨೦೧೦

೨. ಡಾ. ಶ್ರೀರಾಮ ಇಟ್ಟಣ್ಣವರ, ಶ್ರೀಕೃಷ್ಣಪಾರಿಜಾತ ಒಂದು ಅಧ್ಯಯನ, ಪುಟ;೮೦, ೧೯೯೧

೧. ಪ್ರೊ. ಜಿ. ವೆಂಕಟಸುಬ್ಬಯ್ಯ, ಇಗೋ ಕನ್ನಡ, ಪುಟ;೧೦೫, ೨೦೦೯

೨. ಜಿ. ಬ್ರಹ್ಮಪ್ಪ, ಹಂಪ ನಾಗರಾಜಯ್ಯ(ಸಂ), ಭರತೇಶ ವೈಭವ, ಪುಟ;೧೨೯, ೧೯೬೭

೩. ಬಿ.ಪಿ. ರಾಮಯ್ಯ, ದಕ್ಷಿಣ ಕರ್ನಾಟಕದ ಕೊರಮರು ಒಂದು ಸಾಂಸ್ಕೃತಿಕ ಅಧ್ಯಯನ, ಪುಟ;೫೧-೫೨, ೨೦೦೨

೪. ಶ್ರೀರಾಮ ಇಟ್ಟಣ್ಣವರ, ಶ್ರೀಕೃಷ್ಣಪಾರಿಜಾತ ಒಂದು ಅಧ್ಯಯನ, ಪುಟ;೩೮೮, ೧೯೯೧
೫. ಜಿ.ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ಪುಟ;೨೯೫, ೧೯೭೯
೬. ಕೆ.ಆರ್. ಕೃಷ್ಣಸ್ವಾಮಿ, ಹಾಡು ಚೆಲ್ಯಾವೆ ನಾಡಿಗೆ, ಪುಟ;೨೨೩, ೧೯೯೫
೭. ಜಿ.ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ಪುಟ;೨೦೪, ೧೯೭೯
೮. ಚಂದ್ರಶೇಖರ ಕಂಬಾರ(ಸಂ.), ಕನ್ನಡ ಜನಪದ ವಿಶ್ವಕೋಶ, ಪುಟ;೫೭೧, ೧೯೮೫.
೯. ಡಾ. ಸ.ಚಿ. ರಮೇಶ (ಸಂ.), ದಕ್ಷಿಣ ಭಾರತೀಯ ಜಾನಪದ ಕೋಶ, ಪುಟ;೨೯೨, ೨೦೧೧
೧೦. ಡಾ. ಚಂದ್ರಶೇಖರ ಕಂಬಾರ(ಸಂ.), ಕನ್ನಡ ಜನಪದ ವಿಶ್ವಕೋಶ, ಪು;೫೭೧, ೧೯೮೫
೧೧. ಡಾ. ಹಿ.ಚಿ. ಬೋರಲಿಂಗಯ್ಯ(ಸಂ.), ಕರ್ನಾಟಕ ಜಾನಪದ ಕಲೆಗಳ ಕೋಶ, ಪುಟ;೧೫೭, ೧೯೯೬
೧೨. ಅದೇ, ಪುಟ;೧೫೭
೧೩. ಡಾ. ಸ.ಚಿ. ರಮೇಶ (ಸಂ.), ದಕ್ಷಿಣ ಭಾರತೀಯ ಜಾನಪದ ಕೋಶ, ಪುಟ;೧೯೬-೧೯೭, ೨೦೧೧
೧೪. ದೇವುಡು ನರಸಿಂಹಶಾಸ್ತ್ರಿ, ಕರ್ನಾಟಕ ಸಂಸ್ಕೃತಿ, ಪುಟ;೧೦೭, ೧೯೮೮
೧೫. ಡಾ. ಕೃಷ್ಣ ಕಟ್ಟಿ, ಶ್ರೀಕೃಷ್ಣ ಪಾರಿಜಾತ, ಪುಟ;೧೯, ೧೯೯೭
೧೬. ನಾಡೋಜ ಯಲ್ಲವ್ವ ರೊಡ್ಡಪ್ಪನವರ, (೫೮) ಪಾರಿಜಾತ ಕಲಾವಿದೆ, ಲೋಕಾಪೂರ

* * *

ಅಧ್ಯಾಯ ಹತ್ತು

# ಕೊರವಂಜಿ : ದಾರ್ಶನಿಕ ಹಾಗೂ ಆಧ್ಯಾತ್ಮಿಕ ಸಂಕಥನ

ದಾರ್ಶನಿಕ ಮತ್ತು ಆಧ್ಯಾತ್ಮಿಕರಣ ಅನ್ನುವುದನ್ನು ನಾನು ಇಲ್ಲಿ ಒಂದು ಲೋಕದೃಷ್ಟಿಯನ್ನಾಗಿ ಭೌತವಾದಿ ದೃಷ್ಟಿಯುಳ್ಳದ್ದು ಎನ್ನುವ ಅರ್ಥದಲ್ಲಿ ಬಳಸುವ ಪ್ರಯತ್ನ ಮಾಡಿದ್ದೇನೆ. ಸಾಮಾನ್ಯವಾಗಿ ಪಾರಮಾರ್ಥವೆಂಬುದನ್ನು ಇಹದಾಚೆಗೆ ಇರುವ ಇಂದ್ರಿಯಾತೀತ ಜಗತ್ತು ಎಂದು ಸಾಂಪ್ರದಾಯಿಕವಾಗಿ ಬಳಸಲಾಗುತ್ತದೆ.

ಯಾವುದೇ ಆಚಾರ ಹಾಗೂ ವಿಚಾರಗಳು ಭೌತ ಜಗತ್ತಿನ ಹಂಗಿಲ್ಲದೆ ಇರಲಾರವು. ಅದಕ್ಕೇ ಇರಬೇಕು ಶರಣರಂಥವರು ಆಚಾರವೇ ಸ್ವರ್ಗ ಅನಾಚಾರವೇ ನರಕ, ಅಯ್ಯಾ ಅಂದರೆ ಸ್ವರ್ಗ ಎಲವೋ ಅಂದರೆ ನರಕ, ಎನ್ನುವ ಮೂಲಕ ಮನುಷ್ಯನ ನಡವಳಿಕೆ ಹಾಗೂ ಅರಿವಿನ ನೆಲೆಗಳು ಮಾತ್ರ ಸ್ವರ್ಗ ಹಾಗೂ ನರಕವನ್ನು ನಿರ್ಧರಿಸ ಬಲ್ಲವೇ ಹೊರತು ಯಾವುದೋ ಅನಿಯಂತ್ರಿತ ಅಮೂರ್ತ ಸಂಗತಿ ಅಲ್ಲ ಎನ್ನುವುದನ್ನು ತೋರಿಸಿಕೊಟ್ಟರು.

"ಬುದ್ಧಘೋಷ ನಂತವರು ಇಂದ್ರಿಯ ಅನುಭವಕ್ಕೆ ಲಭ್ಯವಾಗುವುದನ್ನೆಲ್ಲವನ್ನು ಆಧ್ಯಾತ್ಮ ಎಂದರೆ' ಹರಿಭದ್ರನಂಥವರೂ ಭೌತ ಅಸ್ತಿತ್ವವುಳ್ಳ ಎಲ್ಲವೂ ಎಂದು ಹೇಳುತಾರೆ. ಪಾರಮಾರ್ಥವೆಂದರೆ ಕೇವಲ ಪರಲೋಕದ ಬಗೆಗಿನ ಚಿಂತನೆಯಾಗದೆ, ಇಹಲೋಕದ ಬಗೆಗಿನ ತತ್ವಶಾಸ್ತ್ರವೂ ಆಗಿದೆ ಎಂಬುದು ನನ್ನ ತಿಳುವಳಿಕೆ. ಭಾರತೀಯ ಪಾರಮಾರ್ಥ ಚಿಂತನೆಯನ್ನು ಕೇವಲ ಭಾವನಾವಾದ ಅಥವಾ ಆಧ್ಯಾತ್ಮವಾದ ಎಂದು ಪರಿಭಾವಿಸಿ ಆ ಮೂಲಕ ಮಾನವನ ಬಾಹ್ಯವಿಶ್ವಕ್ಕಿಂತಲೂ ಆತನ ಆಂತರ್‌ವಿಶ್ವಕ್ಕೆ ಹೆಚ್ಚಿನ ಗಮನ ನೀಡಲಾಗಿದೆ. ಸ್ವಯಂ ಅಸ್ತಿತ್ವವಿಲ್ಲದ ಇಂಥ ಚಿಂತನೆಗಳನ್ನು ನಮ್ಮ ಜನ ಮಾಡಿಲ್ಲ. ಪ್ರಾಚೀನ ಭಾರತೀಯ ಭೌತವಾದ ಎನ್ನುವುದು ನಮ್ಮ ಜನರ ಬದುಕಿನೊಡನೆ ಇತಿಹಾಸದೊಡನೆ ಹಾಸುಹೊಕ್ಕಾಗಿದೆ. ಕೊರವಂಜಿಯಂಥ ಕೆಳಜಾತಿಯ ಹೆಣ್ಣು ಅಥವಾ ಪ್ರಸಂಗವನ್ನು ಕುರಿತು ಅಧ್ಯಯನ ಮಾಡುವ ಹೊತ್ತಿನಲ್ಲಿ ದಾರ್ಶನಿಕತೆ ಮತ್ತು ಆಧ್ಯಾತ್ಮ ಎನ್ನುವುದನ್ನು ಒಂದು ಲೋಕದೃಷ್ಟಿಯೆಂದು ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ. ಇಲ್ಲದಿದ್ದರೆ ಕೊರವಿ ಎನ್ನುವ

ಜಾತಿಸ್ಥರ ಹಾಗೂ ಲಿಂಗಸ್ಥರಗಳು ಇಂಥ ಪಾರಲೌಕಿಕ ಹಾಗೂ ಪಾರಮಾರ್ಥಿಕ ಎನ್ನುವ ಭೇದ ಲೋಕಗಳಿಂದ ಹೊರಗುಳಿದು ಬಿಡುತ್ತವೆ. ಆಧ್ಯಾತ್ಮ ಎನ್ನುವುದನ್ನು ಒಂದು ಲೋಕದೃಷ್ಟಿಯನ್ನಾಗಿ ಮಂಡಿಸುವ ಪ್ರಯತ್ನವನ್ನು ಇಲ್ಲಿ ಮಾಡಿದ್ದೇನೆ.

ಧಾರ್ಮಿಕ ಹಾಗೂ ಆಧ್ಯಾತ್ಮಿಕ ರಚನೆಗಳು ಶಿಥಿಲವಾಗುತ್ತಿರುವ ಕಾಲವಿದು. ಇಡೀ ಆಧ್ಯಾತ್ಮಿಕ ಅನುಭವವೆಲ್ಲ ಬೃಹತ್ ಮಾರುಕಟ್ಟೆ ರೂಪ ಪಡೆಯುತ್ತಿರುವ ಅವಸರದ ಗಳಿಗೆಯಿದು. ವೈರಾಗ್ಯವನ್ನು ಬೋಧಿಸುವ ಗುರುಗಳು ಹಾಗೂ ಆಶ್ರಮಗಳು ಸಂಪತ್ತಿನ ಕೇಂದ್ರಗಳಾಗುತ್ತಿವೆ. ಇಂದ್ರಿಯ ನಿಗ್ರಹವನ್ನು ಬೋಧಿಸುತ್ತ ಶೃಂಗಾರ ಲೀಲೆಗಳಲ್ಲಿ ಸಿಕ್ಕಿ ಹಾಕಿಕೊಳ್ಳುತ್ತಿರುವ ಗುರುವರೇಣ್ಯರಿಂದು ಗಣನೀಯವಾಗುತ್ತಿದ್ದಾರೆ. ಚೌರಾಂಶಿ ಲಕ್ಷ್ಯಜೀವಿಗಳನ್ನು ವಾತ್ಸಲ್ಯದಿಂದ ನೋಡುವುದು ತನ್ನನ್ನು ತಾನು ಉನ್ನತೀಕರಿಸಿಕೊಂಡು ಸದ್ಬೋದನೆಗಳನ್ನು ನೀಡುವುದೇ ಆಧ್ಯಾತ್ಮದ ಗುರಿ. ಅಸಮಾನತೆಯ ವಿಷಮ ಸನ್ನಿವೇಶದಲ್ಲಿಂದು ಬಡವರಂತೆ ಬಲ್ಲಿದರೂ ಅಶಾಂತಿಯಿಂದ ಹತಾಶರಾಗುತ್ತಿದ್ದಾರೆ. ಇಂಥವರು ಶಾಂತಿಗಾಗಿ ಸೋಗಿನ ಗುರುಗಳ ಬೆನ್ನಿಗೆ ಬೀಳುತ್ತಾರೆ. ವಾಸ್ತವವಾಗಿ ಆಧ್ಯಾತ್ಮ ಎನ್ನುವುದು ಇಂದ್ರಿಯಾತೀತ ಪರಾವಲಂಬಿ ಜಗತ್ತಲ್ಲ. ತನ್ನ ಇಂದ್ರಿಯಾನುಭವಗಳ ಮೂಲಕವೇ ಜಗತ್ತನ್ನು ಅರಿತು ಬಾಳುವುದು. ಇದು ಮನುಷ್ಯನ ಅನನ್ಯತೆ ಹಾಗೂ ಅಸ್ತಿತ್ವದ ಪ್ರತೀಕವಾಗಿದೆ."[೧]

ನಮ್ಮ ಮಹಾಕಾವ್ಯ ಪುರಾಣಗಳಲ್ಲಿ, ದೇವತೆಗಳು ಮನುಷ್ಯರ ಸಹಾಯ ಪಡೆದು ತಮ್ಮ ಸಂಕಷ್ಟಗಳನ್ನು ಪರಿಹರಿಸಿಕೊಂಡ ಯಥೇಚ್ಛ ಕಥೆಗಳು ಸಿಗುತ್ತವೆ. ದೇವತೆಗಳು ಹೆಣ್ಣು ವೇಷದಲ್ಲಿ ಅಥವಾ ಮಾರುವೇಷದಲ್ಲಿ ಸಂಚಾರ ಮಾಡಿ ಭಕ್ತರ ಸಂಕಷ್ಟಗಳನ್ನು ನೀಗಿಸಿಕೊಂಡ ಉದಾಹರಣೆಗಳಿವೆ. ಯಾಕೆ ದೇವತೆಗಳನ್ನು ಮಾನವೀಕರಣಗೊಳಿಸಲಾಯಿತು ಎಂಬುದು ಮುಖ್ಯ ಪ್ರಶ್ನೆ. ಋಗ್ವೇದದಲ್ಲಿ (ಋ.೩.೩೨.೨) ಒಂದು ಶ್ಲೋಕದಲ್ಲಿ ಪಿತೃಗಳ ಕಾಲದಿಂದಲೂ ಮಾನವರು ದೇವತೆಗಳಿಗೆ ಸಮಾನರಾಗಿದ್ದರು. ಮಾನವರಲ್ಲಿದ್ದಂತೆ ದೇವತೆಗಳಲ್ಲೂ ಸಮಾನತೆಯನ್ನು ಗುರುತಿಸಲಾಗಿದೆ. ಇಂಥ ಸಮಾನತೆಯ ಸುಂದರ ಚಿತ್ರಣಗಳು ಋಗ್ವೇದದ ಕಡೆಯ ಸೂತ್ರದಲ್ಲಿ ಕಾಣುತ್ತವೆ. (ಋ.೧–೧೧೧–೨) ಅಂದರೆ ದೇವತೆಗಳು ಮಾನವರಾಗುವ ಅಥವಾ ರೂಪ ಹಾಗೂ ವೇಷ ಬದಲಿಸುವ ರೀತಿಗಳು ತುಂಬ ಪ್ರಾಚೀನವಾದಂಥವು. ಅವು ಇಂದಿಗೂ ವಿವಿಧ ರೂಪಗಳಲ್ಲಿ ಬಳಕೆಯಲ್ಲಿವೆ.

ಕೊರವಂಜಿ ಕೂಡ ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯಲ್ಲಿ ಹೀಗೆ ವಿಭಿನ್ನ ನೆಲೆಯಲ್ಲಿ ಹರಿದಾಡಿದ್ದು ಗಮನಾರ್ಹ. "ಕನ್ನಡದಲ್ಲಿ ಕೃಷ್ಣಪಾರಿಜಾತದಲ್ಲಿ ಕೃಷ್ಣ ಕೊರವಂಜಿ ವೇಷಧರಿಸಿ ಸತ್ಯಭಾಮೆಯ ಅಂತರಂಗವನ್ನು ತಿಳಿಯುತ್ತಾನೆ. ವೆಂಕಟೇಶ ಪಾರಿಜಾತದಲ್ಲಿ ವಿಷ್ಣು ಆಕಾಶ ರಾಜನ ಮಗಳಾದ ಪದ್ಮಾವತಿಯನ್ನು ಪರೀಕ್ಷಿಸಲು ಕೊರವಂಜಿ ವೇಷ ಧರಿಸುತ್ತಾನೆ. ಹೆಳವನಕಟ್ಟೆ ಗಿರಿಯಮ್ಮ ಬರೆದ ಬ್ರಹ್ಮಕೊರವಂಜಿಯಲ್ಲಿ ಬ್ರಹ್ಮದೇವನೇ ಕೊರವಂಜಿ ರೂಪಧರಿಸಿ ವಸುದೇವ ದೇವಕಿಯನ್ನು ಸಂತೈಸುತ್ತಾನೆ. ಪ್ರಸನ್ನ ವೆಂಕಟದಾಸರ ನಾರದಕೊರವಂಜಿ ನಾಟಕದಲ್ಲಿ ನಾರದ, ಕೊರವಂಜಿ ವೇಷಧರಿಸಿ ರುಕ್ಮಿಣಿಗೆ ಬಂದ ಸಂಕಟವನ್ನು ಪರಿಹರಿಸುತ್ತಾನೆ. ತಮೋನಿರತಳಾದ ಗಿರಿಜೆಯನ್ನು ಪರೀಕ್ಷಿಸಲು ಶಿವ ತೊಟ್ಟ ಹಲವಾರು ವೇಷಗಳಲ್ಲಿ ಕೊರವಂಜಿ ವೇಷವೂ ಒಂದು.

ಹೀಗೆ ಕನ್ನಡ ಸಾಹಿತ್ಯ ಸಂಸ್ಕೃತಿಯ ಒಳಗಡೆ ಪುರುಷ ದೇವಾನುದೇವತೆಗಳು ಕೊರವಂಜಿ ವೇಷಧಾರಣ ಮಾಡುವ ಕಥನಗಳು ಪುಷ್ಕಳವಾಗಿ ಸಿಗುತ್ತವೆ. ವೈದಿಕ ಆಕೃತಿಗಳಲ್ಲಿ ದೇವಾನುದೇವತೆಗಳ ಮಧ್ಯದ ಬಿರುಕನ್ನು ಬೆಸೆದು ಅವರನ್ನು ಕೂಡಿಸುವ ಕೆಲಸ ಮಾಡಿದರೆ, ವೈದಿಕೇತರ ನೆಲೆಗಳಲ್ಲಿ ಸಖಿ, ಹಾಗೂ ಸ್ನೇಹಿತಳಾಗಿ ಪರಕಾಯ ಪ್ರವೇಶ ಮಾಡಿದ್ದಾಳೆ. ಭಕ್ತಿ, ಶೃಂಗಾರ, ಸಂಯೋಗ, ವಿಯೋಗ, ರೂಪಾಂತರ ಮತ್ತು ಅಡಗುವಿಕೆ ಎನ್ನುವ ಪರಿವರ್ತನಶೀಲ ನೆಲೆಗಳಲ್ಲಿ ಕೊರವಂಜಿಯ ಸಂಕಥನವನ್ನು ಕಾಣಬಹುದು."[೨]

ಕೊರವಂಜಿ ಹಾಗೂ ಕೃಷ್ಣ, ಕೊರವಂಜಿ ಹಾಗೂ ಭಾಮೆಯರ ಸಂಬಂಧಗಳನ್ನು ಜೀವ ಹಾಗೂ ಪರಮಾತ್ಮರ ಸಂಬಂಧದ ತಾತ್ವಿಕ ಪ್ರಶ್ನೆಯನ್ನಾಗಿ ವಿಶ್ಲೇಷಣೆ ಮಾಡಲಾಗಿದೆ. ಕೃಷ್ಣನ ವಿರಹ ವೇದನೆ ಹಾಗೂ ಹುಡುಕಾಟಗಳು, ಕೊರವಿಯ ರೂಪದಲ್ಲಿ ಸಮೀಕರಣಗೊಳ್ಳುವ ನೆಲೆಗಳು ಗಮನಿಸುವಂಥವು. ಭಾಮೆಯ ವಿಯೋಗದಿಂದ ಕೃಷ್ಣನಲ್ಲಿ ಹುಟ್ಟುವ ಅಂತರ್‌ಮುಖತೆ ಕೊರವಿಯಲ್ಲಿ ಕೃಷ್ಣನ ಅಡಗುವಿಕೆಯೊಂದಿಗೆ ಪರಿವರ್ತನೆಗೊಳ್ಳುತ್ತದೆ. ಅಂದರೆ ಕೃಷ್ಣ ಕೊರವಿಯಾಗಿ ರೂಪಾಂತರಗೊಳ್ಳುತ್ತಾನೆ. ಕೃಷ್ಣ ಪರಮಾತ್ಮ, ಸರ್ವಜ್ಞ ನಿಜ. ಆದರೂ ಭಾಮೆಯು ಮಾಡುತ್ತಿರುವ ಶಕ್ತಿ ಪೂಜೆಯ ಸ್ಥಳಕ್ಕೆ ಪುರುಷನಾಗಿ ಹೋಗಲು ಅವನಿಗೆ ಸಾಧ್ಯವಿಲ್ಲ. ಗಂಡನ ರೂಪದಲ್ಲಿ ಗಂಡಸಿನ ರೂಪದಲ್ಲಿ ಹೋಗಲು ಸಾಧ್ಯವಿಲ್ಲದಿರುವ ಸಂಗತಿ ಕುತೂಹಲಕರವಾದದ್ದು.

ಕೃಷ್ಣ ಕೊರವಂಜಿಯಾಗುವುದೆಂದರೆ ಅವನ ವ್ಯಕ್ತಿತ್ವ ಕೊರವಂಜಿಯಲ್ಲಿ ಅಡಗುವುದು. ಕೊರವಂಜಿ ಕೆಲಸ ಕೃಷ್ಣ ಸತ್ಯಭಾಮೆಗೆ ದರ್ಶನ ನೀಡುತ್ತಾನೆ ಎನ್ನುವ ಆಶ್ವಾಸನೆಯನ್ನೀಯುವುದು. ಸತ್ಯಭಾಮೆಯ ಕೃಷ್ಣ ದರ್ಶನದ ಆಸೆಯನ್ನು ತೀವ್ರಗೊಳಿಸುವುದು ಹಾಗೂ ಜೀವಂತವಾಗಿಡುವುದು. ಕೊರವಿಯನ್ನು ಕಂಡ ಭಾಮೆಗೆ ವಿರಹ ಹುಟ್ಟುವುದು, ಕೃಷ್ಣನನ್ನು ಪರೀಕ್ಷಿಸುವುದು, ಪಾದದಲ್ಲಿನ ಪದ್ಮದ ಮೂಲಕ ಕೃಷ್ಣನನ್ನು ಗುರುತು ಹಚ್ಚಿದಾಗ ಕೃಷ್ಣ ನಾನು ಕೃಷ್ಣನಲ್ಲ ಎಂದು ಹೇಳುವುದು, ಇವೆಲ್ಲ ನಾಟಕೀಯ ಸಂಗತಿಗಳಂತೆ ಕಂಡರು ಅವೊಂದು ತಾತ್ವಿಕ ಸಂಬಂಧವನ್ನು ಹೊಂದಿವೆ.

ಒಂದು ಹೋಗಿ ಇನ್ನೊಂದಾಗುವ ಈ ಪರಿಯೇ ಸ್ವಕೀಯ ಪ್ರಜ್ಞೆಯನ್ನು ಪರಕೀಯವಾಗಿಸುವ ಪರಕೀಯ ಪ್ರಜ್ಞೆಯನ್ನು ಸ್ವಕೀಯವಾಗಿಸುವ ಮೂಲಕ ತನ್ನತನವನ್ನು ತಾನು ತಿಳಿದುಕೊಳ್ಳುವುದು. 'ನನ್ನೊಳಗ ನಾನು ತಿಳಕೊಂಡೆ ನನಗೆ ಬೇಕಾದ ಗಂಡನ ಮಾಡಿಕೊಂಡೆ' ಎನ್ನುವ ಷರೀಫನ ಮಾತಿನಂತೆ ತನ್ನೊಳಗನ್ನು ತಾನರಿವ ಪರಿಯೂ ಹೌದು.

ಕೃಷ್ಣ ಕೊರವಿಯಾಗಿ ಬದಲಾಗುವ ಪರಿಯೇ ತನ್ನ ತಾನರಿವ ಪರಿಯಾಗಿದೆ. ಇಂಥ ಪರಿವರ್ತನೆ ಕ್ರಿಯೆಗಳ ಬೇರು ಮಾಂತ್ರಿಕ ಮೂಲದಲ್ಲಿರುವುದು ಗಮನಾರ್ಹ. ಪರಕಾಯ ಪ್ರವೇಶ, ಅಥವಾ ಸ್ತ್ರೀ ವಶೀಕರಣ, ಅಥವಾ ರೂಪಾಂತರ ಹೊಂದುವ ನೆಲೆಗಳು ಆಧ್ಯಾತ್ಮಿಕ ಸಂಗತಿಗಳಿಗಿಂತ ಹೆಚ್ಚಾಗಿ ಮಾಂತ್ರಿಕ ಮೂಲಕ್ಕೆ ಹತ್ತಿರವಾದಂಥದ್ದು. "ಮಾಂತ್ರಿಕತೆ ಎನ್ನುವುದೇ ಸ್ತ್ರೀ ಮೂಲವಾದದ್ದು. ಮಹಿಳಾ ಪ್ರಧಾನವಾದ ವ್ಯವಸ್ಥೆ ಪಿತೃಪ್ರಧಾನ ವ್ಯವಸ್ಥೆಯಾಗಿ ರೂಪಾಂತರಗೊಂಡಾಗಲೂ ಹಿಂದಿನ ಸ್ತ್ರೀ ಪ್ರಧಾನ ಪದ್ಧತಿಯ ಅಂಶಗಳು ಇಂದಿಗೂ ಹಲವು ರೀತಿಯ ಆಚರಣೆಗಳಲ್ಲಿ ಪಳಿಯುಳಿಕೆಯಂತೆ

ಉಳಿದಿರುವುದನ್ನು ಕಾಣಬಹುದು. ಮಾಂತ್ರಿಕ ಆಚರಣೆಗಳಿಗೆ ಅಥವಾ ಹೆಣ್ಣು ದೇವತೆಗಳ ಪೂಜೆಗೆ ಸಜ್ಜಾಗಬೇಕಾಗಿ ಬಂದಾಗ ಪುರುಷನು ತನ್ನ ಲಿಂಗವನ್ನು ಬಿಟ್ಟುಕೊಟ್ಟು ತಾತ್ಕಾಲಿಕವಾಗಿ ಸ್ತ್ರೀರೂಪ ಧರಿಸುತ್ತಿದ್ದ. ಸುಲಭದಲ್ಲಿ ಇದನ್ನು ಮಾಡಲು ಉಡುಪು ಬದಲಿಸಿದರೆ ಸಾಕು."[5] ಈ ಬದಲಾವಣೆ ಆದಿಮ ನಂಬಿಕೆಯಂತೆ ನಿರ್ದಿಷ್ಟವಾದ ಕೆಲಸಗಳೊಂದಿಗೆ ಸಂಬಂಧ ಹೊಂದಿದೆ.

ಇಂಥ ವೇಷಾಂತರಗಳು ಹಲವು ಸ್ತ್ರೀ ಪ್ರಧಾನ ಬುಡಕಟ್ಟುಗಳಲ್ಲಿ ಕಂಡುಬರುತ್ತದೆ. 'ಪೆಟಗೋನಿಯದಲ್ಲಿ ಶಾಮನ್ ಕೆಲಸ ಮಾಡುವವರು ಪುರುಷರು. ಆದರೆ ಅವರದು ಸ್ತ್ರೀ ವೇಷ. ಆಫ್ರಿಕಾದ ಝುಲು ಪಂಗಡದ ಮುಖ್ಯಸ್ಥ ಮಳೆ ತರಿಸುವ ಆಚರಣೆ ವೇಳೆ ಸ್ತ್ರೀ ವೇಷದಲ್ಲಿರುತ್ತಾನೆ. ತಾಹಿತಿಯಲ್ಲಿ ಆರೆವ್ವ ದೇವತೆಯ ಪೂಜಾರಿಯು ಸ್ತ್ರೀಯರಂತೆ ಕಾಣಲು ಮೈಗೆ ಸ್ವಲ್ಪ ಬಣ್ಣ ಬಳಿದುಕೊಂಡು ಸ್ತ್ರೀಯರಂತೆ ಹಾವಭಾವ ಮಾಡುತ್ತಾನೆ. ವಿಷಯ ಇಷ್ಟೆ. ಕೃಷಿ ಹಾಗೂ ಮಾಂತ್ರಿಕ ಶಕ್ತಿ ಮೂಲತಃ ಮಹಿಳೆಯೊಡನೆ ಸಂಬಂಧ ಹೊಂದಿತ್ತು ಎನ್ನುವುದನ್ನು ಸೂಚಿಸುತ್ತದೆ."[6]

ಮೂಲತಃ ಸ್ತ್ರೀಯರ ಕರ್ತವ್ಯವಾಗಿದ್ದ ಆರಾಧನೆ, ಕಣಿ ಹೇಳುವುದು, ಮಾಂತ್ರಿಕಶಕ್ತಿ ಇವು ಪುರುಷ ಪ್ರಧಾನವಾಗಿದ್ದನ್ನು ಕೃಷ್ಣ ಕೊರವಂಜಿಯಾಗಿ ಪರಿವರ್ತನೆಯಾಗುವುದರಲ್ಲಿ ಕಾಣಬಹುದು. "ಸ್ತ್ರೀ ವೇಷಧಾರಣೆ ಕುರಿತು 'ಆಚರಣಾಭೇದಿ ತಂತ್ರ' ಎಂಬ ಗ್ರಂಥದಲ್ಲಿ ಸ್ತ್ರೀಯಾಗಿ ಸ್ತ್ರೀಪರ ತತ್ತ್ವವನ್ನು ಆರಾಧಿಸಬೇಕು (ವಾಮ ಭೂತ್ವಾ ಯಜೇತ್‌ಪರಂ) ಎಂದು ಹೇಳಲಾಗಿದೆ. ಸ್ತ್ರೀ ತತ್ತ್ವದ ಆರಾಧಕರು ಸ್ತ್ರೀ ರೂಪ ಧರಿಸಬೇಕು. ತಂತ್ರಶಾಸ್ತ್ರದಲ್ಲಿ ಯೋಗಸಾಧನವೆಂಬ ಮನೋ-ದೈಹಿಕ ಆಚರಣೆಯ ಮುಖ್ಯ ಉದ್ದೇಶ ತನ್ನಲ್ಲಿರುವ ಸ್ತ್ರೀತನವನ್ನು ಅರಿಯುವುದೇ ಆಗಿದೆ. ಅಂದರೆ ಮೂಲವ್ಯಕ್ತಿ ಮತ್ತು ಪ್ರಜ್ಞೆಯನ್ನು ಸ್ತ್ರೀ ವ್ಯಕ್ತಿತ್ವ ಮತ್ತು ಪ್ರಜ್ಞೆಯನ್ನಾಗಿ ಬದಲಾಯಿಸಿಕೊಳ್ಳುವ ವಿಧಾನವನ್ನೇ ತಂತ್ರಸಾಧನೆಯೆಂದು ಕರೆಯಲಾಗಿದೆ. ತಾಂತ್ರಿಕ ಯೋಗಸಾಧನವೆಂದರೆ ಸ್ತ್ರೀತ್ವವನ್ನು ಅದಿರುವ ಅಧಃಸ್ಥಾನದಲ್ಲಿ ಜಾಗೃತಗೊಳಿಸುವುದು. ಅದಕ್ಕೆ ಪ್ರಾಣ ತುಂಬುವುದು. ಮತ್ತು ಅದನ್ನು ಪ್ರಜ್ಞಾಕೇಂದ್ರಕ್ಕೆ ಹರಿಸುವುದು. ತಾಂತ್ರಿಕರ ಪ್ರಕಾರ ಚಿತ್ರಣಿ ಮನುಷ್ಯ ಪ್ರಜ್ಞೆಯ ಕೇಂದ್ರಸ್ಥಾನ. ಇದಕ್ಕೆ ನಾಗಿಣಿ, ಕುಂಡಲಿನಿ ಎಂದು ಪರ್ಯಾಯ ಹೆಸರುಗಳಿವೆ. ಕುಂಡಲಿನಿ ಶಕ್ತಿಯು ಒಮ್ಮೆ ಜಾಗೃತಗೊಂಡು ಸಹಸ್ರದಳ ಪದ್ಮವನ್ನು ಮುಟ್ಟಿದರೆ ಅಲ್ಲಿ ಅದು ಕೇಂದ್ರಿತವಾದ ಪುರುಷತ್ವದೊಡನೆ ಐಕ್ಯಗೊಂಡಂತೆ. ಆಗ ಸ್ತ್ರೀತ್ವವೂ ಸೇರಿದಂತೆ ಎಲ್ಲವೂ ಒಂದು ಬಗೆಯ ಅದ್ವೈತದಲ್ಲಿ ಲೀನವಾಗುತ್ತದೆ. ಏಕೆಂದರೆ ಎಲ್ಲವನ್ನು ಒಳಗೊಂಡಿರುವ ಶುದ್ಧ ಸ್ತ್ರೀತ್ವವು ಆಂತರಿಕವಾಗಿ ಜಾಗೃತವಾದಾಗ ಎಲ್ಲವೂ ಅದರಲ್ಲಿ ಲೀನವಾಗುತ್ತದೆ. ಸ್ತ್ರೀಯಾಗಿ ಪರಮತತ್ತ್ವವನ್ನು ಸಾಧಿಸಬೇಕೆಂಬ ವಿಧಿಯನ್ನು ಪ್ರಾಯೋಗಿಕವಾಗಿ ಕಾರ್ಯಗತಗೊಳಿಸುವ ಆಚರಣೆ ಇದರಲ್ಲಿದೆ.

ಸ್ತ್ರೀ ಶಕ್ತಿ ಎಂಬ ಕಲ್ಪನೆ ಬೌದ್ಧ ತಂತ್ರಗಳಲ್ಲೂ ಇದೆ. ಯೋಗಸಾಧನೆಯ ಉದ್ದೇಶ ಅಂತರ್ಗತವಾದ ಸ್ತ್ರೀತತ್ವವನ್ನು ಜಾಗೃತಗೊಳಿಸಿ ಅದರ ಅ-ದ್ವೈತ್ವವನ್ನು ತಿಳಿಯುವುದು. ಶೈವ ತಾಂತ್ರಿಕರ ಪ್ರಕಾರ ಸ್ತ್ರೀ ಶಕ್ತಿಯು ಯೋಗಿನಿಯ ಶರೀರದ ಹೊರಗೆಲ್ಲೋ ಇಲ್ಲ. ಕುಲಕುಂಡಲಿನಿ ಮುಂತಾದ ಶಕ್ತಿಗಳಂತೆ ಅದು ಯೋಗಿನಿಯ ಶರೀರದಲ್ಲಿಯೇ ಇದೆ ಅದನ್ನು ತಿಳಿದು ಕೊಳ್ಳುವುದೇ

ಯೋಗಸಾಧನೆಯ ಪ್ರಮುಖಗುರಿ. ಸ್ತ್ರೀಯಾಗಿ ಪರಿವರ್ತನೆಯಾಗುವುದು ತಾಂತ್ರಿಕದ ಧ್ಯೇಯ. ತಾಂತ್ರಿಕ ಸ್ತ್ರೀವಾದ ಗುರಿ ಎಂದರೆ ತ್ರಿಪುರ ಸುಂದರಿಯೊಡನೆ ಒಂದಾಗುವುದೇ ಆಗಿದೆ. ಅದಕ್ಕಾಗಿ ತಾನು ಸ್ತ್ರೀ ಎಂದು ಭಾವಿಸಿಕೊಳ್ಳುವುದು ಅವನ ಧಾರ್ಮಿಕ ನಡತೆ. ಶಕ್ತಿ ಸಂಪ್ರದಾಯದವರು ದೇವರನ್ನು ಸ್ತ್ರೀಯೆಂದು ಪರಿಗಣಿಸಿ ಸ್ತ್ರೀಯರಂತೆ ನಡೆದುಕೊಳ್ಳುತ್ತಾರೆ."[೫] ಇಂದೂ ಕೂಡ ಮಾಂತ್ರಿಕರು, ದ್ಯಾಮವ್ವನ ಪೂಜಾರಿಗಳು ಸ್ತ್ರೀಯಂತೆ ವೇಷತೊಟ್ಟು ಪೂಜೆ ಮಾಡುವ ಸಾಧನೆ ಮಾಡುವ ಸಂಗತಿಗಳನ್ನು ನೋಡಬಹುದು. ಬಹುಶಃ ಇಂದಿನ ಜೋಗಪ್ಪಗಳ ಸಂಸ್ಕೃತಿಯ ಮೂಲ ಶಕ್ತಿಸಂಪ್ರದಾಯದೊಳಗೆ ಅಡಗಿರಬಹುದೆಂದೆನಿಸುತ್ತದೆ.

ತನ್ನಲ್ಲಿರುವ ಸ್ತ್ರೀ ಸ್ವಭಾವವನ್ನು ಗೋಚರವಾಗಿಸಿಕೊಳ್ಳದೆ ನೈಜ ಪ್ರೇಮದ ಅನುಭವ ಪಡೆಯಲು ಸಾಧ್ಯವಿಲ್ಲ. ತತ್ತ್ವಗಳ ಸಾಕ್ಷಾತ್ಕಾರವಾಗಿ ಕೈಲಾಸದ ಗಣಗಳು ಭೂಲೋಕಕ್ಕೆ ಬರುವುದು ಶೈವ ಸಣ್ಣಾಟಗಳ ಪ್ರಮುಖ ಲಕ್ಷಣ. ಲೌಕಿಕದಲ್ಲಿ ಹುಟ್ಟಿ ಅನುಭವ ಹೊಂದುವತನಕ ಯಾವ ಗಣಗಳಿಗೂ ಕೈಲಾಸದಲ್ಲಿ ಶಾಶ್ವತ ಸ್ಥಾನವಿರುವುದಿಲ್ಲ. ಇಲ್ಲಿ ಸಲ್ಲುವವರೇ ಅಲ್ಲಿ ಸಲ್ಲಬೇಕು. ಪರಮೇಶ್ವರನೂ ಲೀಲಾವಿನೋದಕ್ಕಾಗಿ ಭೂಮಿ ಮೇಲೆ ಹುಟ್ಟಿ ಬರುತ್ತಾನೆ. ಅವನ ನಿಜರೂಪ ಪ್ರಕಟವಾಗುವುದು ಇಲ್ಲಿಯೇ. ಶಿವ–ಪಾರ್ವತಿ, ನಾರದರಂತೂ ಎದುರುಬದುರಿನ ಮನೆಯವರಂತೆ ಇಹಪರಗಳಿಗೆ ಓಡಾಡುತ್ತಾರೆ. ಹೀಗೆ ಲೌಕಿಕ–ಅಲೌಕಿಕಗಳು ಇಡಿಗಾಳಿನಂತೆ ಬೆರೆತಿವೆ. ಆರಂಭದಲ್ಲಿ ಚರ್ಚಿಸಿದಂತೆ ದೇವರು ಮಾನವನಾಗುವ ಮೂಲಕವೇ ತನ್ನ ಅವತಾರಗಳನ್ನು ಸಾರ್ಥಕ ಮಾಡಿಕೊಳ್ಳುವುದನ್ನೇ ನಾನು ದಾರ್ಶನಿಕ ಲೋಕದೃಷ್ಟಿ ಎಂದು ಕರೆದದ್ದು. ಇಂದ್ರಿಯಾನುಭವವಲ್ಲದ್ದು ದಾರ್ಶನಿಕತೆಯಲ್ಲ. ತಂತ್ರಶಾಸ್ತ್ರಗಳು ಇಂದ್ರಿಯ ಗಮ್ಯತೆಯಿಂದ ಮಾತ್ರ ಆಧ್ಯಾತ್ಮಿಕ ಎತ್ತರಕ್ಕೆ ಏರಲು ಸಾಧ್ಯವೆಂದು ಹೇಳುತ್ತವೆ.

ಪುರುಷನನ್ನು ತೊರೆದು ಪ್ರಕೃತಿಯಾಗುವ ಆಗ ನೀನು ಏಕಶರೀರಿಯಾಗಿ ನಿತ್ಯತ್ವ ಹೊಂದುವೆ ಎನ್ನುವ ತಂತ್ರದ ಮಾತು ಗಮನಾರ್ಹ. 'ಸ್ತ್ರೀ ಪಾಪಜನ್ಮಿ' ಅವಳಿಗೆ 'ಮೋಕ್ಷವಿಲ್ಲ' 'ಪೂಜಾ ಪುನಸ್ಕಾರ ಅವಳಿಂದ ಸಲ್ಲದು' ಎನ್ನುವ ವೈದಿಕೀಕೃತ ನೆಲೆಗಳಿಗಿಂತ ಭಿನ್ನವಾಗಿ ಸ್ತ್ರೀಯನ್ನು ನಿರ್ವಚಿಸುವ ಸೂಕ್ಷ್ಮ ನೆಲೆಗಳು ಕೊರವಂಜಿಯ ಸಂಕಥನದಲ್ಲಿ ಅಡಗಿವೆ.

ಊರಾಡುವ ಸಾಮನ್ಯ ಕೊರವಿಯನ್ನು ದಿವ್ಯಜ್ಞಾನಿ ಕೊರವಿಯನ್ನಾಗಿ ಪರಿವರ್ತಿಸಿರುವ ಸಂಗತಿಯೇ ಕೆಳವರ್ಗಗಳ ವಿವೇಕವನ್ನು ಸಂಸ್ಕೃತೀಕರಣಗೊಳಿಸಿದ ಸಂದರ್ಭವನ್ನು ಹೇಳುತ್ತದೆ. ಮಾತೃಪ್ರಧಾನವಾದ ವ್ಯವಸ್ಥೆಯ ಅಸಂಖ್ಯ ಅರ್ಥಪೂರ್ಣ ಸಂಕೇತಗಳನ್ನು ಹೊಂದಿರುವ ಕೊರವಿಯ ಸಂಕಥನ ಕೆಳವರ್ಗದ ಮಹಿಳೆಯ ದಾರ್ಶನಿಕ ನಡೆಗಳನ್ನು ಕಟ್ಟಿಕೊಡುತ್ತದೆ. ಕೃಷ್ಣ ಕೊರವಂಜಿಯಾಗುವುದು, ಅಂದರೆ ಹೆಣ್ಣಾಗುವುದು ನಕಾರಾತ್ಮಕವಲ್ಲ. ಅದು ತನ್ನೊಳಗಿರುವ ಸ್ತ್ರೀತ್ವವನ್ನು ಜಾಗೃತಿಗೊಳಿಸುವುದು. ಪುರುಷ ಅಹಂಕಾರದ ನೆಲೆಗಳನ್ನು ನಾಶಮಾಡಿ ಏಕಶರೀರಿಯಾಗವುದು. ವಸ್ತು ಪಾತ್ರಗಳು ಅಲೌಕಿಕವಾದರೂ ಲೌಕಿಕ ಸಂಬಂಧವನ್ನು ಕಳಚಿ ಕೊಳ್ಳದಿರುವುದು. ಕಳೆದುಕೊಂಡ ಅಲೌಕಿಕತೆಯನ್ನು ಲೌಕಿಕದ ಮೂಲಕ ಇಲ್ಲಿ ಪಾತ್ರಗಳು ಪಡೆದು

ಕೊಳ್ಳುತ್ತವೆ. ಕೃಷ್ಣಪಾರಿಜಾತ, ಶಿವಪಾರಿಜಾತ, ವೆಂಕಟೇಶ ಪಾರಿಜಾತ ಮೂರು ಸಂಪ್ರದಾಯಗಳ ಅಂತರಂಗ ಒಂದೇ. ದೈವೀಕತೆಯ ಅನ್ವೇಷಣೆ. ಕೃಷ್ಣಪಾರಿಜಾತದಲ್ಲಿ ಸತ್ಯಭಾಮೆ-ರುಕ್ಮಿಣಿಯರ ಭಕ್ತಿಯ ಪರೀಕ್ಷೆಯಾಗುತ್ತದೆ. ದೈವಿಕ ಸ್ಥಾನದಲ್ಲಿದ್ದರೂ ಕೂಡ ಸತ್ಯಭಾಮೆ ತನ್ನ ಯಾಂತ್ರಿಕ ಭಕ್ತಿಯಿಂದಾಗಿ ದೈವೀಕತೆಯನ್ನು ಕಳೆದುಕೊಳ್ಳುತ್ತಾಳೆ. ಕೊನೆಗೆ ಕೊರವಂಜಿ ಸಹಾಯದಿಂದ ಕೃಷ್ಣನನ್ನು ಪಡೆಯುತ್ತಾಳೆ. ಸತ್ಯಭಾಮೆ ಹಾಗೂ ಕೃಷ್ಣರ ಸಮಾಗಮ ಕೊರವಂಜಿಯ ಕಣಿಯಿಂದ ನಡೆಯುತ್ತದೆ. ಕೃಷ್ಣ ಭಾಮೆಯ ಮನೆಗೆ ಬಂದಾಗ ಭಾಮೆ ಕೃಷ್ಣನನ್ನು ನಿರ್ದಯವಾಗಿ ಪ್ರಶ್ನಿಸುತ್ತಾಳೆ. ಕೃಷ್ಣ ಸಾಕಾಗಿ ತನ್ನ ದಶಾವತಾರಗಳನ್ನು ಹೇಳಿದರೂ ಸತ್ಯಭಾಮೆ ಕದ ತೆರೆಯುವುದಿಲ್ಲ. ಕೊನೆಗೆ ನಿನ್ನ ಗಂಡ ಕೃಷ್ಣ ಬಂದೀನಿ ಬಾಗಿಲು ತೆರೆಯೆ ಭಾಮೆ ಎಂದಾಗ ಸತ್ಯಭಾಮೆ ಬಾಗಿಲು ತೆರೆಯುತ್ತಾಳೆ. ಇಬ್ಬರೂ ಸರಸ ಸಲ್ಲಾಪದಲ್ಲಿ ಮನದಣಿಯೇ ತೊಡಗಿಕೊಳ್ಳುತ್ತಾರೆ. ನಂತರ ಬೆಳಿಗ್ಗೆ ಭಾಮೆ ಕೃಷ್ಣನ ಬಾಯಿಂದ ನವವಿಧ ಭಕ್ತಿಯ ವಿವರಗಳನ್ನು ಕೇಳಿ ತಿಳಿದುಕೊಳ್ಳುತ್ತಾಳೆ. ಹೆಣ್ಣು ಕೇವಲ ಭೋಗವಸ್ತು ಎನ್ನುವ ಸನಾತನ ಪರಿಕಲ್ಪನೆಗಳನ್ನು ಈ ಸಂಗತಿಗಳು ಪ್ರಶ್ನೆಮಾಡುತ್ತವೆ. ಕೃಷ್ಣನೂ ಇಲ್ಲಿ ಪರೀಕ್ಷೆಗೆ ಒಳಗಾಗುವುದು ಇಲ್ಲಿ ಗಮನಾರ್ಹವಾಗಿದೆ.

ದೇಹ, ಪಾತಿವ್ರತ್ಯ, ಶೀಲ ಹಾಗೂ ಲಿಂಗಭೇದದಂತಹ ಜೈವಿಕ ವಿಂಗಡಣೆಗಳನ್ನು ಮೀರಿನಿಲ್ಲುವ ಇಲ್ಲಿನ ಗುಣ ಬಹಳ ಮಹತ್ವವಾಗಿದೆ. ವೈದಿಕ ನೆಲೆಗಳಲ್ಲಿ ಹೆಣ್ಣಿನ ಜೈವಿಕ ಮೂಲಗಳನ್ನು ಮುಂದಿಟ್ಟುಕೊಂಡು ಅವಳನ್ನು ನಗಣ್ಯವಾಗಿಸುವ ಹಾಗು ಅಸ್ತಿತ್ವಹೀನವಾಗಿಸುವ ನೆಲೆಗಳಿಗಿಂತ ಭಿನ್ನವಾದ ಅನುಸಂಧಾನವನ್ನು ಕೊರವಿಯ ಸಂಕಥನ ಕಟ್ಟಿಕೊಡುತ್ತದೆ. ಪಂಚಮಕಾರಗಳನ್ನು ಸಕಾರಾತ್ಮಕವಾಗಿ ತಣಿಸಿ ಯೋಗಿಣಿಯಾಗುವ ಪ್ರವೃತ್ತಿಪರ ನಿಲುವು ಗಮನಾರ್ಹವಾದುದು. ಪಕೃತಿ-ಪುರುಷನ ಅಗಲುವಿಕೆಯಿಂದ ಯಾವುದೇ ಸೃಷ್ಟಿ ಅಥವಾ ಸಂತಾನೋತ್ಪತ್ತಿ ಸಾಧ್ಯವಿಲ್ಲ. ಕೃಷ್ಣ ಹಾಗೂ ಭಾಮೆಯ ಅಗಲುವಿಕೆ ಸೃಷ್ಟಿ ಹೀನತೆಯನ್ನೇ ಹೇಳುವಂಥದು.

ರುಕ್ಮಿಣಿಯದು ನಿಷ್ಕಾಮ್ಯ ಭಕ್ತಿ. ಭಾಮೆಯದು ಕಾಮ್ಯ ಭಕ್ತಿ ಎಂದೂ ಕೃಷ್ಣ ನಿಷ್ಕಾಮ್ಯ ಭಕ್ತಿಯುಳ್ಳ ರುಕ್ಮಿಣಿಯಲ್ಲಿ ಹೆಚ್ಚು ಅನುರಕ್ತನಾದರೆ ಭಾಮೆಯಲ್ಲಿ ಹೆಚ್ಚು ಪರಿತ್ಯಕ್ತನಾಗುತ್ತಾನೆ. ಆದರೆ ರುಕ್ಮಿಣಿಗಿಂತ ಭಾಮೆ ಹೆಚ್ಚು ಸೃಜನಶೀಲಳು. ಈ ಭಕ್ತಿಯ ನೆಲೆ ಏನೇ ಇರಲಿ ಕೊರವಿ ಇಂಥ ಸೃಷ್ಟಿಶೀಲ ಸಾಧ್ಯತೆಗಳ ಅಗಾಧ ವಾಸ್ತವತೆಯನ್ನು ಇಲ್ಲಿ ತೆರೆದುತೋರುತ್ತಾಳೆನ್ನುವುದು ಮುಖ್ಯ. ಕೃಷ್ಣ ಕೊರವಿಯಾಗಿ ಪರಿವರ್ತನೆಯಾಗುವ ಕ್ರಿಯೆ ಪುರುಷ ತನ್ನೊಳಗಿನ ಸ್ತ್ರೀತ್ವವನ್ನು ಜಾಗೃತಗೊಳಿಸಿಕೊಳ್ಳುವ ಈ ವಿಲಕ್ಷಣ ಕ್ರಿಯೆ ಪ್ರಕೃತಿಯ ಅತಿಮುಖ್ಯ ಕ್ರಿಯೆಯಾದ ಉತ್ಪಾದನೆಯನ್ನು ಹುರಿಗೊಳಿಸುವುದು. ಕೃಷಿ ಸಂಸ್ಕೃತಿಯಲ್ಲಿ ಈ ಉತ್ಪಾದನಾ ಶಕ್ತಿಗೆ ಮಹತ್ವವಿದೆ. ಹೆಣ್ಣಿನ ಬರಡುತನದ ಹಾಗು ಅವಮಾನಿತಗೊಂಡ ಸಂಸ್ಕೃತಿಯೊಳಗೆ ನಡೆವ ಕೊರವಿಯ ಪ್ರವೇಶ ಹೊಸದೊಂದು ಧಾರ್ಮಿಕ ಆವರಣವನ್ನು ಅನಾವರಣ ಮಾಡುತ್ತದೆ. ಕೊರವಿ ಸಂಸ್ಕೃತೀಕರಣದ ದರ್ಶನಗಳಿಗೆ ಒಳಗಾದರೂ ಅವು ಮೂಲ ಸಂವೇದನೆ ರೂಪದಲ್ಲಿ ಉಳಿದು ಬಂದಿರುವುದು ಗಮನಾರ್ಹವಾಗಿದೆ. ಶಿಷ್ಟಧರ್ಮಗಳ

ಏರಾಟದಲ್ಲೂ ಹೆಣ್ಣಿನ ವ್ಯಕ್ತಿತ್ವ ಶ್ರಮ ಹಾಗೂ ದುಡಿಮೆಗಳಿಗೆ ಗೌರವಯುತ ಸ್ಥಾನ ತಂದು ಕೊಟ್ಟ ಮಹತ್ವದ ನಿಜಗಳನ್ನಿಲ್ಲಿ ಕಾಣುತ್ತೇವೆ.

ಲೋಕಾಪೂರದ ಕೃಷ್ಣಾಜಿ ದೇಶಪಾಂಡೆ ಪಾರಿಜಾತ ಕಂಪನಿಯಲ್ಲಿ ಕೃಷ್ಣ ಹಾಗೂ ಕೊರವಂಜಿ ಪಾತ್ರ ಮಾಡುವ ನಾಡೋಜ ಯಲ್ಲವ್ವ ರೊಡ್ಡಪ್ಪನವರ ಮೂಲತಃ ಕೆಳಕುಲದ ದೇವದಾಸಿ ಮನೆಯಲ್ಲಿ ಹುಟ್ಟಿದಾಕೆ. ಆಕೆ ಕೃಷ್ಣ ಹಾಗೂ ಕೊರವಂಜಿ ಪಾತ್ರ ಮಾಡುವ ಹೊತ್ತಿನಲ್ಲಿ ಗಲಗಲಿಯಲ್ಲಿ ಬ್ರಾಹ್ಮಣರ ಹೆಣ್ಣು ಮಗಳೊಬ್ಬಳು ವೇದಿಕೆಗೆ ಬಂದು ಕೃಷ್ಣನ ರೂಪದಲ್ಲಿದ್ದ ಎಲ್ಲವ್ವನನ್ನು ಪೂಜಿಸಿ ಕಾಯಿ ಕರ್ಪೂರ ಹಚ್ಚಿ ನಮಸ್ಕರಿಸಿದ್ದನ್ನು ಯಲ್ಲವ್ವ ಇಂದು ಭಾವುಕಗಳಾಗಿ ನೆನಸಿಕೊಳ್ಳುತ್ತಾಳೆ. ಅಂದರೆ ಕೃಷ್ಣ ಹಾಗೂ ಕೊರವಂಜಿ ಪಾತ್ರದ ಅಭಿನಯಗಳು ಯಲ್ಲವ್ವನ ಜಾತಿ ಸ್ಥರವನ್ನು ಹಿಂದಿಕ್ಕಿ ಅವಳನ್ನು ದೈವೀಸ್ಥಾನಕ್ಕೇರಿಸಿದ್ದನ್ನು ಇಲ್ಲಿ ಗಮನಿಸಬಹುದು. ಹೆಣ್ಣನ್ನು ಅವಳ ಜೈವಿಕ ಕಾರಣಗಳಿಗಾಗಿ ಅಗ್ಗವಾಗಿ ನೋಡುತ್ತಿದ್ದ ವಾತಾವರಣದಲ್ಲಿ ಅವಳಿಗೆ ಆಧ್ಯಾತ್ಮೀಕರಣದ ಹಾಗೂ ದೈವತ್ವದ ನೆಲೆಗಳನ್ನು ಕೊರವಿ ದಕ್ಕಿಸಿಕೊಟ್ಟಿದ್ದಾಳೆ. ಕೃಷ್ಣ, ರುಕ್ಮಿಣಿ, ಸತ್ಯಭಾಮೆಯಂಥ ವೈದಿಕ ಸಂಸ್ಕೃತಿಯೊಳಗೆ ನಡೆಯುವ ಕೊರವಿಯ ಪ್ರವೇಶ ಹೊಸದೊಂದು ಧಾರ್ಮಿಕ ಸಂಕಥನಕ್ಕೆ ದಾರಿಮಾಡಿಕೊಟ್ಟಿದೆ. ಹೆಣ್ಣಿಗೆ ಸನಾತನ ಸಂಸ್ಕೃತಿ ಆರೋಪಿಸಿದ್ದ ಎಲ್ಲ ಜೀವ ವಿರೋಧಿ ನೆಲೆಗಳನ್ನು ಮೀರಿ, ಕೊರವಿ ಪಾತ್ರ ಮೊದಲ ಬಾರಿಗೆ ಹೆಣ್ಣಿಗೊಂದು ಆಧ್ಯಾತ್ಮಿಕ ಎತ್ತರ ಹಾಗೂ ದಾರ್ಶನಿಕ ವಿಸ್ತಾರತೆಗಳನ್ನು ದಕ್ಕಿಸಿಕೊಡುತ್ತದೆ.

ಕೊರವಂಜಿಯನ್ನು ಕೇವಲ ಲಿಂಗ, ಜಾತಿಯ ಹಿನ್ನೆಲೆಯಲ್ಲಿ ಪರಿಭಾವಿಸುವಲ್ಲಿ ಪುರುಷಶಾಹಿ ಹಾಗೂ ಪುರೋಹಿತಶಾಹಿ ಪಾತ್ರವಿರುವುದು ಗಮನೀಯ. ಅವು ಯಾವತ್ತೂ ಹೆಣ್ಣನ್ನು ವ್ಯಕ್ತಿತ್ವ ಹಾಗೂ ಅಸ್ತಿತ್ವಹೀನವಾಗಿಯೇ ಮಂಡಿಸುತ್ತ ಬಂದಿವೆ. ಹೀಗಿರುವಾಗ ಅವಳನ್ನು ಆಧ್ಯಾತ್ಮದ ಹತ್ತಿರಕ್ಕೂ ಬಿಡದಿರುವ ಪ್ರಸಂಗಗಳನ್ನು ಚರಿತ್ರೆಯಲ್ಲಿ ಬೇಕಾದಷ್ಟು ಕಾಣುತ್ತ ಬಂದಿದ್ದೇವೆ. ಲಾಗಾಯ್ತಿನಿಂದಲೂ ಮಹಿಳೆಯನ್ನು ಜೈವಿಕ ಘಟಕವಾಗಿ ಪರಿಭಾವಿಸುತ್ತ ಅವಳ ಜ್ಞಾನ ಹಾಗೂ ಆಧ್ಯಾತ್ಮಿಕವೆನ್ನಬಹುದಾದ ಸಾಧನೆಗಳನ್ನು ಖಾಸಗಿ ಎಂದು ಉಪೇಕ್ಷಿಸುತ್ತ ಬರಲಾಗಿದೆ. ಗಂಡ, ಮಕ್ಕಳು, ಕುಟುಂಬ, ಲಿಂಗ, ಜಾತಿಯ ಮೂಲಕವೇ ಅವಳನ್ನು ಗುರುತಿಸಲಾಗಿದೆ ಹೊರತು ಸ್ವತಂತ್ರ ವ್ಯಕ್ತಿಯನ್ನಾಗಿ ಪರಿಭಾವಿಸಿಲ್ಲ. ಅವಳ ಪರಕೀಯತೆಯನ್ನು ಅಸ್ತಿತ್ವ ಹೀನತೆಯನ್ನು ಸಾಮಾಜಿಕ ಮೌಲ್ಯವಾಗಿಸುತ್ತ ಬರಲಾದ ನಿರಾಶಾವಾದಿ ಹಾಗೂ ಅಸಹಾಯಕವಾದಿ ದೃಷ್ಟಿಕೋನಗಳನ್ನು ಸರಿಪಡಿಸಬೇಕಾಗಿದೆ.

ಇಲ್ಲಿ ಕೊರವಿಯನ್ನು ಕೇವಲ ಲಿಂಗ, ಜಾತಿಯಂಥ ತಾರತಮ್ಯವಾದಿ ನೆಲೆಯಲ್ಲಿ ಗ್ರಹಿಸದೇ ಒಂದು ಸಾಮಾಜಿಕ ಹಾಗೂ ಸಾಂಸ್ಕೃತಿಕ ಘಟಕವಾಗಿ ಗ್ರಹಿಸುವ ಪ್ರಯತ್ನ ಮಾಡಲಾಗಿದೆ. ಉತ್ಪಾದನೆ, ಮನೆವಾರ್ತೆ, ಸಂತಾನೋತ್ಪತ್ತಿ, ಶಕುನ, ಆಧ್ಯಾತ್ಮ ಸಾಧನೆ ಇತ್ಯಾದಿ ಒಳ ಹೊರಗಿನ ಕ್ರಿಯೆಗಳನ್ನು ನಿರ್ವಹಿಸುವ ಕೊರವಂಜಿ ಹೆಣ್ಣಿನ ಸ್ವತಂತ್ರ ಮನೋಧರ್ಮದ ಪ್ರತೀಕವಾಗಿ ಕಾಣುತ್ತಾಳೆ.

ಸಾಧಕನ ದೊಡ್ಡಗುಣವೇ ಬಾಹ್ಯ ಹಾಗೂ ಆಂತರಿಕ ತೊಳಲಾಟಗಳನ್ನು ಮೀರಿ ತನ್ನ ತಾನು ಕಂಡುಕೊಳ್ಳುವುದು. ಬಾಹ್ಯದ ಕುರುಹುಗಳನ್ನೆಲ್ಲ ಮೀರಿನಿಂತು ಸಾಕ್ಷಾತ್ಕಾರಕ್ಕಾಗಿ ಹಂಬಲಿಸುವುದು. ಸಾಕ್ಷಾತ್ಕಾರವೆಂದರೆ ಸ್ವ ಅರಿವಿನ ವಿಸ್ತಾರ ಹಾಗೂ ಸ್ವ ನಿಯಂತ್ರಣದ ಪ್ರಕ್ರಿಯೆ. ಅದು ಒಳ ಹೊರಗೂ ಒಂದಾಗುವ ಕ್ರಿಯೆ. ಅರಿವಿನ ಜಾಗೃತಿ, ಸ್ವ ಅರಿವು ಮತ್ತು ಜಾಗೃತಿಯ ಈ ಗುಣ ಮಹಿಳೆಯರಿಗೆ ಪೂರಕವಾದ ಸಾಮಾಜಿಕ ಪರಿವರ್ತನೆಯನ್ನು ಮತ್ತು ಲಿಂಗಸಂಬಂಧಿ ಅಭಿವೃದ್ಧಿಯನ್ನು ಸಾಧಿಸಿಕೊಳ್ಳಲು ನೆರವಾಗುತ್ತದೆ. ಇಂಥ ಆಧ್ಯಾತ್ಮದ ಎತ್ತರಗಳು ಮಹಿಳೆಯನ್ನು ಸಬಲೀಕರಣ ಕ್ರಿಯೆಗಳತ್ತ ಪ್ರೇರೇಪಿಸುವಂಥವು. ಈ ಅರ್ಥದಲ್ಲಿ ಮಹಿಳಾ ಆಧ್ಯಾತ್ಮೀಕರಣ ಹಾಗೂ ಸಬಲೀಕರಣ ಪ್ರತೀಕವಾಗಿ ಕೊರವಂಜಿ ಕಂಡುಬರುತ್ತಾಳೆ. ಆಧ್ಯಾತ್ಮಿಕ ಸ್ವಾತಂತ್ರ್ಯವೆಂದರೆ ಮನುಷ್ಯ ನಿರ್ಮಿತ ನಿಯಂತ್ರಣ ಹಾಗೂ ನಿರ್ಬಂಧಗಳಿಲ್ಲದ ಸ್ಥಿತಿಯೆಂದು ಇಲ್ಲಿ ಭಾವಿಸಲಾಗಿದೆ. ಈ ವಿವೇಕದಲ್ಲಿ ಕೊರವಂಜಿಯನ್ನು ವಿಶ್ಲೇಷಿಸಿಕೊಳ್ಳಲಾಗಿದೆ.

**ಕೊನೆಟಿಪ್ಪಣಿ**

೧. ಉಧೃತ, ಲೋಕಾಯುತ, ಜಿ. ರಾಮಕೃಷ್ಣ, ಪುಟ-೧೯೫, ೨೦೧೧

೨. ತತ್ವಕೊರವಂಜಿ ಡಾ. ವೀರೇಶ ಬಡಿಗೇರ, ೨೦೧೪, ಅಪ್ರಕಟಿತ ಕೃತಿ

೩. ಅದೇ, ೨೦೧೪

೪. ಅದೇ, ೨೦೧೪

೫. ಅದೇ, ೨೦೧೪

***

ಅಧ್ಯಾಯ ಹನ್ನೊಂದು

# ಕೊರವಂಜಿ : ಸಂಸ್ಕೃತೀಕರಣದ ಬಿಡೆ ಮತ್ತು ಬಿಡುಗಡೆ

(ಸಮಾರೋಪ)

ಕನ್ನಡ ಸಾಹಿತ್ಯದ ಓದಿನಲ್ಲಿ ಸಿಗುವ ಹೆಣ್ಣಿನ ಸಾಮಾನ್ಯ ಮಾದರಿ ಎಂದರೆ ಅವಳನ್ನು ಉಪಭೋಗದ ಮಾದರಿಯನ್ನಾಗಿ ಮಂಡಿಸಿರುವದು. ಮತ್ತೊಂದು ವಿಚಿತ್ರ ಸತ್ಯವೆಂದರೆ ಹಲವು ಶೋಷಣೆಗೆ ಒಳಗಾದ ಅವಳನ್ನು ಸೌಂದರ್ಯದ ಆಗರವಾಗಿ ಕವಿಗಳು ಚಿತ್ರಿಸಿದ್ದು. ಕನ್ನಡ ಕಾವ್ಯವು ಹೆಣ್ಣನ್ನು, ಅವಳ ಅಂತರಂಗದ ಸೊಗಸನ್ನು ಹಿಡಿಯುವಂತೆ ಕಾಣುವ ವರ್ಣನೆಗಳನ್ನೂ ಮರೆಯಬೇಕಿಲ್ಲ. ಇಂಥ ಎಲ್ಲ ವರ್ಣನೆಗೆ ಒಳಗಾದವರು ಹೆಚ್ಚಿನ ಸಂದರ್ಭದಲ್ಲಿ ಕೆಳವರ್ಗದ ಮಹಿಳೆಯರು ಅಲ್ಲ ಎನ್ನುವದು ಬಹುಮುಖ್ಯ ವಿಚಾರ.

ನಾನು ಈ ಅಧ್ಯಯನದಲ್ಲಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿರುವ ಕೊರವಂಜಿ ಕಥನವು ಇಂಥ ಸ್ತ್ರೀ ಸೌಂದರ್ಯದ ಆದರ್ಶ ಮಾದರಿಗಳನ್ನು ಮರುವಿವೇಚನೆಗೆ ಒಡ್ಡಲು ಪ್ರೇರೆಪಿಸುತ್ತದೆ. ದೇಹಸೌಂದರ್ಯ ಮತ್ತು ಅಕ್ಷರವಿದ್ಯೆಯಂತಹ ಸ್ಥಾಪಿತ ನೆಲೆಗಳನ್ನು ಮೀರಿ ಹೆಣ್ಣನ್ನು ಅದರಲ್ಲೂ ಕೆಳವರ್ಗದ ಹೆಣ್ಣನ್ನು, ಅರ್ಥಮಾಡಿಕೊಳ್ಳುವ ಬಹುದೊಡ್ಡ ಪ್ರಯತ್ನ ನನ್ನದಾಗಿದೆ. ಕೊರವಂಜಿಯಂಥ ಕೆಲಕುಲಗಳ ಹೆಣ್ಣುಗಳು ಕಟ್ಟಿಕೊಡುವ ನೈತಿಕ ಹಾಗೂ ತಾತ್ವಿಕ ಸಮರ್ಥನೆಗಳು ಹೆಣ್ಣನ್ನು ಪದಾರ್ಥವಾದಿ ಚಿಂತನಾಕ್ರಮಗಳಿಂದ ಹೊರಬರುವಂತೆ ಮಾಡುತ್ತವೆ. ದೇಹವಾದಿ ಹಾಗೂ ಸೌಂದರ್ಯವಾದಿ ಗ್ರಹಿಕೆಗಳಿಂದ ಏಕಕಾಲಕ್ಕೆ ಬಿಡುಗಡೆ ಬಯಸುತ್ತವೆ.

ಕೊರವಂಜಿಯಂಥ ಕೆಳಜಾತಿಯ ಹೆಣ್ಣುಗಳು ಒಳಗೂ, ಹೊರಗೂ ಎದುರಿಸುವ ನೂರಾರು ದ್ವಂದ್ವಗಳು, ಸಮಸ್ಯೆ ಮತ್ತು ಸವಾಲುಗಳು, ತಲ್ಲಣ ಮತ್ತು ಸಂಭ್ರಮಗಳನ್ನು, ಜಾತಿ ಹಾಗೂ ಲಿಂಗ ಸಂಬಂಧವಾಗಿ ಎದುರಿಸುವ ಬಿಕ್ಕಟ್ಟುಗಳನ್ನು ಎದೆಗಾರಿಕೆಯಿಂದ ನಿಭಾಯಿಸುವ ಸಂಗತಿಗಳು ಕೊರವಂಜಿಯನ್ನು ಶೈಕ್ಷಣಿಕ ವಲಯದ ಆಚೆ ನಿಂತು ಚರ್ಚಿಸಲು ಹುರಿದುಂಬಿಸುತ್ತವೆ. ಕಾರಣ ಯಾವುದೇ ಶೈಕ್ಷಣಿಕ ಹಾಗೂ ಪ್ರಭುತ್ವ ವ್ಯವಸ್ಥೆಯು ಕೆಳವರ್ಗದ ವೈವಿಧ್ಯತೆ ಹಾಗೂ ಚಲನಶೀಲ ಗುಣವನ್ನು ಬದಿಗೊತ್ತಿ, ಸ್ಥಿರಗೊಂಡ ನೆಲೆಗಳಿಗೆ ಸಂಸ್ಕೃತಿಯ ಮಾದರಿಯನ್ನು ಪ್ರಚುರಪಡಿಸುತ್ತವೆ.

ಶುಷ್ಕ ಬದುಕನ್ನು ಪ್ರೇರೇಪಿಸುತ್ತವೆ. ಆ ಸಂಸ್ಕೃತಿಯ ಹಂಗಿನಲ್ಲಿ ಸಿಲುಕಿದವರು ಸಹ ಆ ಸಂಸ್ಕೃತಿಯನ್ನು ಅನುಸರಿಸುವ ಹಾಗೆ ಮಾಡುತ್ತವೆ. ಶಿಷ್ಟ ಸಂಸ್ಕೃತಿಯ ಹಂಗು ಇವರನ್ನು ಸಂಸ್ಕೃತೀಕರಣಗೊಳ್ಳುವ ಹಾಗೆ ಮಾಡುತ್ತದೆ. ಆದರೆ ಅಭಿವ್ಯಕ್ತಿ ಸ್ವಾತಂತ್ರ್ಯ ಗಳಿಸಿರುವ ಕೆಳವರ್ಗದಂಥ ಹೆಣ್ಣು ಮಕ್ಕಳು ಇಂಥ ಜಡ ಸಾಂಸ್ಕೃತಿಕ ಭೀಡೆಗಳನ್ನು ಮೀರಿ ಬೆಳೆಯಬಲ್ಲರು. ಇದು ಪೌರಾಣಿಕ ಪಾತ್ರದ ಕೊರವಂಜಿಯ ಪ್ರಶ್ನೆ ಮಾತ್ರವಲ್ಲ. ಕೊರವಂಜಿ ಪಾತ್ರ ನಿರ್ವಹಿಸುವ ಕಲಾವಿದೆಯರ ಮಾನಸಿಕ ತಾಕತ್ತು ಕೂಡ ಆಗಿರುವುದು ವಿಶೇಷ. ಎಂಥ ಸಾಂಪ್ರದಾಯಿಕ ನಿಯಂತ್ರಣವಿದ್ದರೂ ತನ್ನ ಪ್ರಬುದ್ಧ ನಡತೆಯಿಂದ ಅಂಥವುಗಳ ಉಲ್ಲಂಘನೆ ಸಾಧ್ಯ ಎಂಬುದನ್ನು ತೋರಿಸಿಕೊಡುತ್ತಾರೆ. ಸಾಂಪ್ರದಾಯಿಕ ಸಮಾಜ ತನ್ನ ಮೇಲೆ ಹೇರಿದ ಹಂಗನ್ನು ಹರಿದುಕೊಂಡು ಸ್ವಾಭಿಮಾನದಿಂದ ತನ್ನ ವ್ಯಕ್ತಿತ್ವವನ್ನು ಕಟ್ಟಿಕೊಳ್ಳುವ ಕೊರವಂಜಿಯ ಚಿತ್ರಣವನ್ನು ಕಂಡುಕೊಳ್ಳಲು ನಾನಿಲ್ಲಿ ಪ್ರಯತ್ನಿಸಿದ್ದೇನೆ.

ಕೊರವಂಜಿ ಶೈವ ಹಾಗೂ ವೈದಿಕ ಸಾಹಿತ್ಯಗಳಲ್ಲಿ ಉನ್ನತೀಕರಣಗೊಂಡು ಪ್ರವೇಶ ಪಡೆದದ್ದು ಕಾಣುತ್ತದೆ. ವೈದಿಕ ಸಾಹಿತ್ಯವಂತೂ ಕೊರವಂಜಿಯನ್ನು ಕೃಷ್ಣನ ಇನ್ನೊಂದು ಅವತಾರವೇನೋ ಎಂಬಂತೆ ಚಿತ್ರಿಸಿತು. ದೇವರಾದ ಕೃಷ್ಣ ಮತ್ತು ಸತ್ಯಭಾಮೆಯ ಜಗಳವನ್ನು ಪರಿಹರಿಸಲು ಸಾಕ್ಷಾತ್ ಶ್ರೀಕೃಷ್ಣನೇ ಕೊರವಂಜಿಯ ವೇಷವನ್ನು ಧರಿಸುತ್ತಾನೆ. ಆ ಮೂಲಕ ಕೃಷ್ಣ ಭಾಮೆಯರ ಮನಸ್ತಾಪವನ್ನು ದೂರ ಮಾಡುತ್ತಾಳೆ. ಸಕಲ ಜ್ಞಾನ ಪರಿಣಿತಳಾದ ಈಕೆ ಬ್ರಹ್ಮಾಂಡ, ಈರೇಳು ಲೋಕ, ಸತಿಧರ್ಮ ಮುಂತಾದವುಗಳ ಕುರಿತು ಅಸ್ಖಲಿತವಾಗಿ ಮಾಡುತ್ತಾಳೆ. ಇಷ್ಟೆಲ್ಲಾ ಒಳಿತನ್ನು ಮಾಡುವ ಜ್ಞಾನಿಯಾದ ಕೊರವಂಜಿಯನ್ನು ಅವಳ ಜಾತಿಯ ಮೂಲದಿಂದಲೇ ಗುರಿತಿಸಲಾಗಿರುವುದು ಗಮನಾರ್ಹ. ಕೃಷ್ಣನು ಕೊರವಂಜಿಯಾಗಿ ಪರಿವರ್ತನೆಯಾದಾಗ ಶಂಕರಮಣಿ, ತಾವರೆಮಣಿ, ಕರ್ಪೂರಮಣಿ, ಬಿಂಕದಾ ತುಳಸಿಮಣಿ, ಶ್ರೀಗಂಧಮಣಿ, ಪೊಂಕಾದಿ ಸ್ಪಟಿಕದಾ ಮಣಿಗಳ್ಹಾರಗಳನ್ನು ಧರಿಸಿದಾಗಲೂ ಕೊನೆಗೆ ಗುರುತಿಗಾಗಿ ಗುಲಗಂಜಿ ಹಾರ ಹಾಕಿಕೊಳ್ಳಬೇಕಾಗುತ್ತದೆ. ಗುಲಗಂಜಿ ಕೊರವರ ಪ್ರಕೃತಿ ಸಂಬಂಧವನ್ನು ಹೇಳಿದಂತೆ, ಅವರ ಕುಲಮೂಲದ ಗುರುತನ್ನು ಏಕಕಾಲಕ್ಕೆ ಪ್ರತೀಕಿಸುವಂತೆ ಚಿತ್ರಿಸಲಾಗಿದೆ. ಕೊರವಂಜಿ ಧಾರ್ಮಿಕವಾಗಿ ಉನ್ನತೀಕರಣಗೊಂಡಾಗಲೂ ಅವಳ ಕುಲದ ಮೂಲದ ಗುರುತನ್ನು ಹಾಗೇ ಉಳಿಸಲಾಗಿದೆ.

ಕೊರವಂಜಿ ಕೆಲವೊಂದು ಸಾರಿ ಅನಿವಾರ್ಯವಾಗಿ ಹಂಗಿಗೆ ಸಿಲುಕಿದರೂ, ಸಮಾಜ ತಿಳಿದಂತೆ ಕೇವಲ ಕಾಡಿಬೇಡಿ ತಿನ್ನುವವಳಲ್ಲ. ವ್ಯಾಪಾರ, ಕಣಿ ಹೇಳುವುದು, ಅದಕ್ಕೆ ಪ್ರತಿಫಲವಾಗಿ ಬರುವ ಆಹಾರ ಅಥವಾ ಉಡುಗೆ ಸಾಮಗ್ರಿಗಳು ಮಾತ್ರ ಅವಳ ಸಂಪಾದನೆಯಾಗಿರುತ್ತವೆ. ಅವಳದು ಭಿಕ್ಷಾ ವೃತ್ತಿಯಲ್ಲ, ಕೊಡುತೆಗೆದುಕೊಳ್ಳುವ ಪ್ರಕ್ರಿಯೆ. ಅವರಿಗೆ ಬೇಕಾದನ್ನು ನೀಡಿ, ತನಗೆ ಬೇಕಾದನ್ನು ಕೇಳಿ ಪಡೆಯುವ ಸ್ವಾಭಿಮಾನಿ ಎನ್ನುವುದನ್ನು ಕಂಡುಕೊಳ್ಳಲಾಗಿದೆ. ಕೊರವಂಜಿಯೇ ಹೇಳುವಂತೆ

"ಸಟೆಯ ಮಾತುಗಳನ್ನಾಡಿ ಸೆಳೆದುಕೊಂಡು ಹೋಗಿ
ಹೊಟ್ಟೆಯ ಹೊರೆವ ಕೊರವಿ ನಾನಲ್ಲವಮ್ಮ

ನೆಟ್ಟನೆ ಸದಾಶಿವನ ತಟ್ಟಿ ಬಂದ ಕೊರವಿಯ ಮಾತ
ದಿಟವೆಂದು ಸೆರಗ ಗಂಟಿಕ್ಕಿಕೊಳ್ಳಮ್ಮ"

ಅವಳು ಬೇಡಿ ತಿನ್ನುವವಳಲ್ಲ. ಸತ್ಯಹೇಳಿ ದುಡಿಮೆಗೆ ತಕ್ಕ ಪ್ರತಿಫಲ ಪಡೆಯುವವಳು. ದುಡಿಮೆ ಹಾಗೂ ಪ್ರಾಮಾಣಿಕತೆಯ ಮೂಲಕ ಸಮಾಜದಲ್ಲಿ ತಮ್ಮದೆಯಾದ ಸ್ಥಾನವನ್ನು ಕೊರವಂಜಿ ಪಡೆದಿದ್ದು ಇದರಿಂದ ತಿಳಿದು ಬರುತ್ತದೆ.

ಕೊರವಂಜಿಯಂಥ ಹೆಣ್ಣನ್ನು ಸಮಾಜವು 'ದಾಸಿ' ಎಂಬ ಭಾವನೆಯಿಂದಲೇ ಕಾಣುತ್ತದೆ. ಅವರನ್ನು ತಮ್ಮ ಉಪಭೋಗಕ್ಕೆ ಇರುವವರು ಎಂದು ಭಾವಿಸಿದ್ದು ಕಾಣಿಸುತ್ತದೆ. ಆದರೆ ಕೊರವಂಜಿಯಂಥ ಕೆಳವರ್ಗದ ಸ್ತ್ರೀಯರು ಇಂಥ ಶಿಷ್ಟ ಸಂಸ್ಕೃತಿಯ ಹಂಗಿಗೆ ಅಲ್ಪಪ್ರಮಾಣದಲ್ಲಿ ಒಳಗಾಗಿದ್ದರೂ ಸಂಸ್ಕೃತಿಯ ಈ ಹುನ್ನಾರಗಳನ್ನು ಮೀರಿ ಬೆಳೆಯುವ ಛಲವನ್ನು ತೋರುತ್ತಾರೆ. ತಮ್ಮ ನೈತಿಕ ಶಕ್ತಿ ಮತ್ತು ವಿವೇಕದ ಮೂಲಕ ಇಂಥ ಇಕ್ಕಟ್ಟುಗಳನ್ನು ಮೀರುವ ಪ್ರಯತ್ನ ಮಾಡುತ್ತಾರೆ. ಕೊರವಂಜಿ ಕೆಳಜಾತಿಯವಳೆಂದು ಅವಳ ಮೇಲೆ ಲೈಗಿಂಕ ದೌರ್ಜನ್ಯ ಮಾಡಬಂದ ನಾರಾಯಣಸ್ವಾಮಿಯನ್ನು ಕಂಚಿ ತನ್ನ ತಂತ್ರದ ಮೂಲಕ ತಡೆಯುತ್ತಾಳೆ. ಚಾಮುಂಡಿ ನಂಜುಂಡ ತನ್ನ ಜಾತಿಯನ್ನು ಮೀರಿ ಬಂದಾಗ ಮಾತ್ರ ಅವನನ್ನು ಸ್ವೀಕರಿಸುತ್ತಾಳೆ. ಶಿಷ್ಟ ಸಂಸ್ಕೃತಿಯ ಹಂಗಿನಲ್ಲಿ ಇದ್ದಂತೆ ಕಂಡರೂ, ಆ ಸಂಸ್ಕೃತಿ ಅವಳ ಆತ್ಮವಿಶ್ವಾಸವನ್ನು ಘಾಸಿಗೊಳಿಸಿದಾಗ ಸೆಟೆದು ನಿಲ್ಲುವ ಧೈರ್ಯ ತೋರುತ್ತಾಳೆ.

ಕೊರವರಂಥ ಕೆಳವರ್ಗದ ಸಂಸ್ಕೃತಿಯಲ್ಲಿ ಪುರುಷನಂತೆ ಮಹಿಳೆಯು ಸಾರ್ವಜನಿಕ ದುಡಿಮೆಯಲ್ಲಿ ಪಾಲ್ಗೊಳ್ಳುತ್ತಾಳೆ. ಅಲ್ಲಿ ಕೊರವಂಜಿ ಪುರುಷನಷ್ಟೆ ಜವಾಬ್ದಾರಿ ಮತ್ತು ಅಧಿಕಾರವನ್ನು ಪಡೆದಿದ್ದಾಳೆ. ಒಂದು ಹಂತದಲ್ಲಿ ಹೆಣ್ಣು ಗಂಡು ವ್ಯತ್ಯಾಸ ಮೀರಿದ ಲಿಂಗಾತೀತ ರಚನೆಯನ್ನು ಇಂಥಲ್ಲಿ ಕಾಣಬಹುದು. ಕೊರವಂಜಿ ಬದುಕಲ್ಲಿ ಮದುವೆ ಸಂಸಾರಕ್ಕೆ ಪ್ರೇರಕವೇ ಹೊರತು ಶಿಷ್ಟ ಸಂಪ್ರದಾಯದಂತೆ ಅದು ಜನ್ಮಜನ್ಮಾಂತರದ ಸಂಬಂಧವಲ್ಲ. ಹಾಗಾಗಿ ಈ ಸಂಸ್ಕೃತಿಯಲ್ಲಿ ಹೆಣ್ಣು ತನ್ನ ಜೀವಿತದ ಕೊನೆಯವರೆಗೂ ತನ್ನ ಗಂಡನೊಂದಿಗೆ ಬಾಳಬೇಕು, ಆತ ಸತ್ತರೆ ಸಹಗಮನ ಮಾಡಬೇಕು, ಇಲ್ಲವೇ ಕೊನೆಯವರೆಗೂ ವೈಧವ್ಯದ ಜೀವನವನ್ನು ಕಳೆಯಬೇಕೆಂಬ ಯಾವ ನಿಬಂಧನೆಗಳಲ್ಲಿ ಸಡಿಲತೆ ಇದೆ.

ಬದುಕು ಕಟ್ಟಿಕೊಳ್ಳಲು ಪರವೂರಿಗೆ ತೆರಳುವ ಕೊರವಂಜಿಯನ್ನು ಆ ಊರವರು ಹೊನ್ನಿನ ಆಸೆ ತೋರಿಸಿ, ಆ ಊರಿನಲ್ಲಿಯೇ ಇರು ಎಂದಾಗ 'ಬಂಡು ಮಾಡ್ಯಾನೆ ನಮ್ಮ ಕೊರಮ ಕೆಂಡ ಹೊಯ್ಯಾನೆ ಬಗಸಿಗೆ' ಎಂಬಂಥ ಮಾತುಗಳನ್ನು ಹೇಳುತ್ತಾಳೆ. ಅಸ್ತಿತ್ವ ಹಾಗೂ ವ್ಯಕ್ತಿತ್ವ ಹೀನಳನ್ನಾಗಿಸುವ ಸಾಮಾಜಿಕ ಹಾಗೂ ಧಾರ್ಮಿಕ ವಾತಾವರಣದಲ್ಲಿ ತನ್ನತನವನ್ನು ಉಳಿಸಿಕೊಳ್ಳಲು ಹೋರಾಡುವ ಇಂಥ ಸಂಗತಿಗಳು ಸಾಹಿತ್ಯ ಕೃತಿಗಳಿಗಿಂತ ಸಾಹಿತ್ಯೇತರ ಆಕೃತಿಗಳಲ್ಲಿ ಹೆಚ್ಚು ಕಾಣುತ್ತವೆ. ಸಾಹಿತ್ಯ ಆಕರಗಳಲ್ಲಿ ಕೊರವಂಜಿ ಹೆಚ್ಚಿನ ಸಂದರ್ಭದಲ್ಲಿ ಎರಡನೆ ದರ್ಜೆಯವಳಾಗಿ ಚಿತ್ರಿತವಾದರೆ ಸಾಹಿತ್ಯೇತರ ಆಕರಗಳಲ್ಲಿ ಅವಳೊಬ್ಬ ಸ್ವಾವಲಂಬಿ ಹಾಗೂ ಸಾತ್ವಿಕ ಹೆಣ್ಣಾಗಿ ಚಿತ್ರಿತಳಾಗಿದ್ದಾಳೆ. ಈ ಅಧ್ಯಯನ ಇದನ್ನು ಬಹುಮುಖ್ಯವಾಗಿ ಗುರುತಿಸಿದೆ.

ಹೆಚ್ಚು ಹೆಚ್ಚು ಮಾತಾಡಿದರೆ ವಾಚಾಳಿ ಎನಿಸಿಕೊಳ್ಳುವ ಹೊತ್ತಿನಲ್ಲಿ ತನ್ನ ಬದುಕಿನ ನಿರ್ವಹಣೆಗಾಗಿ ಅದೇ ಮಾತನ್ನು ಸಕಾರಾತ್ಮಕವಾಗಿ ದುಡಿಸಿಕೊಂಡಿದ್ದು ಕೊರವಂಜಿಯ ವಿಶೇಷತೆಯಾಗಿದೆ. ಅವಳ ಬದುಕಿನ ಅವಶ್ಯಕವಾದ ಕೌಶಲ್ಯವೆಂದರೆ ಮಾತುಗಾರಿಕೆ. ಅಂತೆಯೇ ಅವಳ ಕಣಿ ಹೇಳುವ ಶಾಸ್ತ್ರವು ಹೇಳುವ ಕೇಳುವ ಮಾತಿನ ಕೌಶಲ್ಯತೆಯನ್ನೇ ಅವಲಂಬಿಸಿದೆ. ಕಣಿ ಕೇಳುವವರೊಂದಿಗೆ ಪ್ರೀತಿ, ಅಂತಃಕರಣ ತುಂಬಿಕೊಂಡ ಮಾತುಗಳನ್ನಾಡುತ್ತಾಳೆ. ಆ ಮೂಲಕ ಎದುರಿಗಿರುವವರ ಅಂತರಂಗವನ್ನು ಹೊಕ್ಕು ಅವರ ಸಮಸ್ಯೆಗಳಿಗೆ ಸ್ಪಂದಿಸುತ್ತಾಳೆ. ಮಾತು ಇಲ್ಲಿ ಪರಸ್ಪರ ಸಮಸ್ಯೆಗಳನ್ನು ಅರಿಯುವ ಹಾಗೂ ತಿಳಿಯುವ ಸಾಧನ. ಇಲ್ಲಿ ಮಾತು ವಾಚಾಳಿತನ ಅಥವಾ ಹರಟೆಯಾಗದೆ, ಅದು ಸಂಕಟ ಹೊರಹಾಕುವ, ಸಾಂತ್ವನ ಮಾಡುವ ಕಲೆಯಾಗಿದೆ. ತನ್ನ ಮಾತಿನ ಹಕ್ಕನ್ನು ಒಂದು ಸೃಜನಾತ್ಮಕ ಕಲೆಯಾಗಿ ಉಳಿಸಿಕೊಳ್ಳುವುದರೊಂದಿಗೆ ಕಣಿ ಕೇಳುವವರಿಗೂ ಮಾತಾಡುವ ಹಕ್ಕನ್ನು ದೊರಕಿಸಿ ಕೊಡುತ್ತಾಳೆ.

ಸಂಸ್ಕೃತಿಯಲ್ಲಿ ಕೆಳಜಾತಿಗಳನ್ನು ಯಾವತ್ತಿಗೂ ಅಕ್ಷರ ಲೋಕದಿಂದ ದೂರವೇ ಇಟ್ಟಿದ್ದು ಇತಿಹಾಸ. ಕೆಳಜಾತಿಯ ಪುರುಷರ ಸ್ಥಿತಿಯೇ ಹೀಗಿರುವಾಗ ಇನ್ನು ಕೆಳಜಾತಿಯ ಮಹಿಳೆಯರ ಸ್ಥಿತಿ ಇದಕ್ಕಿಂತ ಕಠೋರ. ಆದರೆ ಕೊರವಂಜಿಯಂಥ ಮಹಿಳೆಯರು ಔಪಚಾರಿಕ ಶಿಕ್ಷಣ ಪಡೆಯದಿದ್ದರೂ ತಮ್ಮ ಅಲೆಮಾರಿತನದಿಂದ ಅನೌಪಚಾರಿಕ ವಿದ್ಯೆಯನ್ನು ಗಳಿಸಿದ್ದಾರೆ. ಅಕ್ಷರ ವಿದ್ಯೆಗಿಂತ ಭಿನ್ನವಾದ ಆತ್ಮವಿದ್ಯೆ ಅವಳದು. ಯಾವ ಪಂಡಿತರಿಗೂ ಕಡಿಮೆಯಿಲ್ಲದಂತೆ ಶಕುನ ಹಾಗೂ ಶಾಸ್ತ್ರ ವಿದ್ಯೆಯನ್ನು ತಮ್ಮದನ್ನಾಗಿ ಮಾಡಿಕೊಂಡಿದ್ದಾರೆ. ವಿದ್ಯೆಗೆ ಅವಕಾಶವೇ ಇಲ್ಲದೆ ಸ್ಥಿತಿಯಲ್ಲಿ ಇಂಥ ಶಾಸ್ತ್ರಗಳನ್ನು ಇವರು ತಿಳಿದಿರುವುದು ಹೆಣ್ಣಿನ ಶಿಕ್ಷಣದ ಮತ್ತೊಂದು ಮಾದರಿಯನ್ನು ತೆರೆದು ತೋರುತ್ತದೆ. ವಿದ್ಯೆಯ ಅರ್ಥ ಹಾಗೂ ಅದರ ಬಗೆಗಿನ ಸಾಂಪ್ರದಾಯಿಕ ಬಂಧನವನ್ನು ಅನುಭವ ಮಾರ್ಗದ ಮೂಲಕ ದಾಟಿ ಹೊರಬಂದರು. ಯಾವು ಪಂಡಿತ ಪ್ರಧಾನವಾದ ವಿದ್ಯೆ ಎನಿಸಿದ್ದವೋ ಅವುಗಳನ್ನು ತನ್ನದಾಗಿಸಿಕೊಂಡಿದ್ದನ್ನು ಕೊರವಂಜಿಯ ಸಾಂಸ್ಕೃತಿಕ ಸಂಕಥನದಿಂದ ಕಟ್ಟಿಕೊಳ್ಳಲಾಗಿದೆ.

ಹೆಣ್ಣನ್ನು ವ್ಯಾಮೋಹಿ, ಆಸೆಬುರುಕಿ, ಮಾಯೆ ಎಂದೇ ಸಂಸ್ಕೃತಿಯ ಹೆಚ್ಚಿನ ಸಂಗತಿಗಳು ಬಿಂಬಿಸಿವೆ. ಆದರೆ ಇಂತಹ ಆರೋಪಿತ ಗುಣಗಳಾವವು ಹೆಣ್ಣಿನವಲ್ಲ. ಅದರಲ್ಲೂ ಕೊರವಂಜಿಯಂಥ ಕೆಳಸ್ತರದ ಮಹಿಳೆಯರಂತೂ ಈ ಗುಣದಿಂದ ಹೊರತಾದವರೇ. ಇವರಿಗೆ ಬಡತನವಿದೆ, ಆದರೇ ತಮ್ಮ ಶ್ರಮಕ್ಕೆ ಮೀರಿ ಪ್ರತಿಫಲ ಪಡೆಯುವ ಬುದ್ಧಿ ಇವರಿಗಿಲ್ಲ. ತಮ್ಮ ಕೆಲಸಕ್ಕೆ ತಕ್ಕಂತೆ ಆದಾಯ ಗಳಿಸುವ ಗುಣ ಇವರದು. ಅವರು ಯಾವತ್ತಿಗೂ ಆಸೆಬುರುಕತನದಿಂದ ವರ್ತಿಸುವುದಿಲ್ಲ. ಕಣಿ ಹೇಳುವ ಕೊರವಂಜಿ ಕೇಳುವದು 'ಉಣ್ಣಲಿಕ್ಕೆ ಅನ್ನ, ಉಡಲಿಕ್ಕೆ ಬಣ್ಣ' ಮಾತ್ರ ಎಂದು ಅದು ಶಕುನ ಕೇಳಿದವಳಿಂದ 'ಉಟ್ಟ ಸೀರೆಯ ತಾರೆ' ಎಂದು ಕೇಳಿ ಪಡೆಯುತ್ತಾಳೆ. ಹೀಗೆ ಅವಳು ಕೇಳಿ ಪಡೆಯುವುದು ಹೊಟ್ಟೆಯ ಹಸಿವು ಹಿಂಗಿಸುವ ಆಹಾರ ಮತ್ತು ದೇಹದ ಮರ್ಯಾದೆ ಮುಚ್ಚುಲು ತೊಟ್ಟು ಬಿಟ್ಟ ಹಳೆ ಬಟ್ಟೆಗಳನ್ನು ಮಾತ್ರ.

ಬ್ರಿಟಿಷ್ ಪ್ರಣೀತ ಅಧ್ಯಯನ ಮಾದರಿಗಳು ಕೆಳಜಾತಿಗಳನ್ನು ಯಾವತ್ತಿಗೂ ನಂಬಿಕೆಗೆ ಅನರ್ಹರು, ಕಳ್ಳರು, ದಂಗೆಕೋರರು ಎಂದೇ ಗುರುತಿಸುತ್ತವೆ. ಇವರು ಮೋಸ ಮಾಡುವವರು,

ಸುಳ್ಳು ಹೇಳುವವರೂ, ಭ್ರಷ್ಟರು ಎಂದು ಹೇಳಲಾಗುತ್ತದೆ. ಆದರೆ ಕೊರವಂಜಿಯಂಥವಳು ತನ್ನ ಪ್ರಾಮಾಣಿಕತೆಯ ಮೂಲಕ ಜನತೆಯ ಪ್ರೀತಿ, ವಿಶ್ವಾಸ, ನಂಬಿಕೆ ಗಳಿಸುವ ಪ್ರಯತ್ನ ಮಾಡುತ್ತಾಳೆ. ತಮ್ಮ ಜಾತಿಯ ಬಗೆಗಿನ ಕೀಳುಕಲ್ಪನೆಯನ್ನು ತಗೆದು ಹಾಕಲು ಪ್ರಯತ್ನಿಸುತ್ತಾಳೆ. 'ಅನ್ನ ಹುಟ್ಟದು ಎನಗೆ ಅನ್ಯಾಯದಿಂದ' ಎಂದು ತಾನೆಂದೂ ಅನ್ಯಾಯ ಮಾಡುವುದಿಲ್ಲ ಎಂದು ತಿಳಿಸುತ್ತಾಳೆ. ಜೊತೆಗೆ ಧಾನ್ಯದೇವತೆ, ಗುರು, ದೇವರು, ಮಗುವಿನ ಮೇಲೆ ಆಣೆ ಮಾಡುವ ಮೂಲಕ ತನ್ನ ಸತ್ಯ, ಪ್ರಾಮಾಣಿಕತೆಯನ್ನು ನಿರೂಪಿಸುತ್ತಾಳೆ.

ಸಮಾಜದ ಯಾವುದೇ ಪಾರಂಪರಿಕ ಸಂಸ್ಥೆಯಾಗಲಿ ಶೀಲವನ್ನು ಆಧಾರವಾಗಿಟ್ಟುಕೊಂಡೆ ಹೆಣ್ಣನ್ನು ನೋಡುತ್ತವೆ. ಅದರ ಆಧಾರದ ಮೇಲೆ ಅವಳ ಸ್ಥಾನವನ್ನು ಗುರುತಿಸುತ್ತವೆ. ಮನೆಬಿಟ್ಟು ಹೊರಬರುವ ಕೊರವಂಜಿಯಂತಹ ಹೆಣ್ಣನ್ನು ವ್ಯಕ್ತಿತ್ವ ಹೀನಳು ಎಂದು ಆರೋಪಿಸಿ ಅವಳ ನೈತಿಕ ಚಾರಿತ್ರ್ಯವನ್ನು ಗೌಣಗೊಳಿಸುವ ಪ್ರಯತ್ನವನ್ನೇ ಮಾಡುತ್ತದೆ. ಆದರೆ ಕೊರವಂಜಿ ಯಾವತ್ತು ತನ್ನ ಚಾರಿತ್ರ್ಯವನ್ನು ಗೌಣಗೊಳಿಸುವ ರೀತಿಯಲ್ಲಿ ನಡೆದುಕೊಳ್ಳುವುದಿಲ್ಲ.

ಕೊರವಂಜಿ ಕಣಿ ಹೇಳುವ ಕಲೆಯನ್ನು ಯಾವತ್ತೂ ಸ್ವಾರ್ಥ ಹಾಗೂ ಲಾಭಕೋರತನಕ್ಕೆ ಬಳಸಿದ್ದು ಕಾಣುವುದಿಲ್ಲ. ಇವತ್ತಿನ ಸಂದರ್ಭದಲ್ಲಿ ಶಕುನ, ಜ್ಯೋತಿಷ್ಯದಂತಹ ಶಾಸ್ತ್ರಗಳು ಕೇವಲ ಹಣಗಳಿಸುವ ದಂಧೆಗಳಾಗಿ ಪರಿವರ್ತಿತವಾಗಿವೆ. ಜ್ಯೋತಿಷ್ಯ ಶಕುನ ಹೇಳುವ ಪಂಡಿತರು ಸಮೂಹ ಮಾಧ್ಯಮಗಳನ್ನು ಆಕ್ರಮಿಸಿ ನಾನಾರೀತಿಯ ಶಾಸ್ತ್ರಗಳನ್ನು ಹೇಳುತ್ತಾ ಜನರನ್ನು ತಮ್ಮತ್ತ ಆಕರ್ಷಿಸುತ್ತಿದ್ದಾರೆ. ಸಮಸ್ಯೆಯಿಂದ ಸೋತು ನಂಬಿ ಇವರ ಹತ್ತಿರ ಬಂದವರಿಗೆ ಜ್ಯೋತಿಷಿಗಳು ಸಮಸ್ಯೆ ಪರಿಹಾರದ ನೆಪದಲ್ಲಿ ಅಪಾರ ಹಣ ಕಿತ್ತುತ್ತಾರೆ. ಈ ಮೂಲಕ ಸಂಕಷ್ಟದಲ್ಲಿ ಸಿಲುಕಿರುವವರನ್ನು ಸಮಾಧಾನಪಡಿಸುವ ಬದಲು ಅವರ ಸಮಸ್ಯೆಯನ್ನು ತಮ್ಮ ಲಾಭದ ಮೂಲವನ್ನಾಗಿ ಮಾಡಿಕೊಳ್ಳುತ್ತಾರೆ.

ಆದರೆ ಕೊರವಂಜಿ ಕಣಿ ಹೇಳುವುದು ಲಾಭಗಳಿಸುವ ಆಸೆಯಿಂದಲ್ಲ. ಬದಲಾಗಿ ನೊಂದವರ ನೋವನ್ನು ಶಮನಮಾಡುವುದಕ್ಕಾಗಿ. ಕಣಿ ಹೇಳುವದು ಅವರ ಉದ್ಯೋಗವಾದರೂ, ಆರ್ಥಿಕ ಅಭದ್ರತೆಯಿದ್ದರೂ ಅದರಿಂದ ಲಾಭ ಮಾಡಿಕೊಳ್ಳಬೇಕೆಂಬ ಭಾವ ಅವಳಲಿಲ್ಲ. ನೊಂದ ಮನಸ್ಸಿಗೆ ಕೊರವಂಜಿ ಸಖೀಗುಣದ ಮೂಲಕ ಸಾಂತ್ವನ ಹೇಳುತ್ತಾಳೆ. ಸೋತು ಕಂಗಾಲಾದವರಿಗೆ ಭರವಸೆಯ ಬೆಳಕು ಬಿತ್ತಿ ಬದುಕಿನ ದಾರಿಯನ್ನು ತೋರಿಸುತ್ತಾಳೆ. ಅಸ್ಥಿರ, ಅಸಂಭವ ಎಂದು ಭಾವಿಸಿದ ಸಮಸ್ಯೆಗಳಿಗೆ ಈಡೇರುವ ಭರವಸೆ ಕೊಡುತ್ತಾಳೆ. ಮನಸ್ಸಿನ ತಾಕಲಾಟಗಳಿಗೆ ತಾರ್ಕಿಕ ಅಂತ್ಯ ನೀಡುತ್ತಾಳೆ. ಅಸಾಧ್ಯವೆಂದು ಭಾವಿಸಿ ನೊಂದವರಿಗೆ, ಸೋತವರಿಗೆ ಭಯಹುಟ್ಟಿಸಿ ಹೆಚ್ಚು ಹಣ ಕೀಳುವ ಮನೋಭಾವ ಇವಳದಲ್ಲ. ಅಲ್ಪತೃಪ್ತಳಾದ ಇವಳು ನಿಸ್ವಾರ್ಥ ಮನೋಭಾವದವಳು. ಈ ಅರ್ಥದಲ್ಲಿ ಇವಳೊಬ್ಬ ಮನಃಶಾಸ್ತ್ರಜ್ಞೆ ಎಂದರೂ ಉತ್ಪ್ರೇಕ್ಷೆಯಲ್ಲ.

ಗಡಸುತನ ಕಠಿಣ ನಿರ್ಧಾರ ಪುರುಷರ ಮನೋಭಾವವಾದರೆ ನಾಚಿಕೆ, ಸಂಕೋಚಗಳು ಹೆಣ್ಣಿನ ಮನೋಧರ್ಮಗಳು. ತನ್ನ ಸ್ವಭಾವದಿಂದಾಗಿ ಪುರುಷ ಯಾವುದೇ ಕಠಿಣ ನಿರ್ಧಾರ

ತೆಗೆದುಕೊಳ್ಳಲು ಹಿಂಜರಿಯುವುದಿಲ್ಲ. ಆದರೆ ನಾಚಿಕೆ, ಸಂಕೋಚ ಸ್ವಭಾವದ ಮಹಿಳೆ ಯಾವತ್ತು ಭಂಡತನ ತೋರುವುದಿಲ್ಲ. ಪುರುಷ ತನ್ನ ಭಂಡ ಧೈರ್ಯದಿಂದ ಭ್ರಷ್ಟಾಚಾರಕ್ಕೆ ಇಳಿಯಲು ಹಿಂದೇಟು ಹಾಕುವುದಿಲ್ಲ. ಇದರಿಂದ ಸಮಾಜದಲ್ಲಿ ಭ್ರಷ್ಟಾಚಾರ ಹೆಚ್ಚುತ್ತದೆ. ಆದರೆ ನಾಚಿಕೆ, ಸಂಕೋಚ ಸ್ವಭಾವದ ಹೆಣ್ಣು ಭ್ರಷ್ಟಾಚಾರದಂತಹ ಹೀನಕೃತ್ಯಗಳಿಗೆ ಇಳಿಯುವುದಿಲ್ಲ. ತಪ್ಪಾದರೆ ಎಲ್ಲಿ ಸಾಮಾಜಿಕ ಅಪವಾದ ಹೊರಬೇಕಾಗುತ್ತದೋ ಎಂಬ ಭಯದಿಂದ ಇಂಥವುಗಳಿಂದ ದೂರವೇ ಉಳಿಯುತ್ತಾಳೆ. ಹೀಗೆ ಶುದ್ಧ ಹಸ್ತಳಾದ ಕೊರವಿಯಂಥ ಮಾನವೀಯ ಮೌಲ್ಯಗಳು ಇಂದಿನ ಪ್ರಜಾಪ್ರಭುತ್ವದ ತಳಹದಿಯಾದರೆ ಹೊಸ ಸಮಾಜದ ಕನಸು ಕಾಣಬಹುದಾಗಿದೆ.

ಕೊರವಂಜಿಯದು ನಿಸ್ಪಕ್ಷಪಾತ ಮನೋಭಾವ. ತನ್ನ ಜಾತಿಯನ್ನು ಮೀರಿ ವಿಶ್ವಕುಟುಂಬಿ ಮನೋಭಾವವನ್ನು ಬೆಳಸಿಕೊಂಡವಳು.

ಇವತ್ತಿನ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಾಮಾಣಿಕತೆ, ನಂಬಿಕೆ, ಶುದ್ಧಹಸ್ತ, ಚಾರಿತ್ರ್ಯಗಳು ರಾಜಕಾರಣದಿಂದ ದೂರವೇ ಆಗಿವೆ. ಎಲ್ಲಿ ನೋಡಿದಲ್ಲಿ ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ಸಂಪತ್ತಿನ ಕ್ರೋಢೀಕರಣ, ಮೋಸ ವಂಚನೆಗಳೇ ಆಕ್ರಮಿಸಿಕೊಂಡಿವೆ. ಇದರಿಂದ ಸಮಾನತೆಯ ಕನಸು ಹೊತ್ತು ಜಾರಿಗೆ ಬಂದ ಪ್ರಜಾಪ್ರಭುತ್ವ ವ್ಯವಸ್ಥೆ ತನ್ನ ಮೂಲ ಆಶಯವನ್ನು ಕಳೆದುಕೊಂಡು ವಿನಾಶದ ಹಾದಿ ಹಿಡಿದಿದೆ. ಹೀಗೆಯೇ ಮುಂದುವರಿದರೆ ಪ್ರಜಾಪ್ರಭುತ್ವ ವ್ಯವಸ್ಥೆ ತನ್ನ ಅರ್ಥವನ್ನು ಕಳೆದುಕೊಂಡು ನಿರಂಕುಶ ಪ್ರಭುತ್ವ ಜಾರಿಗೆ ಬರುವುದರಲ್ಲಿ ಸಂದೇಹವೇ ಇಲ್ಲ. ಈ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಸುಧಾರಿಸಲು ಬೇಕಾಗಿರುವ ಮೌಲ್ಯಗಳು ಕೊರವಂಜಿಯ ಬದುಕಿನಲ್ಲಿವೆ. ಪ್ರಸ್ತುತ ಪ್ರಜಾಪ್ರಭುತ್ವದ ಸಂದರ್ಭದಲ್ಲಿ ಕೊರವಂಜಿಯ ನೈತಿಕ ಮೌಲ್ಯಗಳನ್ನು ಬದುಕಿನ ಮೌಲ್ಯಗಳಾಗಿ ಪ್ರತಿನಿಧಿಸಬೇಕಾಗಿದೆ. ಇಂತಹ ಮೌಲ್ಯಗಳನ್ನು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ತಂದಾಗ ಪ್ರಜಾಪ್ರಭುತ್ವ ವ್ಯವಸ್ಥೆ ಗಟ್ಟಿಯಾಗುತ್ತದೆ.

ನಂಬಿಕೆ, ಪ್ರಾಮಾಣಿಕತೆ, ನಿಷ್ಪಕ್ಷಪಾತತನ, ಸಂಪತ್ತಿನ ಹಂಚಿಕೆ, ಶುದ್ಧಹಸ್ತ, ಪರಿಶುದ್ಧ ಚಾರಿತ್ರ್ಯದಂತಹ ಮೌಲ್ಯಗಳು ಪ್ರಜಾಪ್ರಭುತ್ವ ವ್ಯವಸ್ಥೆಗೆ ಇವತ್ತು ತುಂಬಾ ಅವಶ್ಯವಾಗಿವೆ. ಅದನ್ನು ಅಳವಡಿಸಿಕೊಂಡಾಗ ಭ್ರಷ್ಟಾಚಾರ, ಸ್ವಾರ್ಥತನ, ಉಪಭೋಗ ಲಾಲಸೆ ತುಂಬಿರುವ ಪ್ರಜಾಪ್ರಭುತ್ವದಲ್ಲಿ ಬೇರೆ ರೀತಿಯ ಸಂಸ್ಕೃತಿಯ ಚಿತ್ರಣವನ್ನು ಕೊಡಲು ಸಾಧ್ಯವಾಗುತ್ತದೆ. ಕೊರವಿ ಸಂಕಥನ ಏಳುಬೀಳುಗಳ ನಡುವೆಯೂ ಅಂಥ ಸಾಮಾಜಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳನ್ನು ಗರ್ಭೀಕರಿಸಿಕೊಂಡಿದ್ದನ್ನು ಈ ಒಟ್ಟು ಅಧ್ಯಯನದಲ್ಲಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ.

* * *

# ಪರಾಮರ್ಶನ ಗ್ರಂಥಗಳು

೧. ಅರ್ಚಕ ಬಿ. ರಂಗಸ್ವಾಮಿ(ಸಂ), ಹುಟ್ಟಿದಹಳ್ಳಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೨೦೦೧

೨. ಇಂದಿರಾ ಜಯಪ್ರಕಾಶ, ಮನೋವಿಜ್ಞಾನ(೩ನೇ ಮುದ್ರಣ), ಸ್ವಪ್ನಾ ಬುಕ್‌ಹೌಸ್, ೨೦೦೭

೩. ಇಂದುಬಾಯಿ ಟಿ.ಕೆ., ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೮೭

೪. ಇಂದುಬಾಯಿ ಟಿ.ಕೆ., ಸಮಗ್ರ ದಾಸ ಸಾಹಿತ್ಯ ಸಂಪುಟ–೮, ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೩

೫. ಉಮಾಪತಿಶಾಸ್ತ್ರಿ. ಗೌ.ಮ.(ಸಂ), ಯಕ್ಷಗಾನ ಹಸ್ತಪ್ರತಿ ವಿವರಣಾಸೂಚಿ, ಸಂ–೧, ಶ್ರೀ ಮಂಜುನಾಥೇಶ್ವರ ಸಂಸ್ಕೃತಿ ಸಂಶೋಧನಾ ಪ್ರತಿಷ್ಠಾನ, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಪುಸ್ತಕಾ ಪ್ರಕಾಶನ ಮಾಲೆ, ಉಜಿರೆ, ೧೯೯೩

೬. ಉಷಾ ಎಂ. ಮಹಿಳೆ ಮತ್ತು ಜಾತಿ ಒಂದು ಸೈದ್ಧಾಂತಿಕ ಗ್ರಹಿಕೆ, ಪ್ರಸಾರಾಂಗ, ಕ.ವಿ.ವಿ. ಹಂಪಿ, ೨೦೦೫

೭. ಕಮಲಾ ಹಂಪನಾ, ಬೊಗಸೆ ಮಹಿಳೆ ಸುತ್ತಮುತ್ತ, ಸಿ.ವಿ.ಜಿ. ಪಬ್ಲಿಕೇಷನ್ಸ್ ಬೆಂಗಳೂರು, ೨೦೦೩

೮. ಕರಾಕೃ, ಜನಪ್ರಿಯ ಜಾನಪದ ಗೀತೆಗಳು(೨ನೇ ಮುದ್ರಣ), ಜಾನಪದ ಅಕಾಡೆಮಿ, ಬೆಂಗಳೂರು, ೧೯೮೩

೯. ಕರೀಗೌಡ ಬೀಚನಹಳ್ಳಿ(ಸಂ), ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ–೨, ಕರಕುಶಲ ಕಲೆಗಳು, ಪ್ರಸಾರಾಂಗ ಕ.ವಿ.ವಿ ಹಂಪಿ, ೨೦೦೦

೧೦. ಕರೀಗೌಡ ಬೀಚನಹಳ್ಳಿ, ಸಾಹಿತ್ಯ ಸಂಸ್ಕೃತಿಪಥ–೫೦, ಕನ್ನಡ ವಿ.ವಿ, ಹಂಪಿ, ೨೦೦೭
೧೧. ಕಲಬುರ್ಗಿ ಎಂ.ಎಂ (ಸಂ), ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂ.೯, ಪ್ರಸಾರಾಂಗ, ಕರ್ನಾಟಕ ವಿ.ವಿ, ಧಾರವಾಡ, ೧೯೯೨
೧೨. ಕಲಬುರ್ಗಿ ಎಂ.ಎಂ. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂಪುಟ–೧, ಕರ್ನಾಟಕ ವಿ.ವಿ, ಧಾರವಾಡ, ೧೯೯೨
೧೩. ಕಲಬುರ್ಗಿ ಎಂ.ಎಂ., ಉತ್ತರ ಕರ್ನಾಟಕದ ಜಾನಪದ ಪದ್ಯಸಾಹಿತ್ಯ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೮
೧೪. ಕಾಪಸೆ ರೇವಪ್ಪ, ಮಲ್ಲಿಗೆ ದಂಡೆ, ಸಮಾಜ ಪುಸ್ತಕಾಲಯ(ಚತುರ್ಥ ಮುದ್ರಣ), ಧಾರವಾಡ, ೧೯೯೦
೧೫. ಕಾಳೇಗೌಡ ನಾಗವಾರ, ಸಾಲುಸಂಪಿಗೆಯ ನೆರಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦
೧೬. ಕಿಟೆಲ್ ಎಫ್., ಕನ್ನಡ ಇಂಗ್ಲೀಷ್ ಡಿಕ್ಷನರಿ, ಭಾಷೆಲ್ ಮಿಷನ್ ಬುಕ್ ಆ್ಯಂಡ್ ಟ್ರ್ಯಾಕ್ ಡಿಪೊಸ್ಟರಿ, ನ್ಯೂಡೆಲ್ಲಿ, ೨೦೦೮
೧೭. ಕೃಷ್ಣ ಕಟ್ಟಿ, ಶ್ರೀಕೃಷ್ಣಪಾರಿಜಾತ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೭
೧೮. ಕೃಷ್ಣ ಕೋಲ್ಹಾರ ಕುಲಕರ್ಣಿ, ಸಮಗ್ರ ದಾಸ ಸಾಹಿತ್ಯ ಸಂಪುಟ–೬, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೩
೧೯. ಕೃಷ್ಣಮೂರ್ತಿ ಹನೂರ, ಜನಪದ ಮತ್ತು ಬುಡಕಟ್ಟು ಗೀತೆಗಳು, ಸಾಹಿತ್ಯ ಅಕಾಡೆಮಿ, ೧೯೯೮
೨೦. ಕೃಷ್ಣಸ್ವಾಮಿ ಕೆ.ಆರ್, ಹಾಡು ಚೆಲ್ಲ್ಯಾವೆ ನಾಡಿಗೆ, ಜಾನಪದ ಅಕಾಡೆಮಿ, ಬೆಂಗಳೂರು, ೧೯೯೫
೨೧. ಗದ್ದಿಗಿಮಠ ಬಿ.ಎಸ್, ಗದ್ದಿಗಿಮಠ ಬರಹಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೮
೨೨. ಗಾಯತ್ರಿ ನಾವಡ, ಮಹಿಳಾ ಸಂಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೩
೨೩. ಗಾಯತ್ರಿ ನಾವಡ, ವಿರಚನೆ, ಎನ್.ಆರ್.ಎ.ಎಂ.ಎಚ್. ಪ್ರಕಾಶನ, ದಕ್ಷಿಣ ಕನ್ನಡ, ೧೯೯೭
೨೪. ಗಂಗಾಧರ ದೈವಜ್ಞ, ಸಣ್ಣಾಟಗಳ ಹುಟ್ಟು ಬೆಳವಣಿಗೆ, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೨೦೦೬
೨೫. ಚಂದ್ರಶೇಖರ ಕಂಬಾರ, ಕನ್ನಡ ಜನಪದ ವಿಶ್ವಕೋಶ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫

೨೬. ಚನ್ನಬಸಪ್ಪ ಗೊ.ರು, ಕರ್ನಾಟಕ ಜನಪದ ಕಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೧

೨೭. ಚೆಲುವರಾಜು(ಸಂ)., ಜುಂಜಪ್ಪ, ಬುಡಕಟ್ಟು ಮಹಾಕಾವ್ಯ ಮಾಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೨೮. ದೇವುಡು ನರಸಿಂಹಶಾಸ್ತ್ರಿ, ಕರ್ನಾಟಕ ಸಂಸ್ಕೃತಿ, ಶಾರದಾ ಪ್ರಕಾಶನ, ೧೯೮೮

೨೯. ನಾಗರತ್ನ ಟಿ.ಎಸ್., ಸಮಗ್ರ ದಾಸ ಸಾಹಿತ್ಯ ಸಂಪುಟ-೨, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೩

೩೦. ನಾಗರಾಜ ಡಿ.ಆರ್., ಅಮೃತ ಮತ್ತು ಗರುಡ, ಪುಸ್ತಕ ಚಂದನ, ೧೯೮೩

೩೧. ನಾಗರಾಜಯ್ಯ ಹಂ.ಪ., ಚಂದ್ರಸಾಗರವರ್ಣಿಯ ಕೃತಿಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೧

೩೨. ನಾಗರಾಜಯ್ಯ ಹಂ.ಪ., ಕರ್ಣಪಾರ್ಯ ವಿರಚಿತ ನೇಮಿನಾಥ ಪುರಾಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೧

೩೩. ನಾಗೇಗೌಡ ಎಚ್.ಎಲ್., ಸೋಬಾನೆ ಚಿಕ್ಕಮ್ಮನ ಪದಗಳು(೨ನೇ ಮುದ್ರಣ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೭

೩೪. ನಾಗೇಗೌಡ ಎಚ್.ಎಲ್., ಕನ್ನಡ ಜಾನಪದ ಕೋಶ, ಕರ್ನಾಟಕ ಜಾನಪದ ಪರಿಷತ್ತು, ೧೯೯೮

೩೫. ನಾಯಕ ಎನ್.ಆರ್., ಕಾರವಾರ ಜಿಲ್ಲೆಯ ಜನಪದ ಗೀತೆಗಳು, ಪ್ರಸಾರಾಂಗ, ಕ.ವಿ.ವಿ, ಧಾರವಾಡ, ೧೯೮೩

೩೬. ನಾಯಕ ಹಾ.ಮಾ, ಕನ್ನಡ ವಿಶ್ವಕೋಶ(ಸಂಪುಟ-೫), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ೧೯೭೨

೩೭. ನಾವಲಗಿ ಸಿ.ಕೆ., ವಚನಸಾಹಿತ್ಯದಲ್ಲಿ ಜನಪದ ಅಂಶಗಳು ಒಂದು ಅಧ್ಯಯನ, ಜ್ಞಾನೋದಯ ಪ್ರಕಾಶನ, ಬೆಂಗಳೂರು, ೨೦೦೦

೩೮. ನೀಲಗಾರ ಎ.ಜಿ, ಜಾನಪದ ಝೇಂಕಾರ, ಜಾಗೃತ ಭಾರತ, ಧಾರವಾಡ, ೧೯೭೯

೩೯. ನೀಲಗಿರಿ ತಳವಾರ, ಜಾನಪದ ೧೯೯೪, ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ೧೯೯೬

೪೦. ಪರಮಶಿವಯ್ಯ ಜಿ.ಶಂ., ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ಪ್ರಸಾರಾಂಗ, ಮೈಸೂರು ವಿ.ವಿ, ೧೯೭೯

೪೧. ಪರಮಶಿವಯ್ಯ ಜಿ.ಶಂ., ಕರುಣೆ ಕಣ್ಣತೆರೆಯೆ, ಸಾಹಿತ್ಯ ಸದನ, ಮೈಸೂರು, ೧೯೭೪

೪೨. ಪ್ರಧಾನ ಗುರುದತ್ತ, ಶ್ರೀಕೃಷ್ಣ ಕಥೆಯ ಉಗಮ ಮತ್ತು ವಿಕಾಸ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೯೦

೪೩. ಪ್ರಭಾಕರ ಎ.ಎಸ್., ಆದಿವಾಸಿ ಆಖ್ಯಾನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೯

೪೪. ಪ್ರಶಾಂತ ಹೆಚ್.ಡಿ., ಕರ್ನಾಟಕ ರಾಜ್ಯಕೋಶ–೪(ಜನಸಮುದಾಯ ಸಂಪುಟ), ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೨೦೦೦

೪೫. ಬರಗೂರ ರಾಮಚಂದ್ರಪ್ಪ, ಕೊರವರ ಸಂಸ್ಕೃತಿ (ಉಪಸಂಸ್ಕೃತಿ ಅಧ್ಯಯನ ಮಾಲೆ), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೪೬. ಬರಗೂರು ರಾಮಚಂದ್ರಪ್ಪ(ಸಂ), ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೩

೪೭. ಬಸಲಿಂಗಯ್ಯ ಹಿರೇಮಠ, ಪಾರಿಜಾತ ಪರಾಮರ್ಶೆ, ಭೂಷಣ ಪ್ರಕಾಶನ, ಕಿತ್ತೂರು, ೧೯೯೭

೪೮. ಬಸವರಾಜ ಪೋಲೀಸ್ ಪಾಟೀಲ, ಜಾನಪದ ಸಿರಿ, ವಿದ್ಯಾಸಾಗರ ಪ್ರಕಾಶನ, ಗುಲ್ಬರ್ಗಾ, ೧೯೯೦

೪೯. ಬಸವರಾಜ ಮಲಶೆಟ್ಟಿ, ಉತ್ತರ ಕರ್ನಾಟಕದ ಬಯಲಾಟಗಳು(೨ನೇ ಆವೃತ್ತಿ), ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರದೊಡ್ಡಿ, ೨೦೦೮

೫೦. ಬಸವರಾಜ ಸಬರದ, ಸಮಗ್ರ ದಾಸ ಸಾಹಿತ್ಯ ಸಂಪುಟ–೨೯, ಭಾಗ–೧, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೩

೫೧. ಬಿರಾದಾರ ಎಂ.ಜಿ.(ಸಂ), ರತ್ನಾಕರವರ್ಣಿ ಸಂಪುಟ, ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೦೬

೫೨. ಬ್ರಹ್ಮಪ್ಪ ಜಿ., ರತ್ನಾಕರ ವೈಭವ, ರತ್ನತ್ರಯ ಪ್ರಕಾಶನ, ಮೈಸೂರು, ೧೯೯೭

೫೩. ಬ್ರಹ್ಮಪ್ಪ ಜಿ., ಜೈನ ಪುರಾಣ ಮತ್ತು ವೈದಿಕ ಪುರಾಣಗಳ ತೌಲನಿಕ ಅಧ್ಯಯನ ಭಾಗ–೧, ಮೈಸೂರು ವಿಶ್ವವಿದ್ಯಾನಿಲಯ, ೨೦೦೪

೫೪. ಬ್ರಹ್ಮಪ್ಪ ಜಿ., ವಿಶ್ವಕವಿ ರತ್ನಾಕರನ ಭರತೇಶ ವೈಭವ, ಅತ್ತಿಮಬ್ಬೆ ಪ್ರಕಾಶನ, ಬೆಂಗಳೂರು, ೧೯೬೭

೫೫. ಬೋರಲಿಂಗಯ್ಯ ಹಿ.ಚಿ., ಕರ್ನಾಟಕದ ಜನಪದ ಕಲೆಗಳ ಕೋಶ, ಪ್ರಸಾರಾಂಗ, ಕ.ವಿ.ವಿ ಹಂಪಿ, ೧೯೯೬

೫೬. ಬೋರಲಿಂಗಯ್ಯ ಹಿ.ಚಿ., ಕಾಡು ಕಾಂಕ್ರೀಟ ಮತ್ತು ಜಾನಪದ, ಅಕ್ಷರ ಪ್ರಕಾಶನ ಹೆಗ್ಗೋಡು, ೧೯೯೫

೫೭. ಭಟ್ ಜಿ.ಎಸ್., ಜಾನಪದ ೧೯೯೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೩

೫೮. ಭಾಸ್ಕರ ಟಿ.ಎಂ., ಕನ್ನಡ ಜಾನಪದ ಮಹಾಕಾವ್ಯಗಳು ಮತ್ತು ಪ್ರತಿಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ೨೦೦೮

೫೯. ಮರುಳ ಸಿದ್ದಪ್ಪ, ಲಾವಣಿಗಳು, ಪ್ರಸಾರಾಂಗ, ಬೆಂಗಳೂರು ವಿ.ವಿ. ಬೆಂಗಳೂರು, ೧೯೭೨

೬೦. ಮಲ್ಲಾಪುರ ಬಿ.ವ್ಹಿ., ಜನಪದ ಸಾಹಿತ್ಯ ದರ್ಶನ-೬, ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೦

೬೧. ಮುಳಗುಂದ ಜಿ.ವಿ., ಮಾತೋಶ್ರೀ, ಮಾತೋಶ್ರೀ ಪ್ರಕಾಶನ, ಮುದ್ದೇಬಿಹಾಳ, ೧೯೮೬

೬೨. ಮುದೇನೂರ ಸಂಗಣ್ಣ, ಚಿತ್ರಪಟ ರಾಮಾಯಣ, ಪ್ರಾದೇಶಿಕ ಜಾನಪದ ಕಲೆಗಳ ಅಧ್ಯಯನ ಕೇಂದ್ರ, ಉಡುಪಿ, ೧೯೮೮

೬೩. ಮೊಗಳ್ಳಿ ಗಣೇಶ, ದಲಿತ ಕಥನ, ಪ್ರಸಾರಾಂಗ, ಕ.ವಿ.ವಿ ಹಂಪಿ, ೨೦೦೬

೬೪. ಮೊಗಳ್ಳಿ ಗಣೇಶ, ಆದಿಮ, ಸಾರಂಗ ಪ್ರಕಾಶನ, ತಿಪಟೂರು, ೨೦೦೫

೬೫. ರಮೇಶ ಸ.ಚಿ.(ಸಂ), ಅಲೆಮಾರಿಗಳ ಸ್ಥಿತಿಗತಿ, ಕ.ವಿ.ವಿ, ಹಂಪಿ, ೨೦೦೫

೬೬. ರಮೇಶ ಸ.ಚಿ.(ಸಂ), ಸ್ಯಾಸಿ ಚಿನ್ನಮ್ಮನ ಕಾವ್ಯ, ಕ.ವಿ.ವಿ, ಹಂಪಿ, ೧೯೯೯

೬೭. ರಮೇಶ ಸ.ಚಿ.(ಸಂ), ದಕ್ಷಿಣ ಭಾರತೀಯ ಜಾನಪದ ಕೋಶ, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೨೦೧೧

೬೮. ರವೀಂದ್ರನಾಥ ಕೆ., ಬಸವಯುಗದ ವಚನೇತರ ಸಾಹಿತ್ಯ, ಪ್ರಸಾರಾಂಗ, ಕ.ವಿ.ವಿ ಹಂಪಿ, ೨೦೦೦

೬೯. ರಹಮತ್ ತರೀಕೆರೆ, ಅಕ್ಕಮಹಾದೇವಿ ವಚನಗಳು ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೦೫

೭೦. ರಾಜಪ್ಪ ಟಿ.ಎಸ್., ಬಳ್ಳಾರಿ ಜಿಲ್ಲೆಯ ಜನಪದ ಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ, ೧೯೮೯

೭೧. ರಾಮಚಂದ್ರಪ್ಪ ಸಾ.ಕೃ., ದಾಸಸಾಹಿತ್ಯ ಮತ್ತು ಸಂಸ್ಕೃತಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

೭೨. ರಾಮಯ್ಯ ಬಿ.ಪಿ., ದಕ್ಷಿಣ ಕರ್ನಾಟಕದ ಕೊರವರು: ಒಂದು ಸಾಂಸ್ಕೃತಿಕ ಅಧ್ಯಯನ, ಮಾನಸ ಪ್ರಕಾಶನ, ಕುಮಟಾ, ೨೦೦೨

೭೩. ರಾಮಯ್ಯ ಬಿ.ಪಿ., ಕೊರವರ ಗಾದೆ ಕಥೆಗಳು, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು, ೨೦೦೪

೭೪. ಲಕ್ಕಪ್ಪಗೌಡ ಎಚ್.ಜಿ., ಸುವರ್ಣ ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ೧೯೯೮

೭೫. ಲಿಂಗಯ್ಯ ಪಿ., ಕರ್ನಾಟಕ ಜಾನಪದ ಕಾವ್ಯಗಳು, ದಿನಕರ ಪ್ರಕಾಶನ, ೧೯೭೯

೭೬. ಲೀಲಾವತಿ ಎಸ್. ರಾವ್, ಸಮಗ್ರ ದಾಸ ಸಾಹಿತ್ಯ ಸಂಪುಟ-೧೮, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೩

೭೭. ವಂಶಿ, ಶ್ರೀ ಮಹಾಭಾಗವತ, ಪ್ರಕಾಶಕರು ಸಾಹಿತ್ಯ ಸದನ, ಬೆಂಗಳೂರು, ೨೦೦೩

೭೮. ವೆಂಕಟಸುಬ್ಬಯ್ಯ ಜಿ., ಇಗೋ ಕನ್ನಡ (ಸಂ-೧, ೨ನೇ ಮುದ್ರಣ), ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೬

೭೯. ವೆಂಕಟಸುಬ್ಬಯ್ಯ ಜಿ., ಇಗೋ ಕನ್ನಡ, (ಸಂ-೨, ೨ನೇ ಮುದ್ರಣ), ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೯

೮೦. ಶಾಲಿನಿ ರಘುನಾಥ, ಸಮನ್ವಿತ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೪

೮೧. ಶಾಂತಿನಾಥ ದಿಬ್ಬದ (ಸಂ), ವೈಚಾರಿಕ ಲೇಖನಗಳು, ಪ್ರಸಾರಾಂಗ, ಗುಲಬರ್ಗಾ ವಿ.ವಿ, ಗುಲ್ಬರ್ಗಾ, ೨೦೦೫

೮೨. ಶಿವರುದ್ರಪ್ಪ ಜಿ.ಎಸ್., ಸಮಗ್ರ ಕನ್ನಡ ಸಾಹಿತ್ಯ ಚರಿತ್ರ ಸಂಪುಟ-೬, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೧

೮೩. ಶಿವಣ್ಣ ಎಸ್.(ಸಂ), ಶೃಂಗಾರಮ್ಮ ವಿರಚಿತ ಪದ್ಮಾವತಿ ಕಲ್ಯಾಣ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೯೫

೮೪. ಶಿವಾನಂದ ಗುಬ್ಬಣ್ಣವರ, ರಾಮಾಂಜನೇಯ ಕಾಳಗ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭

೮೫. ಶಿವಾನಂದ ವಿರಕ್ತಮಠ, ಮಹಿಳಾ ಅಧ್ಯಯನ ಸಂಪುಟ-೬, ಸಂಯುಕ್ತ ಸಂಚಿಕೆ ೧-೨(ಜನವರಿ-ಡಿಸೆಂಬರ್), ಪ್ರಸಾರಾಂಗ, ಕ.ವಿ.ವಿ ಹಂಪಿ, ೨೦೦೪

೮೬. ಶಿವಾನಂದ ಎಸ್. ವಿರಕ್ತಮಠ, ಕೊಡೆಕಲ್ಲ ವಚನಕಾವ್ಯ ಸಂಪುಟ-೩, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೨೦೦೦

೮೭. ಶ್ಯಾಮರಾಯ ಟಿ.ಎನ್., ಭರತೇಶ ವೈಭವ ಸಂಗ್ರಹ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೭೨

೮೮. ಶೈಲಜಾ ಹಿರೇಮಠ, ಮಹಿಳಾ ಅಧ್ಯಯನ ಸಂಪುಟ-೯ ಸಂಚಿಕೆ-೨(ಜುಲೈ-ಡಿಸೆಂಬರ್), ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೨೦೦೭

೮೯. ಶೈಲಜಾ ಹಿರೇಮಠ (ಸಂ), ಮಹಿಳಾ ಅಧ್ಯಯನ ಸಂಪುಟ-೯, ಸಂಚಿಕೆ-೨ (ಜುಲೈ- ಡಿಸೆಂಬರ್), ಪ್ರಸಾರಾಂಗ, ಕ.ವಿ.ವಿ ಹಂಪಿ, ೨೦೦೯

೯೦. ಶೈಲಜಾ ಹಿರೇಮಠ, ಸ್ತ್ರೀಕಥನ, ಭುವನ ಪ್ರಕಾಶನ, ಹೊಸಪೇಟೆ, ೨೦೦೩
೯೧. ಶೈಲಜಾ ಹಿರೇಮಠ, ಪಾತರದವರು, ಕ.ವಿ.ವಿ, ಹಂಪಿ, ೧೯೯೯
೯೨. ಶಂಕರ ನಾರಾಯಣ ತೀ.ನಂ., ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು, ಮೈಸೂರು ವಿ.ವಿ, ೧೯೪೨
೯೩. ಶ್ರೀನಿವಾಸ ಉಡುಪ, ಜನಪ್ರಿಯ ಭಾಗವತ(ದ್ವಿತೀಯ ಮುದ್ರಣ), ಗೀತಾ ಬುಕ್‌ಹೌಸ್, ಮೈಸೂರು, ೧೯೯೦
೯೪. ಶ್ರೀಮತಿ ಎಚ್.ಎಸ್., ಮಹಿಳೆ ದುಡಿಮೆ ಮತ್ತು ಬಿಡುವು, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿ.ವಿ, ಹಂಪಿ, ೨೦೦೭
೯೫. ಶ್ರೀಮತಿ ಎಚ್.ಎಸ್.(ಸಂ), ಹೆಣ್ಣು ಮತ್ತು ಭಾಷೆ, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೨೦೦೭
೯೬. ಶ್ರೀನಿವಾಸಮೂರ್ತಿ ಹೆಚ್.ಎಸ್., ಸಮಗ್ರ ದಾಸಸಾಹಿತ್ಯ ಸಂಪುಟ-೧೫, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೩
೯೭. ಶ್ರೀರಾಮ ಇಟ್ಟಣ್ಣವರ, ಶ್ರೀಕೃಷ್ಣ ಪಾರಿಜಾತ ಒಂದು ಅಧ್ಯಯನ, ವಿನಿ ಪ್ರಕಾಶನ, ಬೀಳಗಿ, ೧೯೯೧
೯೮. ಸಣ್ಣರಾಮ, ಸಮನ್ವಯ, ಕನ್ನಡ ಭಾರತಿ ಹಳೆ ವಿದ್ಯಾರ್ಥಿಗಳ ಸಂಘ ಮತ್ತು ಅಭಿಮಾನಿಗಳ ಬಳಗ, ೨೦೦೭
೯೯. ಸಾರಾ ಅಬೂಬಕರ, ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೨೦೦೭
೧೦೦. ಸುಜಾತ ಅಕ್ಕಿ, ಸಾರಥಿ, ಕುವೆಂಪು ಗ್ರಂಥಾಲಯ ಬಳಗ, ಹಗರಿಬೊಮ್ಮನಹಳ್ಳಿ, ೨೦೦೬
೧೦೧. ಸುಮಿತ್ರ ಎಂ., ಕಣಿಯರ ಸಂಸ್ಕೃತಿ, ಮೈತ್ರೀಯ ಪ್ರಕಾಶನ, ಬೆಂಗಳೂರು, ೨೦೦೨
೧೦೨. ಸುಂಕಾಪುರ ಎಂ.ಎಸ್.(ಸಂ), ಜನಪದ ಸಾಹಿತ್ಯ ದರ್ಶನ, ಸಂಪುಟ-೩, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿ.ವಿ, ಧಾರವಾಡ, ೧೯೭೬
೧೦೩. ಹಲಸಂಗಿ ಗೆಳೆಯರು, ಹಲಸಂಗಿ ಹಾಡು, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೨೦೦೦
೧೦೪. ಹಳ್ಳಿಕೇರಿ ಎಫ್.ಟಿ., ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿಸೂಚಿ ಸಂಪುಟ-೧, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೨೦೦೦
೧೦೫. ಹಳ್ಳಿಕೇರಿ ಎಫ್.ಟಿ., ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿಸೂಚಿ ಸಂಪುಟ-೩ ಪ್ರಸಾರಾಂಗ ಕನ್ನಡ ವಿ.ವಿ, ಹಂಪಿ, ೨೦೦೬

೧೦೬. ಹಿರೇಮಠ ಆರ್.ಸಿ., ಸಿದ್ಧರಾಮೇಶ್ವರ ವಚನಗಳು, ಕರ್ನಾಟಕ ವಿ.ವಿ, ಧಾರವಾಡ, ೧೯೯೮
೧೦೭. ಹಿರೇಮಠ ಆರ್.ಸಿ., ಷಟಸ್ಥಲ ಚಕ್ರವರ್ತಿ ಚೆನ್ನಬಸವಣ್ಣನವರ ವಚನಗಳು, ಕರ್ನಾಟಕ ವಿ.ವಿ, ಧಾರವಾಡ, ೧೯೬೫

## ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧಗಳು

೧. ರಾಧಮ್ಮ, ಕೊರವ ಸಮುದಾಯದ ಮಹಿಳೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯
೨. ಉಷಾರಾಣಿ ಎ.ಪಿ., ಹೆಳವನಕಟ್ಟೆ ಗಿರಿಯಮ್ಮನ ಜೀವನ ಮತ್ತು ಕೃತಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೭
೩. ಹಂದ್ರಾಳ ಗವಿಸಿದ್ದಪ್ಪ, ಕನ್ನಡ ಸಾಹಿತ್ಯದಲ್ಲಿ ನಾದ ಮತ್ತು ಲಯದ ನಿರ್ವಚನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

# ಮಾಹಿತಿ ನೀಡಿದವರು

೧. ಕುಶಾಲಪ್ಪ ಸಣ್ಣಕ್ಕಿ(೬೫), ಕೆರೂರು, ತಾ॥ ಬದಾಮಿ
ಸಂದರ್ಶಿಸಿದ ದಿನಾಂಕ: ೧೦.೧೨.೨೦೧೨

೨. ಗಣಪತಿ ಕಂಬಾರ(೬೫), ಹೆರಕಲ್ಲ, ತಾ॥ ಬೀಳಗಿ
ಸಂದರ್ಶಿಸಿದ ದಿನಾಂಕ: ೧೪.೧೨.೨೦೧೨

೩. ಚಿದಾನಂದ ಹಲಗಲಿ(೫೫), ಲೋಕಾಪೂರ ತಾ॥ ಮುಧೋಳ
ಸಂದರ್ಶಿಸಿದ ದಿನಾಂಕ: ೨.೧.೨೦೧೦

೪. ದುಂಡಪ್ಪ ತಳವಾರ(೬೨), ತಳಗಿಹಾಳ, ತಾ॥ ಬಾಗಲಕೋಟ
ಸಂದರ್ಶಿಸಿದ ದಿನಾಂಕ: ೧೭.೧೨.೨೦೧೨

೫. ದುಂಡವ್ವ ಮುದಕವಿ(೮೦), ಲೋಕಾಪೂರ ತಾ॥ ಮುಧೋಳ
ಸಂದರ್ಶಿಸಿದ ದಿನಾಂಕ: ೨.೧.೨೦೧೦

೬. ಪಡಿಯಪ್ಪ ಭಜಂತ್ರಿ(೭೦), ಹುಲ್ಲೂರು, ತಾ॥ ಜಮಖಂಡಿ
ಸಂದರ್ಶಿಸಿದ ದಿನಾಂಕ: ೪.೪.೨೦೧೩

೭. ಬಸವರಾಜ ಭಜಂತ್ರಿ(೬೦), ಬೀಳಗಿ, ತಾ॥ ಬೀಳಗಿ
ಸಂದರ್ಶಿಸಿದ ದಿನಾಂಕ: ೮.೧೧.೨೦೧೧

೮. ಬಸವರಾಜ ಭಜಂತ್ರಿ(೫೫), ಕಮಲಾಪುರ, ತಾ॥ ಹೊಸಪೇಟೆ
ಸಂದರ್ಶಿಸಿದ ದಿನಾಂಕ: ೧೫.೪.೨೦೧೩

೯. ಯಂಕವ್ವ ಕೊರವರ(೬೨), ರಾಮದುರ್ಗ, ತಾ॥ ರಾಮದುರ್ಗ
ಸಂದರ್ಶಿಸಿದ ದಿನಾಂಕ: ೧೯.೮.೨೦೧೧

೧೦. ಯಲ್ಲವ್ವ ರೊಡ್ಡಪ್ಪನವರ(೫೮), ಲೋಕಾಪೂರ, ತಾ॥ ಮುಧೋಳ
ಸಂದರ್ಶಿಸಿದ ದಿನಾಂಕ: ೨.೧.೨೦೧೦, ೪.೭.೨೦೧೦

೧೧. ರಾಮಣ್ಣ ಭಜಂತ್ರಿ(೩೫), ಬೆಣ್ಣೂರು, ತಾ॥ ಬಾಗಲಕೋಟ
ಸಂದರ್ಶಿಸಿದ ದಿನಾಂಕ: ೧೧.೧೨.೨೦೧೨

೧೨. ಶಾಂತವ್ವ ಕೊರವರ(೪೫), ಬೀಳಗಿ, ತಾ॥ ಬೀಳಗಿ
ಸಂದರ್ಶಿಸಿದ ದಿನಾಂಕ: ೧೦.೫.೨೦೧೧

೧೩. ಶಾಂತವ್ವ ಕೊರವರ(೩೫), ಸವದತ್ತಿ, ತಾ॥ ರಾಮದುರ್ಗ
ಸಂದರ್ಶಿಸಿದ ದಿನಾಂಕ: ೧೬.೩.೨೦೧೧

೧೪. ಶಾಂತವ್ವ ಕೊರವರ(೪೫), ರಾಮದುರ್ಗ, ತಾ॥ ರಾಮದುರ್ಗ
ಸಂದರ್ಶಿಸಿದ ದಿನಾಂಕ: ೧೯.೮.೨೦೧೧

೧೫. ಶಾಂತವ್ವ ಕೊರವರ(೩೩), ರಾಮದುರ್ಗ, ತಾ॥ ರಾಮದುರ್ಗ
ಸಂದರ್ಶಿಸಿದ ದಿನಾಂಕ: ೩.೪.೨೦೧೪

೧೬. ಶಿವಾನಂದ ಶೆಲ್ಲಿಕೇರಿ(೩೦), ಎಂಡಿಗೇರಿ, ತಾ॥ ಬದಾಮಿ
ಸಂದರ್ಶಿಸಿದ ದಿನಾಂಕ: ೧೦.೧೨.೨೦೧೨

೧೭. ಶೇಖರ ಗೊಳಸಂಗಿ(೩೦), ನಾಗರಾಳ
ಸಂದರ್ಶಿಸಿದ ದಿನಾಂಕ: ೨೦.೧೧.೨೦೧೨

೧೮. ಶೇಷಪ್ಪಯ್ಯ ಸ್ವಾಮಿಗಳು(೬೦), ದಿಗಂಬರೇಶ್ವರ ಮಠ, ನಾಗರಾಳ
ಸಂದರ್ಶಿಸಿದ ದಿನಾಂಕ: ೨೦.೧೧.೨೦೧೨

೧೯. ಸುಹಾಸಿನಿ ಕೊರವರ(೨೨), ರಾಮದುರ್ಗ, ತಾ॥ ರಾಮದುರ್ಗ
ಸಂದರ್ಶಿಸಿದ ದಿನಾಂಕ: ೧೯.೮.೨೦೧೧

೨೦. ಹನಮಂತರಾಯ ಕಂಠಿ(೮೦), ನಾಗರಾಳ, ತಾ॥ ಬೀಳಗಿ
ಸಂದರ್ಶಿಸಿದ ದಿನಾಂಕ: ೯.೧೦.೨೦೧೦

೨೧. ಹುಲಗೆಮ್ಮ(೭೦), ಹುಲಿಗಿ, ತಾ॥ ಕೊಪ್ಪಳ
ಸಂದರ್ಶಿಸಿದ ದಿನಾಂಕ: ೨೩.೪.೨೦೧೩

# ಭೇಟಿ ಮಾಡಿದ ತಜ್ಞರು

೧. ಅರ್ಜುನ್ ಕೊರಟಕರ್, ಜಮಖಂಡಿ – ಸಂದರ್ಶಿಸಿದ ದಿನಾಂಕ: ೧೦.೨.೨೦೧೩

೨. ಕಲಬುರ್ಗಿ ಎಂ.ಎಂ., ಧಾರವಾಡ– ಸಂದರ್ಶಿಸಿದ ದಿನಾಂಕ: ೨೧.೭.೨೦೧೦

೩. ಗಂಗಾಧರ ದೈವಜ್ಞ, ಕನ್ನಡ ವಿ.ವಿ. ಹಂಪಿ– ಸಂದರ್ಶಿಸಿದ ದಿನಾಂಕ: ೨೭.೫.೨೦೧೪

೪. ಚಲುವರಾಜು, ಕನ್ನಡ ವಿ.ವಿ. ಹಂಪಿ– ಸಂದರ್ಶಿಸಿದ ದಿನಾಂಕ: ೨೭.೫.೨೦೧೪

೫. ನಾಗರಾಜ ನಾಡಗೌಡ, ಹುನಗುಂದ– ಸಂದರ್ಶಿಸಿದ ದಿನಾಂಕ: ೧೦.೩.೨೦೧೩

೬. ಪಾಟೀಲ ವಿ.ಎಲ್., ಕ.ವಿ.ವಿ. ಧಾರವಾಡ– ಸಂದರ್ಶಿಸಿದ ದಿನಾಂಕ: ೦೪.೬.೨೦೧೪

೭. ಮಂಜುನಾಥ ಬೇವಿನಕಟ್ಟಿ, ಕನ್ನಡ ವಿ.ವಿ. ಹಂಪಿ– ಸಂದರ್ಶಿಸಿದ ದಿನಾಂಕ: ೨೭.೫.೨೦೧೪

೮. ಮೀನಾಕ್ಷಿ ಡಿ., ಕನ್ನಡ ವಿ.ವಿ., ಹಂಪಿ– ಸಂದರ್ಶಿಸಿದ ದಿನಾಂಕ: ೨೭.೫.೨೦೧೪

೯. ರವೀಂದ್ರನಾಥ ಕೆ., ಕನ್ನಡ ವಿ.ವಿ, ಹಂಪಿ–ಸಂದರ್ಶಿಸಿದ ದಿನಾಂಕ: ೨೮.೬.೨೦೧೦

೧೦. ರಹಮತ್ ತರೀಕೆರೆ, ಕನ್ನಡ ವಿ.ವಿ, ಹಂಪಿ–ಸಂದರ್ಶಿಸಿದ ದಿನಾಂಕ: ೨೧.೬.೨೦೧೧

೧೧. ಲಕ್ಷ್ಮಣ್ ತೆಲಗಾವಿ, ಕನ್ನಡ ವಿ.ವಿ, ಹಂಪಿ– ಸಂದರ್ಶಿಸಿದ ದಿನಾಂಕ: ೨೪.೬.೨೦೧೧

೧೨. ವಿಶ್ವನಾಥ ಮಹಾಪುರುಷ, ಬಾಗಲಕೋಟ–ಸಂದರ್ಶಿಸಿದ ದಿನಾಂಕ: ೦೬.೫.೨೦೧೩

೧೩. ಶಾಂತಾ ಇಮ್ರಾಪೂರ, ಕ.ವಿ.ವಿ., ಧಾರವಾಡ – ಸಂದರ್ಶಿಸಿದ ದಿನಾಂಕ: ೪.೬.೨೦೧೪

೧೪. ಶೀಲಾಕಾಂತ ಪತ್ತಾರ, ಬದಾಮಿ– ಸಂದರ್ಶಿಸಿದ ದಿನಾಂಕ: ೧೬.೫.೨೦೧೩

೧೫. ಶ್ರೀರಾಮ ಇಟ್ಟಣ್ಣವರ, ಬೀಳಗಿ – ಸಂದರ್ಶಿಸಿದ ದಿನಾಂಕ: ೧೦.೯.೨೦೧೦

೧೬. ಶೈಲಜಾ ಹಿರೇಮಠ, ಕನ್ನಡ ವಿ.ವಿ, ಹಂಪಿ–ಸಂದರ್ಶಿಸಿದ ದಿನಾಂಕ: ೨೭.೫.೨೦೧೪

೧೭. ಸಂಗಮೇಶ ಕಲ್ಯಾಣಿ, ಮುಧೋಳ– ಸಂದರ್ಶಿಸಿದ ದಿನಾಂಕ: ೧೫.೧೨.೨೦೧೦

೧೮. ಸಂಗಮೇಶ ಬಿರಾದಾರ, ಜಮಖಂಡಿ– ಸಂದರ್ಶಿಸಿದ ದಿನಾಂಕ: ೧೦.೨.೨೦೧೩

೧೯. ಸಿಂಫೆ ಬಿ.ಎಸ್., ಬೀಳಗಿ – ಸಂದರ್ಶಿಸಿದ ದಿನಾಂಕ: ೨೦.೩.೨೦೧೨

೨೦. ಹಿರೇಮಠ ಬಿ.ಕೆ., ಬಾಗಲಕೋಟ– ಸಂದರ್ಶಿಸಿದ ದಿನಾಂಕ: ೧೮.೪.೨೦೧೩





ಶ್ರೀಕೃಷ್ಣ ಪಾರಿಜಾತದ ಕೊರವಂಜಿ ಪಾತ್ರದಲ್ಲಿ
ನಾಡೋಜ ಯಲ್ಲವ್ವ ರೊಡ್ಡಪ್ಪನವರ

# ಕೊರವಂಜಿಯ ವಿವಿಧ ರೂಪಗಳು







ಕಣಿ ಹೇಳುವಾಗ ಕೊರವಂಜಿ ಬಳಸುವ ಕವಡೆ ಬುಟ್ಟಿ



ಕಣಿ ಹೇಳಲು ಹೊರಟ ಕೊರವಂಜಿ

